ಪ್ರತಿಭಾವಂತ ಸಂಸದೀಯ ಪಟುಗಳ ಬದುಕು-ಬರಹಮಾಲಿಕೆ

# ಕೆ. ಎಚ್. ಪಾಟೀಲ್

ರಚನೆ :

ಡಾ. ಎಂ.ಕೆ. ಭಂಡಿ

ಕೆ. ವಾಮನ್

ಪ್ರಕಟಣೆ :

ಗ್ರಂಥಾಲಯ ಉಪಸಮಿತಿ

ಕರ್ನಾಟಕ ವಿಧಾನ ಸಭೆ ಸಚಿವಾಲಯ,

ವಿಧಾನ ಸೌಧ, ಬೆಂಗಳೂರು - 560 001.

K.H. PATIL : Prathibhavantha Samsadiya Patugala Baduku Baraha Malike (Eminent Parliamentarian Series) Written by Dr. M.K. Bhandi, and K. Vaman, Published by Karnataka Legislative Assembly Secretariat, Vidhana Soudha, Bangalore - 01.

Page - 140+9

Rupees - 15/-



First Edition, June, 2002.

Number of Copies : 2,000

Printed and Designed by :
Government Printing Press,
Bangalore-01.

ಕೆ.ಹೆಚ್. ಪಾಟೀಲ್ : ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ ಮೂಲ ಕೃತಿ : ಡಾ : ಎಂ.ಕೆ. ಭಂಡಿ ಮತ್ತು ಕೆ. ವಾಮನ್, ಪ್ರಕಟಣೆ : ಕರ್ನಾಟಕ ವಿಧಾನಸಭೆ ಸಚಿವಾಲಯ, ವಿಧಾನ ಸೌಧ, ಬೆಂಗಳೂರು.

ಪುಟ ಸಂಖ್ಯೆ : 140 + 9

ಬೆಲೆ ರೂ : 15/-



ಮೊದಲನೆ ಮುದ್ರಣ : ಜೂನ್, 2002

ಪ್ರತಿಗಳು : 2,000

ಮುಖ ಪುಟ ವಿನ್ಯಾಸ ಮತ್ತು ಮುದ್ರಣ :
ಸರ್ಕಾರಿ ಮುದ್ರಣಾಲಯ,
ಬೆಂಗಳೂರು -560 001

# ಪೀಠಿಕೆ

ದೇಶದ ಸ್ವಾತಂತ್ರ ಸುವರ್ಣ ಮಹೋತ್ಸವದ ಆಚರಣೆಯ ಅಂಗವಾಗಿ ಈ ದೇಶಕ್ಕಾಗಿ ದುಡಿದ ಅಗ್ರಮಾನ್ಯ ಸಂಸದೀಯ ಪಟುಗಳಾಗಿ ಕೊಡುಗೆಯನ್ನು ನೀಡಿರುವ ಮಹನೀಯರನ್ನು ಸ್ಮರಿಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಈಗಾಗಲೇ ಲೋಕಸಭಾ ಕಾರ್ಯಾಲಯದವರು ಇಂತಹ ಪ್ರತಿಭಾವಂತ ಸಂಸದೀಯ ಪಟುಗಳ ಬಗ್ಗೆ ಅನೇಕ ಕಿರುಹೊತ್ತಿಗೆಗಳನ್ನು ಹಿಂದಿ, ಹಾಗೂ ಆಂಗ್ಲಭಾಷೆಯಲ್ಲಿ ಹೊರತಂದಿರುತ್ತಾರೆ. ಅವುಗಳಲ್ಲಿ ರಾಂಮನೋಹರ ಲೋಹಿಯಾ, ಡಾ॥ ಬಿ.ಆರ್. ಅಂಬೇಡ್ಕರ್, ಡಾ॥ ಶಾಂಪ್ರಸಾದ್ ಮುಖರ್ಜಿ, ಡಾ॥ ರಾಜೇಂದ್ರ ಪ್ರಸಾದ್ ಮೊದಲಾದ ಗಣ್ಯರ ಕಿರುಹೊತ್ತಿಗೆಯನ್ನು ನಾವು ಕನ್ನಡದಲ್ಲಿ ಹೊರತಂದಿರುವ ಸಂತೋಷಕರ ವಿಷಯವನ್ನು ಉಲ್ಲೇಖಿಸ ಬಯಸುತ್ತೇವೆ.

ಹಾಗೆಯೇ, ರಾಜ್ಯದ ಸಂಸದೀಯ ಪಟುಗಳಾದ ಅನೇಕ ಮಹನೀಯರ ಕುರಿತು ಕಿರುಹೊತ್ತಿಗೆಗಳನ್ನು ಸಿದ್ದಪಡಿಸಿ ಪ್ರಕಟಿಸುವ ಯೋಜನೆಯನ್ನು ಕರ್ನಾಟಕ ವಿಧಾನ ಮಂಡಲವು ಹಮ್ಮಿಕೊಂಡಿದ್ದು, ಈ ಕಾರ್ಯವನ್ನು ವಿಧಾನ ಸಭೆಯ ಸದಸ್ಯರಾದ ಶ್ರೀ ಬಿ.ಬಿ. ಶಿವಪ್ಪನವರ ಅಧ್ಯಕ್ಷತೆಯಲ್ಲಿ ರಚಿತವಾದ ವಿಧಾನ ಮಂಡಲದ ಗ್ರಂಥಾಲಯ ಉಪ ಸಮಿತಿಗೆ ವಹಿಸಲಾಗಿತ್ತು. ಈ ಉಪ ಸಮಿತಿಯು ಕಾರ್ಯಪ್ರವೃತ್ತವಾಗಿ ರಾಜ್ಯದ ವಿಶ್ವವಿದ್ಯಾನಿಲಯಗಳ ವಿದ್ವಾಂಸರ ಸಹಕಾರದಿಂದ ಈ ಯೋಜನೆಯನ್ನು ಕಾರ್ಯಗತಗೊಳಿಸಲು ನಿರ್ಧರಿಸಿತು.

ಈ ಪ್ರತಿಭಾವಂತ ಸಂಸದೀಯ ಪಟುಗಳ ಮಾಲಿಕೆಯಲ್ಲಿ ಈಗಾಗಲೇ ಶ್ರೀ ಕೆಂಗಲ್ ಹನುಮಂತಯ್ಯ, ಶ್ರೀ ಶಾಂತವೇರಿ ಗೋಪಾಲಗೌಡ, ಶ್ರೀ ಎಸ್. ನಿಜಲಿಂಗಪ್ಪ, ಶ್ರೀ ಕೆ.ಸಿ. ರೆಡ್ಡಿ, ಶ್ರೀ ದೇವರಾಜ ಅರಸ್ ಹಾಗೂ ಇನ್ನೂ ಹಲವು ಗಣ್ಯರ ಬಗೆಗಿನ ಪುಸ್ತಕಗಳನ್ನು ಹೊರತರಲಾಗಿದೆ.

ಈಗ ಮಂಗಳೂರು ವಿಶ್ವವಿದ್ಯಾಲಯದ ಗ್ರಂಥಪಾಲಕರಾದ ಡಾ॥ ಎಂ.ಕೆ. ಭಂಡಿ ಮತ್ತು ಸಹಾಯಕ ಗ್ರಂಥಪಾಲಕರಾದ ಶ್ರೀ ಕೆ. ವಾಮನ್, ಇವರು ರಚಿಸಿರುವ, ರಾಜ್ಯದ ಹಿರಿಯ ಸಂಸದೀಯ ಪಟುವಾಗಿದ್ದ ಶ್ರೀ ಕೆ.ಎಚ್. ಪಾಟೀಲರು ಅವರ ಬಗೆಗಿನ ಪುಸ್ತಕವನ್ನು ತಮ್ಮ ಮುಂದಿಡಲು ಹೆಮ್ಮೆ ಎನಿಸುತ್ತದೆ. ಈ ಪುಸ್ತಕವನ್ನು ರಚಿಸಿದ ಲೇಖಕರಿಗೆ ಹಾಗೂ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೂ ಹಾಗೂ ಉಪ ಸಮಿತಿಯ ಸದಸ್ಯರುಗಳಿಗೂ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ರಾಜ್ಯದ ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಕಿರುಹೊತ್ತಿಗೆಯು ಮಾನ್ಯ ಸದಸ್ಯರುಗಳಿಗೆ ಮತ್ತು ಸಂಶೋಧಕರಿಗೆ ಹಾಗೂ ಸಾಮಾನ್ಯ ಓದುಗರಿಗೆ ಸಂಸದೀಯ ವಿಷಯಗಳಲ್ಲಿ ಹೆಚ್ಚಿನ ಅನುಭವ ನೀಡುತ್ತವೆ ಮತ್ತು ಉಪಯುಕ್ತವಾಗುತ್ತವೆಂದು ಭಾವಿಸುತ್ತೇವೆ.

ಬಿ.ಎಲ್. ಶಂಕರ್
ಸಭಾಪತಿ
ಕರ್ನಾಟಕ ವಿಧಾನ ಪರಿಷತ್ತು

ಎಂ.ವಿ. ವೆಂಕಟಪ್ಪ
ಸಭಾಧ್ಯಕ್ಷರು
ಕರ್ನಾಟಕ ವಿಧಾನ ಸಭೆ

# ಅರಿಕೆ

ಕರ್ನಾಟಕ ರಾಜ್ಯದ ವಿಧಾನಮಂಡಲವು ರಾಜ್ಯದ ಪ್ರತಿಭಾವಂತ ಸಂಸದೀಯ ಪಟುಗಳ ಕುರಿತು ಬದುಕು-ಬರಹ ಮಾಲಿಕೆಯಲ್ಲಿ ಕಿರುಹೊತ್ತಿಗೆಗಳನ್ನು ಪ್ರಕಟಿಸಲು ತೀರ್ಮಾನಿಸಿದ್ದು ನಿಜಕ್ಕೂ ಶ್ಲಾಘನೀಯವಾದ ಕಾರ್ಯ. ಶಾಸಕಾಂಗಗಳಲ್ಲಿ ಸೇವೆ ಸಲ್ಲಿಸಿದ ಪ್ರತಿಭಾವಂತರ ದೂರದರ್ಶಿ ವಿಚಾರಗಳು ಮತ್ತು ಅನುಭವಗಳನ್ನೊಳಗೊಂಡ ಮಾಹಿತಿಗಳ ಈ ಪ್ರಕಟಣೆಯು ಅವರ ಉತ್ತರಾಧಿಕಾರಿಗಳಿಗೆ ದಾರಿದೀಪಗಳಾಗುವುದರಲ್ಲಿ ಸಂದೇಹವಿಲ್ಲ. ಈ ಯೋಜನೆಯಂತೆ ಶ್ರೀ ಕೆ.ಎಚ್. ಪಾಟೀಲರನ್ನು ಕುರಿತು ಈ ಕಿರುಹೊತ್ತಿಗೆ ಸಿದ್ಧಪಡಿಸುವ ಜವಾಬ್ದಾರಿ ನಮ್ಮ ಪಾಲಿಗೆ ಬಂದಿತು.

ಶ್ರೀ ಕೆ.ಎಚ್. ಪಾಟೀಲರು ಸುಮಾರು ನಾಲ್ಕು ದಶಕಕ್ಕೂ ಹೆಚ್ಚು ಕಾಲ ರಾಜಕೀಯ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಕರ್ನಾಟಕ ಸರಕಾರದ ವಿವಿಧ ಇಲಾಖೆಗಳಲ್ಲಿ ಮಂತ್ರಿಗಳಾಗಿ, ವಿರೋಧ ಪಕ್ಷದ ನಾಯಕರಾಗಿ ಹಾಗೂ ಶಾಸಕರಾಗಿ ನಿರ್ವಹಿಸಿದ ಪಾತ್ರ ಹಾಗೂ ಸಹಕಾರಿ ರಂಗದಲ್ಲಿ ಅಪೂರ್ವ ಸೇವೆ ಸಲ್ಲಿಸಿ "ಸಹಕಾರಿ ಭೀಷ್ಮ" ಎಂಬ ಹೆಸರನ್ನು ಗಳಿಸಿ ಆ ಮೂಲಕ ರಾಜ್ಯಕ್ಕೆ ಹಾಗೂ ರಾಷ್ಟ್ರಕ್ಕೆ ಅವರು ನೀಡಿದ ಕೊಡುಗೆ ಚಿರಸ್ಮರಣೀಯ. ಅವರು ಸಲ್ಲಿಸಿದ ಸೇವೆ ಅವರ ಶ್ರಮದಿಂದ ಹುಟ್ಟಿ ಬೆಳೆದ ಸಂಘಸಂಸ್ಥೆಗಳು ಹಾಗೂ ಅವರು ವಿಧಾನ ಸಭೆಯಲ್ಲಿ ಚರ್ಚಿಸಿದ್ದ ವಿಷಯಗಳನ್ನು ಸಾಕಷ್ಟು ಸಂಗ್ರಹಿಸಿ ಇಲ್ಲಿ ನೀಡಿದ್ದೇವೆ. ಈ ಕಿರು ಹೊತ್ತಿಗೆ ರಾಜ್ಯದ ಹಾಗೂ ದೇಶದ ಎಲ್ಲಾ ಪ್ರಜೆಗಳಿಗೂ, ಶಾಸಕರಿಗೂ ಒಂದು ಮಾರ್ಗದರ್ಶಿಯಾದೀತು ಎಂದು ನಂಬಿದ್ದೇವೆ.

ಈ ಕಿರುಹೊತ್ತಿಗೆ ಹೊರಬರಲು ಕಾರಣರಾದ ಮಾನ್ಯ ಸಭಾಪತಿಗಳು, ವಿಧಾನ ಪರಿಷತ್ತು, ಮಾನ್ಯ ಸಭಾಧ್ಯಕ್ಷರು ವಿಧಾನಸಭೆ ಹಾಗೂ ವಿಧಾನಮಂಡಲ ಗ್ರಂಥಾಲಯ ಉಪಸಮಿತಿಗೆ ನಾವು ಕೃತಜ್ಞತೆ ಸಲ್ಲಿಸುತ್ತೇವೆ. ಸಮರ್ಪಕ ದಾಖಲೆ ಒದಗಿಸಿದ ಶ್ರೀ ಜೆ.ಕೆ. ಜಮಾದಾರರನ್ನು ಇಲ್ಲಿ ಸ್ಮರಿಸುತ್ತೇವೆ. ನಮ್ಮನ್ನು ಪ್ರೋತ್ಸಾಹಿಸಿ ಸಹಕರಿಸಿದ ಮಂಗಳೂರು ವಿಶ್ವವಿದ್ಯಾನಿಲಯದ ಸನ್ಮಾನ್ಯ ಕುಲಪತಿಗಳಾದ ಪ್ರೊ. ಎಸ್. ಗೋಪಾಲ್ ಹಾಗೂ ಕುಲಸಚಿವರಾದ ಡಾ|| ಜನಾರ್ಧನ್ ಅವರಿಗೂ ನಾವು ಋಣಿಗಳಾಗಿದ್ದೇವೆ.

ಈ ಕಿರು ಹೊತ್ತಿಗೆ ಹೊರಬರಲು ಸಹಕರಿಸಿದ ಡಾ|| ಓ.ಡಿ. ಹೆಗ್ಗಡೆ, ಪ್ರಾಧ್ಯಾಪಕರು, ಅರ್ಥಶಾಸ್ತ್ರ ವಿಭಾಗ, ಮೈಸೂರು ವಿಶ್ವವಿದ್ಯಾನಿಲಯ ಹಾಗೂ ಡಾ|| ಎಮ್.ಎಲ್. ಧರ್ಮ, ಪ್ರವಾಚಕರು, ರಾಜಕೀಯಶಾಸ್ತ್ರ ವಿಭಾಗ, ಮಂಗಳೂರು ವಿಶ್ವವಿದ್ಯಾನಿಲಯ ಅವರನ್ನು ಸ್ಮರಿಸುತ್ತೇವೆ. ಬೆರಳಚ್ಚುಗಾರರಾಗಿ ಸಹಕರಿಸಿದ ಶ್ರೀ ಶಶಿಧರ ಕಿಣಿ, ಶ್ರೀಮತಿ ಐರಿನ್ ಪಿಂಟೊ ಹಾಗೂ ಕು. ಜೆನೆಟ್ ಅವರನ್ನು ಈ ಸಂದರ್ಭದಲ್ಲಿ ಸ್ಮರಿಸುತ್ತೇವೆ. ನಮಗೆ ಸಮರ್ಪಕವಾದ ದಾಖಲೆಗಳನ್ನು ಒದಗಿಸಿದ ಎಲ್ಲರಿಗೂ ಮತ್ತೊಮ್ಮೆ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ.

**ಡಾ|| ಎಂ.ಕೆ. ಭಂಡಿ**

**ಕೆ. ವಾಮನ್**

ಮಂಗಳೂರು ವಿಶ್ವವಿದ್ಯಾನಿಲಯ

ಮಂಗಳಗಂಗೋತ್ರಿ.

# ಪ ರಿ ವಿ ಡಿ

ಪುಟ
ಸಂಖ್ಯೆ

## ಭಾಗ-1



## ಭಾಗ-2

## ಭಾಗ-3

## ಭಾಗ - 1

# ಶ್ರೀ ಕೆ.ಎಚ್. ಪಾಟೀಲರ ವ್ಯಕ್ತಿಚಿತ್ರ

# ಭಾಗ - 1

## ಕೆ.ಎಚ್. ಪಾಟೀಲರ ವ್ಯಕ್ತಿ ಚಿತ್ರ

ಉತ್ತರ ಕರ್ನಾಟಕ ಭಾಗದ ಕಾರವಾರ-ಬಳ್ಳಾರಿ ಹೆದ್ದಾರಿ ಮೇಲೆ ಗದಗ ಪಟ್ಟಣದಿಂದ 10 ಕಿಲೋಮಿಟರ್ ದೂರದಲ್ಲಿರುವ ಪುಟ್ಟ ಹಳ್ಳಿ ಹುಲಕೋಟಿ. ಈ ಗ್ರಾಮದ ಹೆಚ್ಚಿನ ಜನರು ಒಕ್ಕಲುತನವನ್ನೇ ತಮ್ಮ ಮೂಲ ಕಸಬನ್ನಾಗಿ ಮಾಡಿಕೊಂಡಿದ್ದಾರೆ. ಇಲ್ಲಿರುವ ಭೂಮಿಗಳು ಅತೀ ಫಲವತ್ತಿನಿಂದ ಕೂಡಿವೆ. ಜೋಳ, ಗೋಧಿ, ಶೇಂಗಾ, ಕಡಲೆ, ಮೆಣಸಿನಕಾಯಿ, ಈರುಳ್ಳಿ, ಹತ್ತಿ ಮುಂತಾದವು ಇಲ್ಲಿಯ ಮುಖ್ಯ ಬೆಳೆಗಳಾಗಿವೆ. ಗ್ರಾಮದ ಒಟ್ಟು ಭೂ ವಿಸ್ತೀರ್ಣ 5,862 ಚ.ಕಿ. ಅದರಲ್ಲಿ 5,508 ಚ.ಕಿ. ಸಾಗುವಳಿ ಭೂಮಿಯಾಗಿದೆ. ಇಲ್ಲಿಯ ಕೃಷಿಯು ಹೆಚ್ಚು ಮಳೆಯನ್ನೇ ಅವಲಂಬಿತವಾಗಿದೆ. ಹುಲಕೋಟಿಯು ರಾಷ್ಟ್ರಮಟ್ಟದಲ್ಲಿ ಖ್ಯಾತಿ ಗಳಿಸಿದೆ. ಇದಕ್ಕೆ ನಾಡಿನ ಹಿರಿಯ ಸಹಕಾರಿ ಧುರೀಣ ದಿ. ಶ್ರೀ ಕೆ.ಎಚ್. ಪಾಟೀಲರು ಕಾರಣ ಪುರುಷರು.

ಇಡೀ ಜಗತ್ತಿನಲ್ಲಿಯೇ ಸಹಕಾರ ಎಂಬುದು ಒಂದು ದೊಡ್ಡ ಶಕ್ತಿ. ಮಾನವನು ಜನ್ಮ ತಾಳಿ ತನ್ನ ಅಂತ್ಯ ಕಾಣುವವರೆಗೂ ಆತನಿಗೆ ಸಹಕಾರ ಅತೀ ಅಗತ್ಯ. ಸಹಕಾರ ತತ್ವದಿಂದ ಸಮಾಜದ ದೊಡ್ಡ ದೊಡ್ಡ ಸಮಸ್ಯೆಗಳನ್ನು ಸುಲಲಿತವಾಗಿ ಬಗೆಹರಿಸಲು ಸಾಧ್ಯ. ಈ ಕಾರಣದಿಂದಲೇ ಪ್ರಥಮವಾಗಿ ಇಂಗ್ಲೇಂಡಿನಲ್ಲಿ ಬರಗಾಲ ಪೀಡಿತವಾದ ಕಾಲದಲ್ಲಿ ಸಹಕಾರ ತತ್ವದ ಮೂಲಕ ಹಸಿವನ್ನು ನೀಗಿಸಿ ಬಡತನದಿಂದ ಕಂಗಲಾದ ಸಮಾಜವನ್ನು ಮೇಲೆತ್ತಲು ಸಾಧ್ಯವಾಯಿತು. ಅಂದಿನಿಂದ ಸಹಕಾರವೆಂಬುದು ಒಂದು "ತತ್ವ" ವಾಗಿ ಅಂಗೀಕರಿಸಲ್ಪಟ್ಟಿತು.

ದಿ. ಶ್ರೀ ಕೆ.ಎಚ್. ಪಾಟೀಲರು ಹುಲಕೋಟಿಯ ಸಹಕಾರದ ಜನಕರು. ದಿ. ಶ್ರೀ ಪಾಟೀಲರು ಹೇಗೆ ಬೆಳೆದರೋ ಹಾಗೆಯೇ ಹುಲಕೋಟಿಯ ಸಹಕಾರ ಅಂಧೋಲನವು ಅಭಿವೃದ್ಧಿ ಮತ್ತು ಪ್ರಗತಿಪಥದತ್ತ ನಡೆಯಿತು. ದಿ. ಕೆ.ಎಚ್. ಪಾಟೀಲರು ಓರ್ವ ಕನಸುಗಾರ. ಹಾಗೂ ದೂರದೃಷ್ಟಿಯ ಮುತ್ಸದ್ದಿ. ತನ್ನೀ ಕನಸುಗಳನ್ನು ನನಸಾಗಿಸಲು ಅವಿರತವಾಗಿ ಶ್ರಮಿಸಿದ ಶಿಲ್ಪಿ.

ಸಾವಿರ ಸಾವಿರ ಪಟ್ಟು ಕೆಲಸಗಾರರಿಗೆ ಉದ್ಯೋಗ ಸೃಷ್ಟಿಸಿರುವ ಕೆ.ಎಚ್. ಪಾಟೀಲರು ರೈತರಿಗಾಗಿ ಶೋಷಣೆ ಮುಕ್ತ ವ್ಯವಸ್ಥೆ ಬಳಸಿರುವ ದೃಷ್ಟಾರ. ದೈಹಿಕವಾಗಿ, ಮಾನಸಿಕವಾಗಿ ಸಬಲನಾದ ಶೋಷಣೆಯಿಂದ ಸಂಪೂರ್ಣವಾಗಿ ಮುಕ್ತನಾದ ಪ್ರಜ್ಞಾವಂತ ರೈತನನ್ನು ರೂಪಿಸುವುದೇ ದಿ. ಶ್ರೀ ಕೆ.ಎಚ್. ಪಾಟೀಲರ ಗುರಿಯಾಗಿತ್ತು. ಈ ಗುರಿ ಸಾಧನೆಗೆ ಅವರು ಅತ್ಯಂತ ಸುವ್ಯವಸ್ಥಿತ ಸಹಕಾರಿ ಜಾಲ ನಿರ್ಮಿಸಿದ್ದಾರೆ.

ಹುಲಕೋಟಿ ಪರಿಸರದಲ್ಲಿರುವ ಪ್ರತಿಯೊಂದು ಸಂಸ್ಥೆಯ ಜೀವ ಹೃದಯ ಕೆ.ಎಚ್. ಪಾಟೀಲರು. ಇಲ್ಲಿಯ ಎಲ್ಲ ರಚನಾತ್ಮಕ ಕ್ರಿಯಾತ್ಮಕ ಚಟುವಟಿಕೆಗಳ ಚೈತನ್ಯ ಶ್ರೀ ಕೆ.ಎಚ್. ಪಾಟೀಲರು.

ಶ್ರೀ ಕೆ.ಎಚ್. ಪಾಟೀಲರ ಸ್ವಗ್ರಾಮ ಹುಲಕೋಟಿ. ಮಾಜಿ ರಾಜ್ಯಪಾಲರಾದ ಶ್ರೀ ಗೋವಿಂದ ನಾರಾಯಣರವರ ದೃಷ್ಟಿಯಲ್ಲಿ ಈ ಹುಲಕೋಟಿ 'ವಂಡರ್ ಲ್ಯಾಂಡ', ಸಹಕಾರ ರಂಗದ ಒಳಪದರು ಬಲ್ಲ ರಾಜ್ಯದ ಹಿಂದಿನ ಸಹಕಾರ ಮಂತ್ರಿ ಶ್ರೀ ಆರ್.ಎಲ್. ಜಾಲಪ್ಪ ಅವರ ದೃಷ್ಟಿಯಲ್ಲಿ ಹುಲಕೋಟಿ "ಸಹಕಾರಿ ರಂಗದ ಓಯಾಸಿಸ್", ಹಿರಿಯ ಸಹಕಾರಿಗಳಿಗೆ ಹುಲಕೋಟಿ ಸಹಕಾರಿ ಕಾಶಿ. ಕವಿಗಳ ದೃಷ್ಟಿಯಲ್ಲಿ ಹುಲಕೋಟಿ ಸಹಕಾರ ರಂಗದ ಭದ್ರಕೋಟೆ.

ಶ್ರೀ ಕೆ.ಎಚ್. ಪಾಟೀಲರು ಹುಟ್ಟಿದ್ದು ಗದಗದಲ್ಲಿ, ಬೆಳೆದದ್ದು ಹುಲಕೋಟಿಯಲ್ಲಿ, ಗದಗ ಶ್ರೀ ವೀರನಾರಾಯಣ ನೆಲೆಸಿರುವ ಪುಣ್ಯಭೂಮಿ. ಆದಿದೈವ ಶ್ರೀ ತ್ರಿಕೋಟೇಶ್ವರ, ಶ್ರೀ ತೋಂಟದ ಸಿದ್ದಲಿಂಗ ಯತಿಗಳ ತಪೋಭೂಮಿ. ಶೈವರ ಶ್ರೀ ತ್ರಿಕೋಟೇಶ್ವರ ದೇವಸ್ಥಾನ. ವೈಷ್ಣವರ ಶ್ರೀ ವೀರನಾರಾಯಣ ದೇವಸ್ಥಾನ, ಮುಸ್ಲಿಮರ ಜುಮ್ಮಾಮಸೀದಿ ಇವುಗಳ ಅನ್ಯೋನ್ಯತೆಯ ಗದಗ-ಬೆಟಗೇರಿ ಅವಳಿನಗರ ಕೋಮುಸೌಹಾರ್ದತೆಗೆ ನಾಡಿನಲ್ಲೇ ಮಾದರಿಯಾಗಿದೆ. ಶ್ರೀ ಪಂಚಾಕ್ಷರಿ ಗವಾಯಿಗಳ, ಶ್ರೀ ಪುಟ್ಟರಾಜ ಗವಾಯಿಗಳ ಕರ್ಮಭೂಮಿ. ಕವಿ ಕುಮಾರವ್ಯಾಸನಿಗೆ ಸ್ಫೂರ್ತಿ ನೀಡಿದ ತಾಣವಿದು. ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು ಗೀತೆ ರಚನೆಗೆ ಕವಿ ಹುಯಿಲಗೋಳ ನಾರಾಯಣರವರಿಗೆ ಪ್ರೇರಣೆ ನೀಡಿದ ನೆಲವಿದು. ಈ ನೆಲದಲ್ಲಿ ಸುವರ್ಣವಿದೆ. ಗಾಳಿಯಲ್ಲಿ ವಿದ್ಯುತ್ತಿದೆ. ಬಿಳಿ ಬಂಗಾರ ಬೆಳೆಯುವ ಭೂಮಿ ಇದು. ವಾಣಿಜ್ಯ ಕೇಂದ್ರವೂ ಹೌದು. ಕೈಗಾರಿಕೆಗಳ ನೆಲೆಯೂ ಹೌದು.

1925 ಮಾರ್ಚ್ 16ರ ರಾತ್ರಿ ಶ್ರೀ ವೀರನಾರಾಯಣನ ಪರಿಸರದಲ್ಲಿ ಗದಗ ವಾರ್ಡ್ ನಂ. 5 ಲಬ್ಬೇರದಲ್ಲಿ ಶ್ರೀ ರಂಗನಗೌಡ ಶ್ರೀಮತಿ ನಿಂಗಮ್ಮ ದಂಪತಿಗಳಿಗೆ ಪುತ್ರ ಸಂತಾನವಾಯಿತು. ಅಂದು ಹುಲಕೋಟಿಯಲ್ಲಿ ವೈದ್ಯಕೀಯ ಸೌಲಭ್ಯಗಳಿಲ್ಲ. ಆದಕ್ಕಾಗಿ ಮಾತೋಶ್ರೀ ನಿಂಗಮ್ಮನವರ ಮೊದಲ ಹೆರಿಗೆಗೆ ಯಾವುದೇ ತೊಂದರೆಯಾಗದಿರಲಿ ಎಂದು ಗದುಗಿನಲ್ಲಿಯೇ ವಾಸ್ತವ್ಯ ಹೂಡಲಾಗಿತ್ತು. ಆಸ್ಪತ್ರೆಗಳ ಕೊರತೆಯ ಕಾಲವಾದ್ದರಿಂದ ಬಾಡಿಗೆ ಮನೆಯೊಂದರಲ್ಲಿಯೇ ಶ್ರೀ ಕೆ.ಎಚ್. ಪಾಟೀಲರ ಜನನವಾಯಿತು. ಈ ಹುಲಕೋಟಿ ಚೈತನ್ಯ ತುಂಬಿದ ಬುಗ್ಗೆ, ವ್ಯವಹಾರಿಕ ಪ್ರಜ್ಞೆ, ಎದೆಗಾರಿಕೆ, ಧಲಮಂತಿಕೆಯ ಬೆಸುಗೆ ಹೊಯ್ದ ಕುಲುಮೆ. ಹುಲಕೋಟಿ ಪುಟ್ಟ ಗ್ರಾಮವಾದರೂ ಅದು ತನ್ನ ರಚನಾತ್ಮಕ ಕೆಲಸಗಳಿಗೆ ಮೊದಲಿನಿಂದಲೂ ಪ್ರಸಿದ್ದ. ದ್ಯಾವನಗೌಡ್ರ ಮನೆತನ ಹುಲಕೋಟಿಯಲ್ಲಿಯೇ ಪ್ರಸಿದ್ಧ. ಹಳ್ಳಿಯ ಗೌಡಕಿ ಈ ಮನೆತನಕ್ಕೆ ಬಳುವಳಿ, ಗೌಡಕಿ ಈ ಮನೆತನಕ್ಕೆ ಅಹಂ ತಂದಿಲ್ಲ. ಬದಲಾಗಿ ಸೇವಾಭಾವ ತಂದಿದೆ. ಇತರರಿಗೆ ನೆರವಾಗುವುದೇ ಈ ಮನೆತನದ ಹೆಗ್ಗಳಿಕೆ. ಈ ಮನೆತನದ ಹಿರಿಯರು ಗ್ರಾಮದವರಿಗೆಲ್ಲ ಉಚಿತ ಔಷಧಿ ನೀಡುತ್ತಿದ್ದರು. ಬಡವರಿಗೆ ನೆರವಾಗುವುದರಲ್ಲಿ ಆದರಾತಿಥ್ಯದಲ್ಲಿ ಈ ಮನೆತನಕ್ಕೆ ಸರಿಸಾಟಿಯಾಗುವವರು ವಿರಳ.

ಶ್ರೀ ರಾಮಕೃಷ್ಣ ಪರಮಹಂಸರ ಪರಮ ಭಕ್ತರಾಗಿದ್ದ ಈ ಮನೆತನದ ಹಿರಿಯರಿಗೆ ಗೋಂದಾಲೆ ಮಹಾರಾಜರ, ಶ್ರೀ ಬ್ರಹ್ಮಚೈತನ್ಯ ಮಹಾರಾಜರ ಆಶೀರ್ವಾದವಿದೆ ಹಾಗೂ ಶ್ರೀ ಕಂಚಿ ಶ್ರೀಗಳ ಅನುಗ್ರಹವಿದೆ. ಬೆಂಗಳೂರಿನ ಶ್ರೀ ಕೈಲಾಸ ಆಶ್ರಮದ ಪರಮಪೂಜ್ಯ ಶ್ರೀ ಶ್ರೀ ಶ್ರೀ ತಿರುಚಿ ಶ್ರೀಗಳ ಶ್ರೀರಕ್ಷೆ ಈ ಮನೆತನಕ್ಕೆ ಇದೆ.

ಶ್ರೀ ಕೆ.ಎಚ್. ಪಾಟೀಲರ ತಂದೆ ರಂಗನಗೌಡರು ಶಿಕ್ಷಣ ಪ್ರಸಾರಕ್ಕಾಗಿ ಬಹಳವಾಗಿ ಶ್ರಮಿಸಿದವರು. ಸ್ವಾತಂತ್ರ್ಯ ಹೋರಾಟದಲ್ಲಿ ಸಕ್ರೀಯವಾಗಿ ಪಾಲ್ಗೊಂಡಿದ್ದ ಇವರು ತಮ್ಮ ಮಕ್ಕಳಿಗೆ ಸೇವಾದೀಕ್ಷೆ ನೀಡಿದರು. ಧಾರ್ಮಿಕ ಪ್ರವೃತ್ತಿಯ ಶ್ರೀ ರಂಗನಗೌಡರು ತನಗಾಗಿ ಬದುಕುವುದಕ್ಕಿಂತ ಇತರರಿಗಾಗಿ ಬದುಕುವುದು ಶ್ರೇಷ್ಠ ಎಂಬುದನ್ನು ತಮ್ಮ ಆದರ್ಶಗಳಿಂದ ಮಕ್ಕಳಿಗೆ ಮನ ಮುಟ್ಟುವಂತೆ ಹೃದಯ ತಟ್ಟುವಂತೆ ಮಾಡಿದರು. ತಾಯಿ ನಿಂಗಮ್ಮನ ಪ್ರೀತಿ, ಅನುಕಂಪ, ದಯೆ, ಧರ್ಮಭೀರು ನಡತೆ, ತಂದೆಯ ಸೇವಾಭಾವ ಬಾಲಕ ಕೃಷ್ಣ ಗೌಡನ ಮೇಲೆ ಬಹಳ ಪ್ರಭಾವ ಬೀರಿತು. ರಂಗನಗೌಡರ ಸೋದರ ಹನುಮಂತಗೌಡರಿಗೆ ಪುತ್ರ ಸಂತಾನವಿರಲಿಲ್ಲ. ಸೋದರ ಪುತ್ರನನ್ನೇ ಹನುಮಂತಗೌಡರು ದತ್ತ ತೆಗೆದುಕೊಂಡು ಮುದ್ದಿನಿಂದ ಬೆಳೆಸಿದರು. ಬಾಲ್ಯದಲ್ಲಿ ಕೃಷ್ಣಗೌಡರಿಗೆ ಇಮ್ಮಡಿ ಪ್ರೀತಿ.

ಪಾಟೀಲರು ಹುಲಕೋಟಿಯಲ್ಲಿ ಪ್ರಾಥಮಿಕ ಶಿಕ್ಷಣ ಹಾಗೂ ಗದುಗಿನ ಮುನಿಸಿಪಲ್ ಹೈಸ್ಕೂಲಿನಲ್ಲಿ ಮಾಧ್ಯಮಿಕ ಶಿಕ್ಷಣ ಮುಗಿಸಿದರು. ಮಹಾತ್ಮಾ ಗಾಂಧೀಜಿಯವರ ಯುಗದ ಅಂದಿನ ಚಲೇಜಾವ ಚಳವಳಿಯ ಕಾಲ. ಯುವಕ ಕೆ.ಎಚ್. ಪಾಟೀಲರು ಶ್ರೇಷ್ಠವಾಗ್ಮಿಯಾಗಿ ಎಲ್ಲ ಮಿತ್ರರ ಪ್ರೀತಿಗಳಿಸಿದ್ದರು. ಭಾಷಣ ಮಾಡಲು ತಾನೇ ಮೇಜನ್ನು ಹೊತ್ತು ತಂದು ಅದರ ಮೇಲೆ ನಿಂತು ನಿರರ್ಗಳವಾಗಿ ಭಾಷಣ ಮಾಡುತ್ತಿದ್ದ ಆ ಸುರದ್ರೂಪಿ ಯುವಕನ ಸಿಡಿಲಿನಂತಹ ಮಾತು ಕೇಳಿ ಮಿತ್ರರು. ಶಿಕ್ಷಕರು ಹಿಗ್ಗುತ್ತಿದ್ದರು. ಮುಂದೊಂದು ದಿನ ಈ ಹುಡುಗ ನಾಡಿನ ಹಿರಿಯ ನಾಯಕನಾಗುತ್ತಾನೆಂದು ಆಗಲೇ ಕೆಲವರಿಗೆ ಅನಿಸುತ್ತಿತ್ತು. ಹೈಸ್ಕೂಲ್ ಶಿಕ್ಷಣಕ್ಕೆ ವಿದಾಯ ಹೇಳಿದ ತರುಣ ಕೆ.ಎಚ್. ಪಾಟೀಲರು ತಮ್ಮ ಮಿತ್ರರ ಗುಂಪು ಕಟ್ಟಿಕೊಂಡು ಲೋಕ ಶಿಕ್ಷಣಕ್ಕೆ ಧುಮುಕಿದರು.

ಶ್ರೀ ಕೆ.ಎಚ್. ಪಾಟೀಲರ ಬದುಕು ವರ್ಣರಂಜಿತ. ಹಲವಾರು ಏಳುಬೀಳುಗಳನ್ನು ಕಂಡ ಸದಾ ಹೋರಾಟ ಮಾಡುವ ಹಾಗೂ ಆಹ್ವಾನಗಳೆದುರು ಸೆಟೆದು ನಿಂತು ಸೆಡ್ಡು ಹೊಡೆಯುವ ಇವರ ಗುಣ ಇವರಿಗೆ ಮಿತ್ರರನ್ನು ತಂದಿದೆ. ಹಾಗೆಯೇ ಶತ್ರುಗಳನ್ನು ಸೃಷ್ಟಿಸಿದೆ. ಸಾರ್ವಜನಿಕ ಕ್ಷೇತ್ರ ಸೇವಾರಂಗ, ಸಮಾಜದ ಏರುಪೇರುಗಳನ್ನು ಸರಿದೂಗಿಸಿದವರು, ಅಕ್ರಮ ಪದ್ಧತಿಗಳನ್ನು ತೊಡೆದು ಹಾಕಿದವರು, ಸಮಾಜದ ನ್ಯೂನತೆಗಳನ್ನು ನಿವಾರಿಸಿ ಸುಧಾರಣೆ ತಂದ ಸುಧಾರಕರು ಇವರೆಲ್ಲ ಸಾರ್ವಜನಿಕ ಮುಖಂಡರೇ. ಪಾಟೀಲರು ಇವರಲ್ಲೆಲ್ಲಾ ಪ್ರಮುಖರು. ಇವರ ಜೀವನ ಅದರಲ್ಲೂ ಸಾರ್ವಜನಿಕ ಜೀವನ ವರ್ಣರಂಜಿತವಾದುದು. ಸಾರ್ವಜನಿಕ ಕ್ಷೇತ್ರದ ಕಾರ್ಯಕರ್ತರಾಗಿ ನಾಯಕರಾಗಿದ್ದರು ಶ್ರೀ ಕೆ.ಎಚ್. ಪಾಟೀಲರು.

ಶ್ರೀ ಕೆ.ಎಚ್. ಪಾಟೀಲರು ಶ್ರೀಮಂತ ಮನೆತನದಿಂದ ಬಂದಿದ್ದರೂ ಅವರಲ್ಲಿ ಗರ್ವ ಇರಲಿಲ್ಲ. ಇವರ ಶ್ರೀಮಂತಿಕೆಯೆಂದರೆ ಇವರ ಮಿತ್ರರು. ಗೌಡರು ಹೇಳಿದಂತೆ ನಡೆದುಕೊಳ್ಳಲು, ಅವರ ಆದೇಶ ಪಾಲಿಸಲು ಸನ್ನದ್ಧರಾದ ಮಿತ್ರರ ಬಳಗವೇ ಇವರ ಬಂಡವಾಳ, ಈ ಮಿತ್ರರಿಗೆ ತಮ್ಮ ನಾಯಕನಲ್ಲಿ ಅಚಲ ವಿಶ್ವಾಸ. ಮಿತ್ರರಿಗೆಲ್ಲ ಗೌಡರದು ಸದಾ ಭೀಮರಕ್ಷೆ. ಈ ಮಿತ್ರರ ಬಳಗ ಎಂದೂ ಲಾಭ ಹಾನಿಯ ಲೆಕ್ಕಾಚಾರ ಹಾಕಿದ್ದಿಲ್ಲ. ಶ್ರೀ ಕೆ.ಎಚ್. ಪಾಟೀಲರು ಧನಬಲ ಹೊಂದಿದ್ದ ಶೋಷಕ ವರ್ಗದ ವಿರುದ್ಧ ಸಮರ ಸಾರಿದರು. ಗದಗ ಪರಿಸರದಲ್ಲಿ ಹೆಪ್ಪುಗಟ್ಟಿದ್ದ

ಪಟ್ಟಭದ್ರ, ಹಿತಾಸಕ್ತಿಗಳನ್ನೆಲ್ಲ ಮೂಲೆಗೆ ಎಸೆದರು. ಪವಾಡದೃಶ್ಯ ಕಾರ್ಯ ಮಾಡಿದ್ದರಿಂದಲೇ ಪಟ್ಟಭದ್ರ ಹಿತಾಸಕ್ತಿಗಳ ಹಾಗೂ ಪೋಷಕ ವರ್ಗದ ದ್ವೇಷವನ್ನು ಅವರು ಕೊನೆಯವರೆಗೂ ಎದುರಿಸಬೇಕಾಯಿತು. ಅವರು ಅದನ್ನು ಗಣನೆಗೆ ತೆಗೆದುಕೊಳ್ಳದೆ ಸದಾ ಹಸನ್ಮುಖಿಯಾಗಿಯೇ ಇರುತ್ತಿದ್ದರು.

ಶ್ರೀ ಕೆ.ಎಚ್. ಪಾಟೀಲರು ಹೈಸ್ಕೂಲ್ ಶಿಕ್ಷಣ ಮುಗಿಸಿ 18ರ ತಾರುಣ್ಯದಲ್ಲೇ ತಮ್ಮ ಸ್ವಗ್ರಾಮ ಹುಲಕೋಟಿಯ ಸರಪಂಚರೆಂದು ಸರ್ವಾನುಮತದಿಂದ ಆಯ್ಕೆಯಾದರು. 1972ರಲ್ಲಿ ಮಂತ್ರಿಯಾಗುವವರೆಗೆ ಸರಪಂಚರಾಗಿದ್ದ ಪಾಟೀಲರು ಗ್ರಾಮದ ಸರ್ವಾಂಗೀಣ ವಿಕಾಸ ಹೇಗೆ ಮಾಡಬೇಕೆಂಬುದಕ್ಕೆ ಮಾದರಿಯಾಗಿ ಕೆಲಸ ಮಾಡಿ ಹೆಸರು ಪಡೆದರು. ಹುಲಕೋಟಿ ಸಹಕಾರಿ ಆಂದೋಲನದ ಜನಕ ಶ್ರೀ ಕೆ.ಎಚ್. ಪಾಟೀಲರು ಎಂದರೆ ತಪ್ಪಾಗಲಾರದು. ಮಾನವನ ಇಡೀ ಸಮಾಜ ಜೀವನವು ಸಹಕಾರದ ತಳಹದಿಯ ಮೇಲೆ ನಿಂತಿದೆ, ವ್ಯಕ್ತಿಗಳು ಪರಸ್ಪರ ಸಹಕರಿಸದಿದ್ದರೆ ಸುಗಮ ಸಮಾಜ ಜೀವನ ಅಸಾಧ್ಯ. ಸುಭದ್ರ ರಾಷ್ಟ್ರ ನಿರ್ಮಾಣವೂ ಸಾಧ್ಯವಾಗುವುದಿಲ್ಲ. ನೆಮ್ಮದಿಯುತ ರಾಷ್ಟ್ರೀಯ ಜೀವನ ಲಭ್ಯವಾಗುವುದಿಲ್ಲ. ಅನುಕಂಪ, ಮೈತ್ರಿ, ಪರಸ್ಪರ ನೆರವು ಮೊದಲಾದವುಗಳೆಲ್ಲವೂ ಸಹಕಾರದ ಮೂಲಕವೇ ಸಾಧ್ಯವಾಗಬಹುದಿದ್ದು ಸಹಕಾರವು ವ್ಯಕ್ತಿಗಳ ಜೀವನದಲ್ಲಿ ಅಂತರಾಷ್ಟ್ರೀಯ ಮಟ್ಟದವರೆಗೂ ವ್ಯಾಪಿಸಿರುವುದನ್ನು ಗುರುತಿಸಬಹುದಾಗಿದೆ. ಮಹಾತ್ಮ ಗಾಂಧೀಜಿಯವರ ಅಭಿಪ್ರಾಯದಲ್ಲಿ ಸಹಕಾರಿ ಆಂದೋಲನ ಅಥವಾ ಸಹಕಾರಿ ಚಳುವಳಿಯು ಸತ್ಯ, ಅಹಿಂಸೆ ಮತ್ತು ಸ್ವಸಹಾಯದ ವರ್ಗಾತೀತ ಸಮಾಜದ ಸ್ಥಾಪನೆಗೆ ದಾರಿ. ಸಹಕಾರಿ ಆಂದೋಲನದ ಪ್ರಮುಖ ಗುರಿ ಬಂಡವಾಳಶಾಹಿ ಪದ್ಧತಿಯಲ್ಲಿ ಸಾಮಾನ್ಯವಾಗಿ ಕಂಡುಬರುವ ಶೋಷಣೆಯನ್ನು ತಡೆಗಟ್ಟುವುದು ಮತ್ತು ಜನರು ತಮ್ಮ ತಮ್ಮ ಉಳಿತಾಯ, ಶ್ರಮ ಹಾಗೂ ಸಾಧನ ಸಾಮಗ್ರಿಗಳನ್ನು ಒಟ್ಟುಗೂಡಿಸಿ ಆರ್ಥಿಕ ಉನ್ನತಿಯನ್ನು ಸಾಧಿಸುವುದು. ಇದನ್ನು ಸಾಧಿಸಿ ತೋರಿಸಿದ್ದಾರೆ ಶ್ರೀ ಪಾಟೀಲರು.

ಅಂದು ಗದಗ ತಾಲೂಕಿನ ರಾಜಕೀಯದಲ್ಲಿ ಅತ್ಯಂತ ಪ್ರಭಾವಿ ಸಂಸ್ಥೆಗಳೆಂದರೆ ಗದಗ-ಬೆಟಗೇರಿ ನಗರಸಭೆ, ಗದಗ ಕೋ-ಆಪರೇಟಿವ್, ಕಾಟನ್ ಸೇಲ್ ಸೊಸಾಯಿಟಿ. ಈ ಎರಡೂ ಸಂಸ್ಥೆಗಳನ್ನು ಪಟ್ಟಭದ್ರ ಹಿತಾಸಕ್ತಿಗಳ ಕಪಿಮುಷ್ಠಿಯಿಂದ ಮುಕ್ತಗೊಳಿಸಲು ಪಾಟೀಲರು ಎಡೆಬಿಡದೆ ಶ್ರಮವಹಿಸಿ ದುಡಿದರು.

ಗದಗ ನಗರಸಭೆಗಾಗಿ ಸಿವಿಕ್ ಬೋರ್ಡ್ ಸೃಷ್ಟಿಸಲಾಯಿತು. ಶ್ರೀ ಪಾಟೀಲರು ಈ ಬೋರ್ಡಿನ ಜೀವನಾಡಿಯಾಗಿದ್ದರು. ಶ್ರೀ ಸಿ.ಬಿ. ರಾಚಯ್ಯನವರು, ಶ್ರೀ ಕೆ.ಎನ್. ಶಾಂತಿಗಿರಿ ವಕೀಲರು, ಡಾ|| ಎನ್. ಎಚ್. ಗೋಡಬೋಲೆ, ಶ್ರೀ ಕೆ.ಎಂ. ಕಣವಿ ಮುಂತಾದವರು ಬೋರ್ಡಿನ ಅತ್ಯಂತ ಹಿರಿಯ ಕ್ರಿಯಾಶೀಲ ವ್ಯಕ್ತಿಗಳಾಗಿದ್ದರು. 1955ರ ನಗರಸಭೆ ಚುನಾವಣೆಯಲ್ಲಿ ಪಾಟೀಲರ ಪಾದರಸದಂತಹ ವ್ಯಕ್ತಿತ್ವದಿಂದಾಗಿ ಸಿವಿಕ್ ಬೋರ್ಡ್ ಭಾರಿ ಬಹುಮತ ಗಳಿಸಿತು. ನಗರಸಭೆ ಮೇಲಿನ ಏಕ ವ್ಯಕ್ತಿ ಚಕ್ರಾಧಿಪತ್ಯ ಕೊನೆಗೊಂಡಿತು. ನಗರ ಸಭೆಯಲ್ಲಿ ಬಡವರ ಧ್ವನಿ ಎಲ್ಲರಿಗೂ ಕೇಳಿಸುವಂತಾಯಿತು.

ದಿ. ಗದಗ ಕೋ-ಆಪರೇಟಿವ್ ಕಾಟನ್ ಸೇಲ್ ಸೊಸಾಯಿಟಿಯು ತಾಲೂಕಿನ ರೈತರ ಆರ್ಥಿಕ ಬದುಕಿನಲ್ಲಿ ಬಹು ಪ್ರಭಾವಿ ಪಾತ್ರ ನಿರ್ವಹಿಸುತ್ತಿತ್ತು. ಈ ಸಂಸ್ಥೆಯನ್ನು ಪಾಳೆಗಾರಿಕೆಯಿಂದ ಮುಕ್ತಗೊಳಿಸಲು ಪಾಟೀಲರು ಶ್ರಮವಹಿಸಿ ಐತಿಹಾಸಿಕ ಹೋರಾಟ ನಡೆಸಿದರು. ಮಲಸಮುದ್ರದ ಶ್ರೀ ಎಂ.ಎಂ. ಪಾಟೀಲ, ಹಿರೇಹಂದಿಗೋಳದ ಶ್ರೀ ಬಿ.ಡಿ. ಕುಲಕರ್ಣಿ, ಹೊಸಳ್ಳಿಯ ಶ್ರೀ ಎಸ್. ಬಿ. ಅಂಗಡಿ, ಬಿಂಕದ ಕಟ್ಟಿಯ ಶ್ರೀ ಎಂ.ವಿ. ಮೂಲಿಮನಿಯಂತಹ ಮಿತ್ರರನ್ನು ಕಟ್ಟಿಕೊಂಡು ಪಾಟೀಲರು ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಾಗಿ ಸಂಸ್ಥೆಯ ಸ್ವರೂಪವನ್ನೇ ಬದಲಿಸಿದರು.

1954ರಲ್ಲಿ ಎ.ಐ.ಸಿ.ಸಿ. ಸದಸ್ಯರಾಗಿ ಅವಡಿ ಅಧಿವೇಶನದಲ್ಲಿ ಪಾಟೀಲರು ಭಾಗವಹಿಸಿದರು. ತಾಲೂಕಿನ ಧುರೀಣರನ್ನಾಗಿ ಆಶಾಭಾವನೆಯಿಂದ ಜನ ನೋಡಲಾರಂಭಿಸಿದ ಕಾಲವದು. ಅಂದು ಎ.ಐ.ಸಿ.ಸಿ. ಸದಸ್ಯನಾದುದಕ್ಕೆ ಎಲ್ಲೆಡೆ ಅವರ ಸತ್ಕಾರ ಸನ್ಮಾನ ನಡೆಯಿತು.

1955ರಲ್ಲಿ ಶ್ರೀ ಎಸ್. ನಿಜಲಿಂಗಪ್ಪನವರು ಕೆ.ಪಿ.ಸಿ.ಸಿ. ಅಧ್ಯಕ್ಷತೆಗೆ ಸ್ಪರ್ಧಿಸಿ ಬೆಂಬಲ ಯಾಚಿಸಿ ಪ್ರವಾಸ ಕೈಕೊಂಡಾಗ ಶ್ರೀ ಕೆ.ಎಚ್. ಪಾಟೀಲರ ವಿರೋಧ ಅವರಿಗೆ ಸ್ಪಷ್ಟವಾಯಿತು. ಮುಂದೆ ನಡೆದ ಚುನಾವಣೆಯಲ್ಲಿ ಶ್ರೀ ನಿಜಲಿಂಗಪ್ಪನವರಿಗೆ ಸೋಲಾಯಿತು. ಶ್ರೀ ಅಂಬಲಿ ಚನ್ನಬಸಪ್ಪನವರು ಕೆ.ಪಿ.ಸಿ.ಸಿ. ಅಧ್ಯಕ್ಷರಾಗಿ ಆಯ್ಕೆಯಾದರು. ಬಲಿಷ್ಠ ಶ್ರೀ ನಿಜಲಿಂಗಪ್ಪನವರನ್ನು ಯುವಕ ಶ್ರೀ ಪಾಟೀಲರು ಎದುರು ಹಾಕಿಕೊಂಡು ಕೆ.ಪಿ.ಸಿ.ಸಿ. ಕಾರ್ಯಕಾರಿಣಿ ಸಭೆಯನ್ನೇ ಹುಲಕೋಟಿಯಲ್ಲಿ ಕರೆದರು. ಅಲ್ಲಿ ಮುಂಬಯಿ ಸರಕಾರದ ಭೂಸುಧಾರಣ ಕಾಯ್ದೆ ಕುರಿತು ವ್ಯಾಪಕ ಚರ್ಚೆ ನಡೆಸಿತು. ಶ್ರೀ ಅಂಬಲಿಯವರ ಅಧ್ಯಕ್ಷತೆಯಲ್ಲಿ ನಡೆದ ಈ ಸಭೆಯಲ್ಲಿ ವಿಧಾಯಕ ಕಾರ್ಯಕರ್ತ ರಾವಜಿಭಾಯಿ ಪಟೇಲ, ಅಣ್ಣಾ ಗುರೂಜಿ ಮುಂತಾದವರು ಭಾಗವಹಿಸಿದರು. ಶ್ರೀ ಪಾಟೀಲರು ಈ ಸಮಯದಲ್ಲಿ ಹುಲಕೋಟಿ ಕುರಿತು ಗ್ರಾಮ ಪರಿಚಯ ಪುಸ್ತಕ ಪ್ರಕಟಿಸಿದರು.

ಎ.ಐ.ಸಿ.ಸಿ. ಸದಸ್ಯರಾಗಿ ಶ್ರೀ ನಿಜಲಿಂಗಪ್ಪನವರ ವಿರೋಧ ಕಟ್ಟಿಕೊಂಡ ಪಾಟೀಲರಿಗೆ ಮುಂದೆ ಈ ವ್ಯವಹಾರ ಭಾರಿ ಹಾನಿಯನ್ನುಂಟು ಮಾಡಿತು. ಆದರೆ ಅದಕ್ಕೆಂದೂ ಅವರು ಸೊಪ್ಪು ಹಾಕಲಿಲ್ಲ. ಸ್ಥಿರವಾದ ಅವರ ಮನೋಭಾವ ಯಾವ ವಿಪತ್ತನ್ನಾದರೂ ಎದುರಿಸುವ ದೃಢ ಸಂಕಲ್ಪ ಮಾಡಿತು. ಸಂಕುಚಿತದ ಸೀಮೆ ದಾಟಿದ ರಾಷ್ಟ್ರೀಯ ವ್ಯಕ್ತಿ ಶ್ರೀ ಪಾಟೀಲರು ಸಾರ್ವಜನಿಕ ಸೇವೆಗಾಗಿ ಅವರು ಆರಿಸಿಕೊಂಡ ರಾಜಕೀಯ ಅವರನ್ನು ಸದಾ ನೆಮ್ಮದಿಯಿಂದೇನೂ ಇಡಲಿಲ್ಲ. ಆದರೂ ವಿಚಲಿತರಾಗದ ಸಂಯಮ ಅವರದು. ಯಾವ ಅಧಿಕಾರಕ್ಕೆ ಹೋದರೂ ಜನತೆಯಿಂದ ದೂರವಾಗದ ಜನಾನುರಾಗಿ. ಸಾಮಾನ್ಯ ಜನತೆಯ ಬಗೆಗೆ ಅವರಿಗಿರುವ ಕಳಕಳಿ. ಆ ಕಳಕಳಿ ನಿಜವಾದ ನಾಯಕನಿಗೆ ಇರಬೇಕಾದ ಸುಲಕ್ಷಣ. ಅವರು ಕಾರ್ಯ ನಿರ್ವಹಿಸಿದ ರೀತಿ ಶಿಸ್ತುಗಳು ಸ್ಮರಣೀಯ. ದಕ್ಷ ಆಡಳಿತಗಾರನಿಗೆ ನಿರ್ದಾಕ್ಷಿಣ್ಯ ಮನೋಭಾವ ಅಗತ್ಯವೆಂದು ನಂಬಿರುವ ಶ್ರೀಯುತರು ನಂಬಿಕೆಯಂತೆ ನಡೆದು ತೋರಿಸಿದ ನಿಷ್ಠರು. ಬಿಡುವಿಲ್ಲದ ರಾಜಕೀಯ ರಂಗದಲ್ಲೂ ಧರ್ಮಶ್ರದ್ಧೆಯನ್ನು ಉಳಿಸಿಕೊಂಡು, ಬೆಳೆಸಿಕೊಂಡು ಬಂದ ಉನ್ನತ ಸಂಸ್ಕಾರ ಅವರದು.

ನಾಡಿನಲ್ಲಿ ಗ್ರಾಮ ಕೇಂದ್ರ ಹಾಗೂ ಉಗ್ರಾಣಗಳ ಕಲ್ಪನೆಯೇ ಇಲ್ಲದ ಆ ಕಾಲದಲ್ಲಿ ಪಾಟೀಲರು ತಮ್ಮ ಗ್ರಾಮಕ್ಕೆ ಜಿಲ್ಲಾಧಿಕಾರಿ ಶ್ರೀ ಡಿ.ಡಿ. ಸಾಠೆ ಅವರನ್ನು ಕರೆಯಿಸಿ 1956ರಲ್ಲಿ ಉಗ್ರಾಣ ಹಾಗೂ ಗ್ರಾಮ ಕೇಂದ್ರಗಳ ಶಂಕುಸ್ಥಾಪನೆಯನ್ನು ನೆರವೇರಿಸಿದರಲ್ಲದೆ ಮಂತ್ರಿ ಶ್ರೀ ಆರ್. ನಾಗನಗೌಡರಿಂದ ಶ್ರೀ ರಾಮ ಮಂದಿರದ ಶಂಕುಸ್ಥಾಪನೆ ನೆರವೇರಿಸಿದರು. ಗಾಂಧಿ ಸೇತುವೆ ಉದ್ಘಾಟನೆ ಮುಂತಾದ ಘನ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡರು.

60ರ ದಶಕದಲ್ಲಿ ಕಾಟನ್ ಸೇಲ್ ಸೊಸಾಯಿಟಿ ನಾಡಿನ ಗಣ್ಯರ ಪ್ರವಾಸಿ ಕೇಂದ್ರವಾಯಿತು. 57ರಲ್ಲಿ ಸಂಸ್ಥೆ ಎರಡು ಲಕ್ಷ ರೂಪಾಯಿಗಳಿಗಿಂತಲೂ ಅಧಿಕ ಲಾಭಗಳಿಸಿತು. ಶ್ರೀ ಕೆ.ಎಚ್. ಪಾಟೀಲರ ದಕ್ಷತೆ, ವ್ಯವಹಾರಿಕ ಪ್ರಜ್ಞೆ ಹಾಗೂ ಪ್ರಾಮಾಣಿಕತೆಗೆ ಈ ಸಾಧನೆ ಕೋಡು ಮೂಡಿಸಿತು. ಕೇಂದ್ರ ಸರಕಾರದ ಮಂತ್ರಿ ದೇಶಮುಖರವರು 1957ರಲ್ಲಿ ಸೊಸಾಯಿಟಿಯಲ್ಲಿ ನಾಡಿನ ಮೊಟ್ಟ ಮೊದಲ ಉಗ್ರಾಣದ ಅಡಿಗಲ್ಲನ್ನಿರಿಸಿದರು. ಅದೇ ಪ್ರಸಂಗದಲ್ಲಿ ಸಂಸ್ಥೆಯಲ್ಲಿ ಒಕ್ಕಲಿಗರ ಪರಿಷತ್ತು ಜರಗಿತು. ಸಚಿವರಾದ ನಾಗನಗೌಡರು, ಶ್ರೀ ಎಚ್.ಸಿ. ದಾಸಪ್ಪ, ಶ್ರೀ ಕೆ.ಎಸ್. ಪಾಟೀಲು, ರಿಜಿಸ್ಟ್ರಾರ್ ಶ್ರೀ ಬಿ.ಎ. ಪಾಟೀಲ, ಕಲೆಕ್ಟರ್ ಶ್ರೀ ಎಸ್.ವಿ. ಹಿರೇಮಠ ಮೊದಲಾದವರು ಭಾಗವಹಿಸಿದ್ದರು. ನೂಲಿನ ಗಿರಣಿ ಸ್ಥಾಪನೆ ಬೇಡಿಕೆ ಆಗಲೇ ಧ್ವನಿತವಾಯಿತು.

ಶ್ರೀ ಕೆ.ಎಚ್. ಪಾಟೀಲರು ಉತ್ತಮ ವಾಗ್ಮಿಗಳಾದಂತೆ ಉತ್ತಮ ಲೇಖಕರೂ ಆಗಿದ್ದರು. ಸ್ಥಳೀಯ ದಿನಪತ್ರಿಕೆ "ನಾಗರಿಕ" ದಲ್ಲಿ ಗ್ರಾಮೋದ್ಧಾರ ಹಾಗೂ ಸಹಕಾರ ಕುರಿತು ಅವರು ಅನೇಕ ಲೇಖನಗಳನ್ನು ಬರೆದು ಜನರನ್ನು ರಚನಾತ್ಮಕ ಕೆಲಸಗಳಿಗೆ ಪ್ರೇರೇಪಿಸಿದರು. ಗದುಗಿನಲ್ಲಿ ಆಜಾದ್ ಹಿಂದ್ ಸೇವಾದಳ, ಬೆಟಗೇರಿನಲ್ಲಿ ಆರೂಢ ಹಿಂದ್ ಸೇವಾ ಸಂಘ ಶ್ರೀ ಪಾಟೀಲರ ರಚನಾತ್ಮಕ ಧೋರಣೆಗೆ ಸ್ಪಂದಿಸಿ ಶೈಕ್ಷಣಿಕ, ಸಾಮಾಜಿಕ, ಸಾಹಿತ್ಯಿಕ ಕ್ರೀಡಾ ಚಟುವಟಿಕೆಗಳಲ್ಲಿ ತೊಡಗಿದವು.

1957ರಲ್ಲಿ ದಿ. ಗದಗ ಕೋ-ಆಫ್. ಕಾಟನ್ ಸೇಲ್ ಸೊಸಾಯಿಟಿಯಲ್ಲಿ ಸಹಕಾರಿಗಳ ಪರಿಷತ್ತು ಸಂಘಟಿಸಿದ ಪಾಟೀಲರು ಸರ್ವೋದಯಕ್ಕೆ ಸಹಕಾರೀ ತತ್ವವೇ ತಳಹದಿ ಎಂದರು. ಕಾಟನ್ ಹೌಸ್ ಸ್ಥಾಪನೆ ವಿಚಾರ ಈ ಗೋಷ್ಠಿಯಲ್ಲಿ ರೂಪುಗೊಂಡಿತ್ತು.

ಶ್ರೀ ಕೆ.ಎಚ್. ಪಾಟೀಲರು ಗದುಗಿಗೆ ಹತ್ತಿ ಬೆಳೆಯ ಸಂಶೋಧನಾಲಯ ಬೇಕೆಂದು ಒತ್ತಾಯಿಸಿದರು. 1956 ಕಾಟನ್ ಸೇಲ್ ಸೊಸಾಯಿಟಿ ಇತಿಹಾಸದಲ್ಲಿ ಸ್ಮರಣೀಯ ವರ್ಷ, ಸಂಸ್ಥೆಯ ಸಾಧನೆಗಾಗಿ ಮೈಸೂರು ಸರಕಾರ ರಜತ ಫಲಕ ನೀಡಿ ಸನ್ಮಾನಿಸಿತು. ಹುಲಕೋಟಿಯಲ್ಲಿಯೇ ಸಂಸ್ಥೆಯ ವಾರ್ಷಿಕ ಸರ್ವ ಸದಸ್ಯರ ಸಭೆ ಸೇರಿ ಮಹತ್ವದ ಕಾರ್ಯಕ್ರಮ ಕೈಗೊಂಡಿತು. ಸಂಸ್ಥೆಯಿಂದ ರೈತರಿಗಾಗಿ ರೈತಭವನ, ಗ್ರಂಥಾಲಯ ಹಾಗೂ ಪ್ರಯೋಗಾಲಯ ಸ್ಥಾಪನೆಯ ವಿಚಾರಗಳಿಗೆ ಬೀಜಾಂಕುರವಾದದ್ದು ಇಲ್ಲಿಯೇ.

ಬೋರ್ಡಿನ ಅಧ್ಯಕ್ಷರಾಗಿ ಪಾಟೀಲರ ಮಾರ್ಗದರ್ಶನದಲ್ಲಿ ಗದಗ-ಬೇಟಗೇರಿ ನಗರಸಭೆಯಲ್ಲಿ ಸಿವಿಕ್ ಬೋರ್ಡ್ ಸ್ವಚ್ಛ ದಕ್ಷ ಆಡಳಿತ ನೀಡಿತು. ಕೆಲಸಗಳಿಗೆ ಚಾಲನೆ ನೀಡಿತು. ನಗರಸಭೆಯ ಹೊಸ ಕಟ್ಟಡದ ಅಡಿಗಲ್ಲು ಸಮಾರಂಭಕ್ಕೆ ಸ್ಥಾನಿಕ ಶಾಖೆ ಮಂತ್ರಿ

ಶ್ರೀ ಟಿ. ಸುಬ್ರಹ್ಮಣ್ಯ ಆಗಮಿಸಿದ್ದರು. ಶ್ರೀ ಸಾಹುಕಾರ ಚನ್ನಯ್ಯನವರು ಅಧ್ಯಕ್ಷತೆ ವಹಿಸಿದ್ದರು. 59ರ ನಗರಸಭಾ ಚುನಾವಣೆ ಕಾಲಕ್ಕೆ ಗಲ್ಲಿಗಲ್ಲಿ ಸಂಚರಿಸಿದ ಪಾಟೀಲರು ಸಿವಿಕ್ ಬೋರ್ಡ್ ಜಯಗಳಿಸಲು ಮುಖ್ಯ ಕಾರಣರಾದರು.

ಹತ್ತಿ ಬೆಳೆಯುವ ರೈತರನ್ನು ಹತ್ತಿ ಖರೀದಿದಾರರ ಮರ್ಜಿಗೊಳಪಡುವ ಸ್ಥಿತಿಯಿಂದ ಮುಕ್ತಗೊಳಿಸಲು ಸದಾ ಚಿಂತನಶೀಲರಾಗಿದ್ದ ಪಾಟೀಲರಿಗೆ ನೂಲಿನ ಗಿರಣಿ ಸ್ಥಾಪನೆ ಸಾಧ್ಯವಾಗಲಿಲ್ಲ. ಹುಬ್ಬಳ್ಳಿ ಕಾಟನ್ ಸೇಲ್ ಸೊಸಾಯಿಟಿ ಸೇರಿಸಿಕೊಂಡು ಧಾರವಾಡ ಡಿಸ್ಟ್ರಿಕ್ ಕೋ-ಆಪ್. ಮಾರ್ಕೆಟಿಂಗ್ ಫೆಡರೇಶನ್ ಸ್ಥಾಪಿಸಿದ ಪಾಟೀಲರು ಜನಜಾಗೃತಿಗಾಗಿ ಧಾರವಾಡ ಡಿಸ್ಟ್ರಿಕ್ ಕೋ-ಆಪ್. ಪ್ರಿಂಟಿಂಗ್ ಪಬ್ಲಿಷಿಂಗ್ ಇನ್‌ಸ್ಟಿಟ್ಯೂಶನ್ ಕಟ್ಟಿದರು.

ರೈತರು ತಮ್ಮ ಮಾಲನ್ನು ಮಾರಲು ಮಾರುಕಟ್ಟೆಗೆ ಬಂದಾಗ ಮಧ್ಯವರ್ತಿಗಳಿಂದಾಗುವ ಶೋಷಣೆ ತಪ್ಪಿಸಲು ಕೃಷಿ ಹುಟ್ಟುವಳಿ ಮಾರುಕಟ್ಟೆ ಸಮಿತಿ ಪ್ರಬಲ ಸಾಧನವನ್ನಾಗಿ ಬಳಸಬಹುದೆಂದು ಮನಗಂಡ ಪಾಟೀಲರು ಆ ಸಂಸ್ಥೆಯನ್ನು ಪ್ರವೇಶಿಸಿದರು. 56ರಲ್ಲಿ ಚೇರ್‌ಮನ್ನರಾಗಿ ಶೇಂಗಾದ ಜಾಹೀರ ಲಿಲಾವ ಪದ್ಧತಿಯನ್ನು ಪ್ರಬಲ ವಿರೋಧವಿದ್ದರೂ ಜಾರಿಗೆ ತಂದರು. ಶ್ರೀ ಸಿ.ಎಫ್. ಹುಯಿಲಗೋಳರ ಅಧ್ಯಕ್ಷತೆಯಲ್ಲಿ ರೈತ ಸೇವಾ ಸಹಕಾರಿ ಸಂಘವನ್ನು ಸ್ಥಾಪಿಸಿ ಅದಕ್ಕೆ ಮಾರ್ಗದರ್ಶಕರಾದರು. ರೈತರ ಹಾಗೂ ಗ್ರಾಹಕರ ಹಿತರಕ್ಷಿಸಲು 60ರಲ್ಲಿ ಪಾಟೀಲರು ಸಹಕಾರಿ ಹಣ್ಣು ಕಾಯಿಪಲ್ಲೆ ಮಾರಾಟ ಅಂಗಡಿ ಪ್ರಾರಂಭಿಸಿದರು. ರೈತರ ಮಕ್ಕಳು ಶಿಕ್ಷಣ ಮುಂದುವರಿಸಲು ಅವರಿಗೆ ನೆರವಾಗಲು ಹುಲಕೋಟಿ ಸಹಕಾರ ಶಿಕ್ಷಣ ಸಂಸ್ಥೆಯ ಜನರಲ್ ಹಾಸ್ಟೆಲ್ ನಿರ್ಮಾಣ ಹಾಗೂ ಗದಗ ಜಿಲ್ಲಾ ನಿರ್ಮಾಣದ ಕ್ರಿಯಾ ಸಮಿತಿಗೆ ಪಾಟೀಲರು ಚಾಲನೆ ನೀಡಿದರು.

ಮುಖ್ಯಮಂತ್ರಿ ಶ್ರೀ ಬಿ.ಡಿ. ಜತ್ತಿಯವರು ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ನೂತನ ಬಸ್ ನಿಲ್ದಾಣದ ಅಡಿಗಲ್ಲನ್ನಿರಿಸಲು ಆಗಮಿಸಿದಾಗ ಗದಗ ಜಿಲ್ಲೆ ನಿರ್ಮಾಣಕ್ಕೆ ಒತ್ತಾಯಿಸಿ ವಿವರವಾದ ಮಾಹಿತಿ ನೀಡುವ ಮನವಿ ಪತ್ರವನ್ನು ನಾಗರಿಕ ದಿನಪತ್ರಿಕೆ ಸಂಪಾದಕ ಶ್ರೀ ಎಚ್.ಎಸ್. ಹೊಂಬಾಳಿ, ನಗರ ಸಭಾಧ್ಯಕ್ಷ, ಶ್ರೀ ಕೆ.ಎಂ. ಕಣವಿ ಜೊತೆಗೆ ಅರ್ಪಿಸಿದ ಪಾಟೀಲರು ಮುಂದೆ ಸಾಹಿತ್ಯ ಚಟುವಟಿಕೆಗಳಲ್ಲಿ ಆಸಕ್ತಿ ವಹಿಸಿದರು.

1961ರ ಎ.ಪಿ.ಎಂ.ಸಿ. ಚುನಾವಣೆ ತೀವ್ರ ಬಿರುಸಿನದಾಗಿತ್ತು. ಮತದಾನದ ದಿನವೇ ಪಾಟೀಲರ ತಂದೆಯವರು ತಮ್ಮ 73ನೇ ವಯಸ್ಸಿನಲ್ಲಿ ನಿಧನರಾದರು. ತಂದೆಯ ನಿಧನದಿಂದ ಧೃತಿಗೆಡದ ಪಾಟೀಲರು ಮೊದಲು ಚುನಾವಣೆ ಮುಗಿಸಿ ಅನಂತರ ತಂದೆಯ ಅಂತ್ಯಕ್ರಿಯೆಗೆ ತೆರಳಿದರು. ಚುನಾವಣೆಯಲ್ಲಿ ಅವರ ಗುಂಪು ಅದ್ಭುತ ವಿಜಯಗಳಿಸಿತು. ನಾವು ರೈತರ ನಂಬಿಗಸ್ಥ ಜೀತದಾಳುಗಳು ಎಂದು ಎ.ಪಿ.ಎಂ.ಸಿ. ಚೇರಮನ್ನರಾಗಿ ಹೇಳಿದ ಪಾಟೀಲರು ರಾಜ್ಯದ ಎ.ಪಿ.ಎಂ.ಸಿ. ಗಳ ಪರಿಷತ್ತನ್ನು ಕಾಟನ್ ಸೇಲ್ ಸೊಸಾಯಿಟಿಯಲ್ಲಿ ಸಂಘಟಿಸಿದರು.

ಶ್ರೀ ಆರ್. ನಾಗನಗೌಡರ ಅಧ್ಯಕ್ಷತೆಯಲ್ಲಿ ಜರುಗಿದ ಈ ಪರಿಷತ್ತಿಗೆ ಶ್ರೀ ಮುರಾರ್ಜಿ ದೇಸಾಯಿಯವರೇ ಸ್ವಾಗತಾಧ್ಯಕ್ಷರು. 300 ಜನ ಪ್ರತಿನಿಧಿಗಳು ಭಾಗವಹಿಸಿದ್ದ ಈ ಪರಿಷತ್ತಿನಲ್ಲಿ ಶ್ರೀ ಕೆ.ಎಫ್. ಪಾಟೀಲ, ಶ್ರೀ ಆರ್. ನಾಗನಗೌಡರ ಸಹಕಾರ ಸಂಘಗಳ ಮುಖ್ಯ ನಿಬಂಧಕರು

ಸೇರಿ ಹಲವಾರು ಅಧಿಕಾರಿಗಳು ಪಾಲ್ಗೊಂಡಿದ್ದರು. ಇದೇ ಪ್ರಸಂಗದಲ್ಲಿ ರೈತಭವನಕ್ಕೆ ಅಡಿಗಲ್ಲನ್ನಿರಿಸಲಾಯಿತು.

ಕೀರ್ತಿಯ ಅಭಿಲಾಷೆ ಹೊಂದಿದವ ಎಂದೂ ಸಾಮಾಜಿಕ ಕಾರ್ಯಕರ್ತನಾಗಲಾರನೆಂದು ಹೇಳುತ್ತಿದ್ದ ಪಾಟೀಲರು ಪ್ರಚಾರದಿಂದ ದೂರವಿದ್ದು ರಚನಾತ್ಮಕ ಕೆಲಸದಲ್ಲಿ ತೊಡಗಿದರು. 22 ಲಕ್ಷ ರೂ. ವೆಚ್ಚದ ಪಾಲಿಟೆಕ್ನಿಕ್ ಸಂಸ್ಥೆ ಕಟ್ಟಲು ಮುಂದಾದರು. ಕಾಟನ್ ಸೇಲ್ ಸೊಸಾಯಿಟಿ ಸಾಧಾರಣ ಸಭೆ ಇದಕ್ಕೆ ಸಮ್ಮತಿಸಿತು. ಸಂಸ್ಥೆ 1 ಲಕ್ಷ ರೂ. ದೇಣಿಗೆ ನೀಡುವ ನಿರ್ಧಾರ ಮಾಡಿತು. ನಗರಸಭೆ 2 ಲಕ್ಷ ರೂ. ನೀಡಲು ಠರಾವು ಮಾಡಿತು. ಎ.ಪಿ.ಎಂ.ಸಿ. 1 ಲಕ್ಷ ರೂ. ನೀಡಲು ನಿರ್ಧರಿಸಿತು. ಹನುಮನಮಟ್ಟಿ ಹತ್ತಿರ ರಾಷ್ಟ್ರೀಯ ಹೆದ್ದಾರಿಗೆ ಹೊಂದಿ 300 ಎಕರೆ ಪ್ರದೇಶದಲ್ಲಿ ಗ್ರಾಮ ಶಿಕ್ಷಣ ಕೇಂದ್ರ ಸ್ಥಾಪಿಸಲ್ಪಟ್ಟಿತು. ಪಾಟೀಲರು ಈ ಸಂಸ್ಥೆಯ ಕಾರ್ಯದರ್ಶಿಗಳಾಗಿ ಅವಿಶ್ರಾಂತ ದುಡಿದರು. ರಾಷ್ಟ್ರದಲ್ಲಿಯೇ ಇಂತಹ 13 ಕೇಂದ್ರಗಳಿದ್ದವು. ಇದು ಮಾದರಿ ಕೇಂದ್ರವಾಗಿ ಬೆಳೆಯಿತು.

ರಾಜ್ಯದ ಹೆಸರು ಕರ್ನಾಟಕ ಆಗಬೇಕೆಂದು ಗದುಗಿನ ಸಮ್ಮೇಳನ ನಿರ್ಣಯ ಸ್ವೀಕರಿಸಿತು. ಈ ಸಮ್ಮೇಳನದ ಸ್ವಾಗತಾಧ್ಯಕ್ಷ ಶ್ರೀ ಕೆ.ಎಚ್. ಪಾಟೀಲರೇ. ಮುಂದೆ 1973ರಲ್ಲಿ ಅರಸು ಸಂಪುಟದ ಸಚಿವರಾಗಿ ವಿಧಾನ ಪರಿಷತ್ತಿನಲ್ಲಿ ಕರ್ನಾಟಕ ನಾಮಕರಣ ಮಸೂದೆ ಮಂಡಿಸಿದ್ದು ಒಂದು ಯೋಗಾಯೋಗ.

ಪಾಟೀಲರು ಗದಗ ತಾಲೂಕಿನಾದ್ಯಂತ ಅತ್ಯಂತ ಜನಪ್ರಿಯ ವ್ಯಕ್ತಿಯಾಗಿದ್ದರು. ಎ.ಪಿ.ಎಂ.ಸಿ. ಚೇರಮನ್ನರಾಗಿ ರೈತಪರ ಹೋರಾಟ ನಡೆಸಿ ರೈತರ ಶೋಷಣೆ ಕಡಿಮೆ ಮಾಡಲು ಅವಿರತವಾಗಿ ದುಡಿದ ಪಾಟೀಲರು ರೈತಾಪಿ ವರ್ಗದ ಮನಗೆದ್ದರು. ಪಾಟೀಲರು ಜಿಲ್ಲಾ ಕಾಂಗ್ರೆಸ್ ಸಮಿತಿ, ಪ್ರದೇಶ ಕಾಂಗ್ರೆಸ್ ಸಮಿತಿ, ಸದಸ್ಯತ್ವಗಳಿಗೆ ಹಾಗೂ ಪಕ್ಷದ ಪ್ರಾಥಮಿಕ ಸದಸ್ಯತ್ವಕ್ಕೆ ರಾಜಿನಾಮೆ ಸಲ್ಲಿಸಿ 1962 ಜನವರಿ 18 ರಂದು ನಿಷ್ಠಾವಂತ ಕಾಂಗ್ರೆಸ್ ಅಭ್ಯರ್ಥಿ ಎಂದು ಘೋಷಿಸಿಕೊಂಡು ವಿಧಾನಸಭಾ ಚುನಾವಣೆಗೆ ನಾಮಪತ್ರ ಸಲ್ಲಿಸಿದರು.

ಪಾಟೀಲರು ಎ.ಪಿ.ಎಂ.ಸಿ. ಚೇರಮನ್ನರಾಗಿ ಸರ್ವಾನುಮತದಿಂದ ಆಯ್ಕೆಯಾದರು. ಕೆ.ಸಿ.ಸಿ. ಬ್ಯಾಂಕಿನ ನಿರ್ದೇಶಕರಾಗಿ ಆಯ್ಕೆಯಾದರು. ಎ.ಪಿ.ಎಂ.ಸಿ. ವ್ಯವಸ್ಥಿತವಾಗಿ ಬೆಳೆಸಲು ಹೆಚ್ಚು ಅರ್ಪಿತರಾದ ಪಾಟೀಲರು ರೈತ ಹಿತರಾಕ್ಷಣೆಗಾಗಿ ದಿಟ್ಟ ಹೋರಾಟ ನಡೆಸಿದರು. ದಲ್ಲಾಳಿಗಳ ಹಾಗೂ ವರ್ತಕರ ವಿರೋಧ ಕಟ್ಟಿಕೊಂಡು ಶೇಂಗಾ ಹಾಗೂ ಹತ್ತಿ ಬಹಿರಂಗ ಲಿಲಾವ ಮಾರಾಟ ವ್ಯವಸ್ಥೆ ಜಾರಿಗೊಳಿಸಿದರು. ಬಹಳಷ್ಟು ಪ್ರಮಾಣದಲ್ಲಿ ರೈತರ ಶೋಷಣೆ ತಡೆಯುವಲ್ಲಿ ಯಶಸ್ಸು ಸಾಧಿಸಿದರು.

ತಮ್ಮ ರಾಜಕೀಯ ವಿರೋಧಿಗಳು ಕೊಡುತ್ತಿರುವ ರಾಜಕೀಯ ತೊಂದರೆಗಳನ್ನು ಸಮರ್ಥವಾಗಿ ಎದುರಿಸಿದ ಪಾಟೀಲರು ಬಡವರ ಪಕ್ಷಪಾತಿಯಾಗಿ ಜನಪರ ಕೆಲಸಗಳಲ್ಲಿ ಸಕ್ರೀಯರಾದರು. ಹುಲಕೋಟಿ ಸಹಕಾರ ಶಿಕ್ಷಣ ಸಂಸ್ಥೆಯಿಂದ ಮಹಿಳೆಯರಿಗಾಗಿ ಕನ್‌ಡೆನ್ಸ್ಡ್ ಕೋರ್ಸ್ ಪ್ರಾರಂಭಿಸಲಾಯಿತು. ಹುಲಕೋಟಿಯಲ್ಲಿ ಸ್ವಾಮಿ ಶ್ರದ್ಧಾನಂದಾಜಿಯವರಿಂದ

ಶ್ರೀ ರಾಮಕೃಷ್ಣ ಆಶ್ರಮ ಹೈಸ್ಕೂಲ್ ಉದ್ಘಾಟನೆ ನೆರವೇರಿಸಿದರು. ಬೆಟಗೇರಿಯಲ್ಲಿ ನೇಕಾರರ ಹಿತರಕ್ಷಿಸಲು ಶ್ರೀ ನೀಲಕಂಠೇಶ್ವರ ರೇಷ್ಮೆ ಕೈಮಗ್ಗ ನೇಕಾರ ಸಹಕಾರ ಸಂಘ, ಜಯಭವಾನಿ ರೇಷ್ಮೆ ಕೈಮಗ್ಗ ಸಹಕಾರಿ ಸಂಘ ಕಟ್ಟಲು ನೆರವಾದ ಪಾಟೀಲರು ಧಾರವಾಡ ಡಿಸ್ಟ್ರಿಕ್ಟ್ ಕೋ-ಆಫ್ ಆಯಿಲ್‌ಸೀಡ್ಸ್ ಸಂಸ್ಥೆ ನಿರ್ಮಾಣದಲ್ಲಿ ತೊಡಗಿದರು.

ದೇಶದಲ್ಲಿಯೇ ಮಾದರಿಯಾಗುವಂತೆ ಹತ್ತಿ, ಶೇಂಗಾ ಗ್ರೇಡಿಂಗ ವ್ಯವಸ್ಥೆ ರೂಪಿಸಿದ ಪಾಟೀಲರು ಉಗಾಂಡಾದ ಹತ್ತಿ ಬೆಳೆ ತಜ್ಞ ಡಾ|| ಎಲ್.ಎಚ್. ಮ್ಯಾನಿಂಗ, ಆಯಿಲ್ಯಾಂಡ್ ಹತ್ತಿ ಅಭಿವೃದ್ಧಿ ಅಧಿಕಾರಿ ಡಾ|| ಅವತಾರಸಿಂಗ ಅವರನ್ನು ಬರಮಾಡಿಕೊಂಡು ರೈತರಿಗೆ ಮಾರ್ಗದರ್ಶನ ಮಾಡಿಸಿದರು.

ಎ.ಪಿ.ಎಂ.ಸಿ. ಚೇರಮನ್ನರಾಗಿ ಪುನರಾಯ್ಕೆಗೊಂಡ ಪಾಟೀಲರು ಕೃಷಿ ಹುಟ್ಟುವಳಿ ಮಾರುಕಟ್ಟೆ ಸಮಿತಿಯನ್ನು ರೈತ ಹಿತರಕ್ಷಕ ರೈತ ಪಕ್ಷಪಾತಿಯಾಗಿ ಬೆಳೆಸಿದರು.

ಶ್ರೀ ಕೆ.ಎಚ್. ಪಾಟೀಲರದ್ದು ಸಂಘರ್ಷದ ರಾಜಕೀಯ. ತಾಲೂಕು ಹಾಗೂ ಜಿಲ್ಲೆಯ ಬಲಿಷ್ಠವರ್ಗ ಹಾಗೂ ಧನ ಬಲವುಳ್ಳವರ ವಿರೋಧ ಎದುರಿಸಿ, ರಚನಾತ್ಮಕ ಕೆಲಸಗಳ ಮೂಲಕ ಜನರ ಮನಗೆದ್ದು ಪಾಟೀಲರು ಕಾಂಗ್ರೆಸ್ ಪಕ್ಷದಲ್ಲಿ ರಾಜ್ಯ ಸಂಘಟನೆಗೆ ಮುಂದಾದರು.

1965ರ ಮೇ ತಿಂಗಳಲ್ಲಿ ರಾಜ್ಯದಲ್ಲಿ ಕಾಂಗ್ರೆಸ್ಸಿಗೆ ಪರ್ಯಾಯವಾಗಿ ಜನತಾ ಪಕ್ಷದ ಉದಯವಾಯಿತು. ಶ್ರೀ ಸಾಹುಕಾರ ಚನ್ನಯ್ಯ ಅವರು ಹೊಸ ಪಕ್ಷದ ಅಧ್ಯಕ್ಷರಾಗಿ ಹಾಗೂ ಶ್ರೀ ಕೆ.ಎಚ್. ಪಾಟೀಲರು ಕಾರ್ಯದರ್ಶಿಯಾಗಿ ಆಯ್ಕೆಗೊಂಡರು. ಪಕ್ಷದ ಸಂಘಟನೆಗಾಗಿ ರಾಜ್ಯದಾದ್ಯಂತ ಸಂಚರಿಸಿದ ಪಾಟೀಲರು ಗ್ರಾಮೀಣ ಹಿನ್ನೆಲೆ ಇರುವವರನ್ನು ಹುರಿದುಂಬಿಸಿ ಸಂಘಟನೆಗೆ ಅಣಿಗೊಳಿಸಿದರು.

ಹಸಿವೆ ಹಿಂಗದೆ ಸ್ವಾತಂತ್ರ್ಯಕ್ಕೆ ಬೆಲೆ ಇಲ್ಲ ಎಂದು ಘೋಷಿಸಿದ ಪಾಟೀಲರು ಎ.ಪಿ.ಎಂ.ಸಿ. ಹಾಗೂ ಸೊಸಾಯಿಟಿ ಮುಖಾಂತರ ತಾಲೂಕಿನ ಪ್ರತಿ ಗ್ರಾಮಕ್ಕೆ ಉಗ್ರಾಣ ಕಟ್ಟಿಸುವ ಕೆಲಸ ಪ್ರಾರಂಭಿಸಿದರು. ಈ ಅವಧಿಯಲ್ಲಿ ಭಾರತದಲ್ಲಿಯೇ ಪ್ರಪ್ರಥಮವಾಗಿ ಹತ್ತಿ ಶಾಸ್ತ್ರೋಕ್ತ ಗ್ರೇಡಿಂಗ ಪದ್ಧತಿ ಆರಂಭಿಸಿದ್ದ ಪಾಟೀಲರು ಗದಗ ಪರಿಸರದ ಹತ್ತಿ ಬೆಳೆ ರಕ್ಷಣೆ ವೈಮಾನಿಕ ಕ್ರಿಮಿನಾಶಕ ಸಿಂಪಡಣೆ ಮಾಡಿಸಿ ಬಿಳಿ ಬಂಗಾರ ಬೆಳೆ ವಿಪುಲವಾಗಿ ಬರುವಂತೆ ಮಾಡಿದರು.

ಹುಲಕೋಟಿಯಲ್ಲಿ ಸದ್ಗುರು ಬ್ರಹ್ಮಚೈತನ್ಯ ಮಹಾರಾಜರ ಸನ್ನಿಧಿಯಲ್ಲಿ ರಾಮಕೃಷ್ಣಾಶ್ರಮ ಹೈಸ್ಕೂಲು ಕಟ್ಟಡದ ಅಡಿಗಲ್ಲ ಸಮಾರಂಭ ನೆರವೇರಿಸಿದರು. ಪಶು ಸಂಗೋಪನೆ ರೈತರಿಗೆ ಪೂರಕವಾದ ಉದ್ಯೋಗ. ಅದಕ್ಕಾಗಿ ಡೈರಿ ಹಾಗೂ ಪೌಲ್ಟ್ರಿ ಸ್ಥಾಪನೆಯ ಮುಂದಾಲೋಚನೆ ಹೊಂದಿದ್ದ ಪಾಟೀಲರು ಹುಲಕೋಟಿಯಲ್ಲಿ 20 ಲಕ್ಷ ರೂ. ವೆಚ್ಚದ ದನದ ಆಹಾರ ತಯಾರಿಸುವ ಕಾರ್ಖಾನೆ ಸ್ಥಾಪನೆಯ ಕಾರ್ಯಕ್ಕೆ ಮಿಂಚಿನಂತೆ ಮುಂದಾದರು. ಮಿಂಚಂತೆ ತ್ವರಿತವಾಗಿ ಕೆಲಸ ಮಾಡುವುದೇ ಶ್ರೀ ಕೆ.ಎಚ್. ಪಾಟೀಲರ ವಿಶೇಷತೆ. ದಿ. 23-9-1965ರಂದು ನಿಯಮ ಸಿದ್ಧಗೊಳಿಸಿದರು. ದಿ. 3-10-1965 ರಂದು ಸಹಕಾರಿ ಸಂಸ್ಥೆ ನೊಂದಣಿ ಪೂರೈಸಿದರು. ಬಹುದೀರ್ಘ

ಹೋರಾಟದ ನಂತರ ಪಾಟೀಲರು ಭವಿಷ್ಯತ್ತಿನ ಐತಿಹಾಸಿಕ ಹೋರಾಟದೊಂದಿಗೆ ವಿಧಾನಸಭೆ ಪ್ರವೇಶಿಸಿದರು.

ವಿಧಾನಸಭೆಯಲ್ಲಿ ತಮ್ಮ ಮೊದಲ ಭಾಷಣವನ್ನು ಒಂದು ಗಂಟೆಗೂ ಹೆಚ್ಚು ಕಾಲ ಮಾಡಿದ ಪಾಟೀಲರು ಅತ್ಯಂತ ನಿಷ್ಠುರ ಮಾತಿನ ಜಾಗೃತ ಸದಸ್ಯರೆನಿಸಿಕೊಂಡರು. ಗದಗ ಮತ್ತೆ ಪ್ರಸಿದ್ಧಿ ಪಡೆಯುವಂತಹ ಸ್ಥಿತಿ ನಿರ್ಮಿಸಿದರು. ಪಾಟೀಲರ ಕರ್ಮಕ್ಷೇತ್ರ ಗದಗ ಕೋ ಆಫ್. ಕಾಟನ್ ಸೇಲ್ ಸೊಸಾಯಿಟಿ.

ಗದಗ-ಬೆಟಗೇರಿ ಅವಳಿ ನಗರ ಬೆಳೆಯುತ್ತಿರುವ ನಗರ. ಮಲಪ್ರಭಾ ನೀರು ಪೂರೈಕೆ ಅವಾಸ್ತವಿಕ ಹಾಗೂ ಆ ನೀರು ಅನಾರೋಗ್ಯಕರ ಎಂದ ಪಾಟೀಲರು ಗದಗ-ಬೆಟಗೇರಿ ಅವಳಿ ನಗರಕ್ಕೆ ತುಂಗಭದ್ರಾ ನದಿ ನೀರು ಪೂರೈಕೆ ಯೋಜನೆಗಾಗಿ ಒತ್ತಾಯಿಸಲಾರಂಭಿಸಿದರು. ಸರಕಾರವು ಮಲಪ್ರಭಾ ನೀರು ಪೂರೈಸುವ ಯೋಜನೆ ಸಿದ್ಧಪಡಿಸಿತು.

ಜನತೆಯ ನೋವು ನಲಿವುಗಳಿಗೆ ಸ್ಪಂದಿಸುವುದು ಪಾಟೀಲರ ಸ್ವಭಾವ. ಇದರಿಂದಾಗಿ ಬಡಜನರ ಬೆಂಬಲದ ಶ್ರೀರಕ್ಷೆ ಅವರಿಗಿದ್ದಿತು. ಪ್ರತಿ ಸಂಘರ್ಷದಲ್ಲಿ ಪಾಟೀಲರು ಮತ್ತಷ್ಟು ಗಟ್ಟಿಯಾದರು. ಜನಹಿತ ಸಾಧನೆಯ ಜಟ್ಟಿಯಾದರು. ರಾಜ್ಯದಲ್ಲಿ ಪ್ರಗತಿಪರ ಧೋರಣೆಯ ಎಲ್ಲ ರಾಜಕೀಯ ಮುಖಂಡರು ಇಂದಿರಾ ಕಾಂಗ್ರೆಸ್ ಸೇರಿದರು. ಶ್ರೀ ದೇವರಾಜ ಅರಸ ಹಾಗೂ ಶ್ರೀ ಕೆ.ಎಚ್. ಪಾಟೀಲರು ಜನರಲ್ಲಿ ಧೈರ್ಯ ತುಂಬಿದರು ಸಂಘಟನೆಗೆ ಮುಂದಾದರು.

ಶ್ರೀಮತಿ ಇಂದಿರಾಗಾಂಧಿ ರಾಜ್ಯದಲ್ಲಿ ಪಕ್ಷದ ಚುನಾವಣಾ ಸಮಿತಿಗೆ ಶ್ರೀ ದೇವರಾಜ ಅರಸರನ್ನು ಅಧ್ಯಕ್ಷರನ್ನಾಗಿ ಹಾಗೂ ಶ್ರೀ ಕೆ.ಎಚ್. ಪಾಟೀಲರನ್ನು ಸದಸ್ಯ ಕಾರ್ಯದರ್ಶಿಯನ್ನಾಗಿ ನೇಮಕ ಮಾಡಿದ ನಂತರ ಬೆಳಗಾಂವಿಯಲ್ಲಿ ಎರಡು ದಿನ ನಡೆದ ಎಂ.ಪಿ.ಸಿ.ಸಿ. ಸಮ್ಮೇಳನ ಐತಿಹಾಸಿಕವಾಯಿತು. ಶ್ರೀಮತಿ ಇಂದಿರಾಗಾಂಧಿಯವರು ಪಾಲ್ಗೊಂಡಿದ್ದ ಈ ಸಮ್ಮೇಳನವು ಶ್ರೀ ಕೆ.ಎಚ್. ಪಾಟೀಲರ ಸಂಘಟನಾ ಸಾಮರ್ಥ್ಯ ಹಾಗೂ ಅವರ ಖ್ಯಾತಿಗೆ ಮೆರುಗು ತಂದಿತು.

ಶ್ರೀ ದೇವರಾಜ ಅರಸ್ ಮಾರ್ಚ್ 18 ರಂದು ಮುಖ್ಯಮಂತ್ರಿಯಾಗಿ ಅಧಿಕಾರ ಸ್ವೀಕರಿಸಿದಾಗ ಅವರ ಜೊತೆ ಪ್ರಮಾಣ ವಚನ ಸ್ವೀಕರಿಸಿದವರು ಇಬ್ಬರು. ಒಬ್ಬರು ಶ್ರೀ ಕೆ.ಎಚ್. ಪಾಟೀಲರಾದರೆ ಇನ್ನೊಬ್ಬರು ಶ್ರೀ ಎಚ್.ಎಂ. ಚನ್ನಬಸಪ್ಪ. ಪಾಟೀಲರಿಗೆ ಕೃಷಿ ಅರಣ್ಯ ಗಡಿ ವಿವಾದ ಗಡಿ ಸಲಹಾ ಸಮಿತಿ ಸಚಿವ ಖಾತೆ ನೀಡಲಾಗಿತ್ತು. ಮುಂದೆ ಎರಡು ದಿನಗಳ ನಂತರ ನಡೆದ ಸಂಪುಟ ವಿಸ್ತರಣೆಯಲ್ಲಿ ಸರ್ವಶ್ರೀ ಸಿದ್ವೀರಪ್ಪ, ಎಂ.ವೈ. ಘೋರ್ಪಡೆ, ಎಸ್.ಎಂ. ಕೃಷ್ಣ, ಡಾ॥ ಶಂಕರಆಳ್ವಾ, ಬದರೀನಾರಾಯಣ, ಬಸವಲಿಂಗಪ್ಪ ಮುಂತಾದ ಗಣ್ಯರು ಸಚಿವರಾದರು.

ಸಚಿವರಾದ ಪಾಟೀಲರು ತಮ್ಮ ಮತ ಕ್ಷೇತ್ರ ಗದುಗಿನ ಜನತೆಯ ನೀರಿನ ಬವಣೆ ನಿವಾರಿಸಲು ಕೊಳವೆ ಬಾವಿಗಳನ್ನು ತೊಡಲು ನಗರಸಭೆಗೆ 2 ಲಕ್ಷ 17 ಸಾವಿರ ನೆರವು ಒದಗಿಸಿ ಕೇವಲ ಎಂಟು ದಿನಗಳಲ್ಲಿ ಕೊಳವೆ ಬಾವಿಗಳ ಮೂಲಕ ನೀರು ಪೂರೈಸುವಂತೆ ಗಡುವು ನೀಡಿ

ತಾವೇ ಸ್ವತಃ ಬೆಂಗಳೂರಿನಿಂದ ಕೆಲಸದ ಮೇಲ್ವಿಚಾರಣೆ ನೋಡಿ ಅದನ್ನು ಸಾಧಿಸಿ ತೋರಿಸಿದರು.

ನಿಜವಾದ ಅರ್ಥದಲ್ಲಿ ಸೇವಾ ಮನೋಧರ್ಮದಿಂದ ರಾಜ್ಯಭಾರ ನಡೆಸುವವನು ರಾಜರ್ಷಿ. ನಮ್ಮ ಪುರಾಣ ಪುಣ್ಯಕಥೆಗಳಲ್ಲಿ ಈ ದೃಷ್ಟಿಯಿಂದ ಪ್ರಸಿದ್ಧರಾಗಿರುವವರು ಜನಕ, ವಿಶ್ವಾಮಿತ್ರ, ಪುರೂರವ ಮುಂತಾದವರು. ಶ್ರೀಮಾನ್ ಪಾಟೀಲರು ಅವರ ಸಾಲಿಗೆ ಸೇರುವ ಧೀಮಂತ ವ್ಯಕ್ತಿಗಳಲ್ಲಿ ಓರ್ವರು.

ವಿರೋಧ ಪಕ್ಷದ ಸಾಲಿನಲ್ಲಿ ಕಟು ಟೀಕಾಕಾರರಾಗಿ ಹೆಸರು ಮಾಡಿದ್ದ ಪಾಟೀಲರಿಗೆ ಆಡಳಿತದ ಅನುಭವವಿಲ್ಲವೆಂದು ಕೆಲವರು ಭಾವಿಸಿದ್ದರು. ವಿಶ್ವವಿದ್ಯಾಲಯದ ಕ್ಯಾಂಪಸ್ ಪ್ರವೇಶ ಮಾಡದ ಹಳ್ಳಿಯ ಪಾಟೀಲ ಆಡಳಿತದ ಮುಖ್ಯಸ್ಥರಾಗಿ ಕೆಲಸ ಮಾಡುವುದು ಸಾಧ್ಯವಿಲ್ಲವೆಂದು ಕೆಲವರು ಲೆಕ್ಕಾಚಾರ ಹಾಕಿದ್ದರು. ಅವರಿಗೆಲ್ಲ ಭಾರಿ ನಿರಾಶೆ ಕಾದಿತ್ತು. ಪಾಟೀಲರು ನಗರಕ್ಕೆ ಮಲಪ್ರಭಾ ನೀರು ಬೇಡ ನಮಗೆ ತುಂಗಭದ್ರಾ ನೀರು ಬೇಕು ಎಂದು ಸಾರಿದರು. ಮಂತ್ರಿ ಆಗಿ ಪಾಟೀಲರು ಬಂದಾಗ ಗದಗ-ಬೆಟಗೇರಿ ಅವಳಿ ನಗರ ಹಾಗೂ ಗ್ರಾಮಾಂತರ ಪ್ರದೇಶದಲ್ಲಿ ಸಂತಸದ ಬಿರುಗಾಳಿ ಬೀಸಿತು. ಅಭಿಮಾನದ ಪ್ರವಾಹ ಉಕ್ಕೇರಿತು. ಬಡವರಿಗೆಲ್ಲ ತಾವೇ ಮಂತ್ರಿ ಆದಂತಹ ಅಪರಿಮಿತ ಆನಂದ ತಂದಿತು.

ಕೃಷಿ ಹಾಗೂ ಅರಣ್ಯ ಮಂತ್ರಿಯಾಗಿ ಇಲಾಖೆಯಲ್ಲಿ ವಿದ್ಯುತ್ ಸಂಚಾರ ಮಾಡಿದ ಪಾಟೀಲರು ಧಾರವಾಡದಲ್ಲಿ ಮತ್ತೊಂದು ಕೃಷಿ ವಿಶ್ವವಿದ್ಯಾಲಯ ಸ್ಥಾಪನೆಗೆ ಕೇಂದ್ರಕ್ಕೆ ಮನವಿ ಮಾಡಿದರು. ಜಿಲ್ಲೆಗೊಂದು ಮಣ್ಣು ಪರೀಕ್ಷಾ ಕೇಂದ್ರಗಳನ್ನು ಸ್ಥಾಪಿಸಿದರು. ಸಂಚಾರಿ ಮಣ್ಣು ಪರೀಕ್ಷಾ ಪ್ರಯೋಗಾಲಯಗಳನ್ನು ಸೃಷ್ಟಿಸಿದರು. 23.5 ಲಕ್ಷ ರೂ. ವೆಚ್ಚದಲ್ಲಿ ಅಧಿಕ ಇಳುವರಿ ನೀಡುವ ಹತ್ತಿ ಬೆಳೆ ಯೋಜನೆಯನ್ನು ಧಾರವಾಡ ಜಿಲ್ಲೆಯಲ್ಲಿ ಅನುಷ್ಠಾನಗೊಳಿಸಿದರು. ಭೂಸಾರ ಸಂರಕ್ಷಣೆಯ ಕಾರ್ಯ ಯುದ್ಧೋಪಾದಿಯಲ್ಲಿ ಹಮ್ಮಿಕೊಂಡರು.

ಹತ್ತಿ ಬೆಳೆಯುವ ರೈತ ತನ್ನ ಉತ್ಪಾದನೆ ಪೇಟೆಗೆ ತಂದಾಗ ಅನುಭವಿಸುವ ಸಂಕಟದ ಅರಿವಿದ್ದ ಪಾಟೀಲರು ಹತ್ತಿ ಬೆಳೆಯುವ ರೈತರ ಹಿತ ರಕ್ಷಿಸಲು, ಆತನ ಉತ್ಪಾದನೆಗೆ ಉತ್ತಮ ಬೆಲೆ ನೀಡುವ ಬಗ್ಗೆ ನೆರವಾಗಲು ದಿ. ಗದಗ ಕೋ-ಆಫ್. ಟೆಕ್ಸ್‌ಟೈಲ್ ಮಿಲ್ ಲಿ., ಸಂಸ್ಥೆ ಕಟ್ಟಿಸಿದರು. ಸಂಘದ ಪ್ರಾರಂಭೋತ್ಸವಕ್ಕೆ ಬಂದಿದ್ದ ಮುಖ್ಯಮಂತ್ರಿ ಶ್ರೀ ದೇವರಾಜ ಅರಸರು ಬೆಟಗೇರಿ ಸಾರ್ವಜನಿಕ ಸಭೆಯಲ್ಲಿ ಶ್ರೀ ಪಾಟೀಲರನ್ನು ಭೀಮಸೇನನೆಂದು ಬಣ್ಣಿಸಿದರು. ಅನ್ಯಾಯದ ವಿರುದ್ಧ ಸದಾ ಗಧಾ ಪ್ರಹಾರ ಮಾಡಲು ಸನ್ನದ್ಧರಾಗಿರುವ ಶ್ರೀ ಕೆ.ಎಚ್. ಪಾಟೀಲರು ಬಹು ಬಲಶಾಲಿ. ಅದಕ್ಕಾಗಿಯೇ ಅವರಿಗೆ ಎರಡು ಹುದ್ದೆಗಳನ್ನು ನೀಡಿದ್ದೇನೆ ಎಂದರು. ರಾಜಕಾರಣಿಗಳಲ್ಲಿ ಹೃದಯ ಪರಿಶುದ್ಧತೆ, ಮಾನಸಿಕ ಪರಿಶುದ್ಧತೆ ಅಂದರೆ ಹೃನ್ಮನಗಳೆರಡೂ 'ಸತ್ಯನಿಷ್ಠೆ' ಯಲ್ಲಿ ಕೂಡಿರಬೇಕು. ಸಚ್ಚಾರಿತ್ರ್ಯ, ನಡತೆ, ಅತ್ಯಂತ ಮುಖ್ಯ. ಪ್ರಾತಿನಿಧಿಕ ಜನತಂತ್ರದ ಬಗ್ಗೆ ಏನೇ ಒಡಕು ಮಾತು ಕೇಳಿಬಂದರೂ ಅದರ ನೈತಿಕ ನೈಷ್ಠಾನು ಸಂಧಾನದ ಬಗ್ಗೆ ಅಪಶಬ್ಧ ಕೇಳಿ ಬಂದಿಲ್ಲ. ಆದುದರಿಂದ ಭಾರತದ ಭವಿಷ್ಯವು ಈ ಹೊಸ ತಿರುವಿನಿಂದ ಭದ್ರವಾಗಬೇಕಾಗಿದೆ. ಅದರ ಭದ್ರ ತಳಹದಿ ಪಾಟೀಲರಂತಹ ಧೀಮಂತ ವ್ಯಕ್ತಿಗಳಿಂದ ಮಾತ್ರ ಸಾಧ್ಯ.

ಬರಗಾಲ ಪರಿಹಾರ ಕೆಲಸಗಳಿಗೆ ರಾಜ್ಯದಾದ್ಯಂತ ಸಂಚರಿಸಿದ ಪಾಟೀಲರು ಗ್ರಾಮಾಂತರ ಜನತೆಯ ಬವಣೆಗಳ ನಿವಾರಣೆಗೆ ಅವಿರತವಾಗಿ ಶ್ರಮಿಸಿದರು. ಚುನಾವಣೆ ಪೂರ್ವ ರಾಜ್ಯದ ಹೆಸರನ್ನು ಕರ್ನಾಟಕ ಎಂದು ಪುನರ್ ನಾಮಕರಣ ಮಾಡುವುದಾಗಿ ಇಂದಿರಾ ಕಾಂಗ್ರೆಸ್ ಪಕ್ಷ ತನ್ನ ಚುನಾವಣಾ ಪ್ರಣಾಳಿಕೆಯಲ್ಲಿ ಭರವಸೆ ನೀಡಿದ್ದಿತು. ಒಂದು ಕಾಲಕ್ಕೆ ಕರ್ನಾಟಕ ನಾಮಕರಣ ವಿರೋಧಿಸಿದ ಮೈಸೂರು ಭಾಗದ ಶ್ರೀ ಅರಸು ಮುಖ್ಯಮಂತ್ರಿಯಾಗಿದ್ದರೂ ಪಕ್ಷ ತನ್ನ ಭರವಸೆಯಿಂದ ಹಿಂದೆ ಸರಿಯದಂತೆ ವಾತಾವರಣ ನಿರ್ಮಾಣವಾಗಿದ್ದಿತು. ಮೇ 4 ರಂದು ಸಚಿವ ಸಂಪುಟ ರಾಜ್ಯದ ಹೆಸರು ಕರ್ನಾಟಕ ಎಂದು ನಿರ್ಧರಿಸಿತು. ಕರ್ನಾಟಕ ನಾಮಕರಣ ಮಸೂದೆಯನ್ನು ವಿಧಾನಸಭೆಯಲ್ಲಿ ಶ್ರೀ ದೇವರಾಜ ಅರಸರು ಮಂಡಿಸಿದರೆ ವಿಧಾನ ಪರಿಷತ್ತಿನಲ್ಲಿ ಈ ಮಸೂದೆಯನ್ನು ಶ್ರೀ ಕೆ.ಎಚ್. ಪಾಟೀಲರು ಮಂಡಿಸಿದರು.

ಧಾರವಾಡ ಕೃಷಿ ಕಾಲೇಜನ್ನು ಕೃಷಿ ವಿಶ್ವವಿದ್ಯಾನಿಲಯವನ್ನಾಗಿ ಮಾಡಲು ವಿಶ್ವವಿದ್ಯಾನಿಲಯ ಧನ ಸಹಾಯ ಆಯೋಗದೊಂದಿಗೆ, ಅಂಕಿ ಅಂಶಗಳೊಂದಿಗೆ ಸುಧೀರ್ಘ ಚರ್ಚೆ ನಡೆಸಿದ ಪಾಟೀಲರು ಧಾರವಾಡ ಕೃಷಿ ವಿಶ್ವವಿದ್ಯಾನಿಲಯ ಸ್ಥಾಪನೆ ಖಚಿತವೆಂದು ಘೋಷಿಸಿದರು. ಪಾಟೀಲರು ಪ್ರತಿ ಜಿಲ್ಲೆಗೆ ಕೃಷಿ ಶಾಲೆ ಸ್ಥಾಪಿಸಿಲಾಗುವುದೆಂದರು. ರಶಿಯಾದ ನೆರವಿನಿಂದ ರಾಜ್ಯದಲ್ಲಿ ಟ್ರಾಕ್ಟರ್ ತಯಾರಿಕಾ ಕಾರ್ಖಾನೆ ಸ್ಥಾಪಿಸುವ ಯೋಜನೆ ಸಿದ್ಧಪಡಿಸಿದ ಪಾಟೀಲರು ಸಹಕಾರ ರಂಗದಲ್ಲಿ ರೈತರು ಸಂಘಟಿತರಾಗಿ ತಮ್ಮ ಎಲ್ಲ ಉತ್ಪಾದನೆಗಳ ಸಂಸ್ಕರಣಾ ಘಟಕಗಳನ್ನು ಸ್ಥಾಪಿಸಬೇಕೆಂದು ಜನಜಾಗೃತಿ ಮೂಡಿಸಿದರು.

ಗ್ರಾಮಾಂತರ ಪ್ರದೇಶದಲ್ಲಿ ಉಗ್ರಾಣಗಳನ್ನು ರೈತರ ಲಕ್ಷ್ಮಿ ಮಂದಿರಗಳೆಂದು ಬಣ್ಣಿಸಿದ ಪಾಟೀಲರು ರಾಜ್ಯದಾದ್ಯಂತ ಗ್ರಾಮಾಂತರ ಪ್ರದೇಶಗಳಲ್ಲಿ ಉಗ್ರಾಣಗಳ ನಿರ್ಮಾಣಕ್ಕೆ ಚಾಲನೆ ನೀಡಿದರು. ಆಹಾರ ಮಂತ್ರಿಯಾಗಿ ಚುರುಕಾಗಿ ಕೆಲಸ ಮಾಡಲಾರಂಭಿಸಿದ ಪಾಟೀಲರು ಅಕ್ರಮ ಸಂಗ್ರಹ, ಕಳ್ಳ ವ್ಯಾಪಾರ ನಿಲ್ಲಿಸಲು ಕರಡು ಶಾಸನ ಸಿದ್ಧಪಡಿಸಿದರು. ಅಕ್ರಮ ಸಂಗ್ರಹದ ಧಾನ್ಯವನ್ನು ಸರಕಾರ ಪರಿಹಾರ ನೀಡದೆ ವಶಪಡಿಸಿಕೊಳ್ಳುವುದೆಂದು ವರ್ತಕರಿಗೆ ಎಚ್ಚರಿಕೆ ನೀಡಿದ ಅವರು ರಾಜ್ಯದಲ್ಲಿ ಅಕ್ರಮ ಸಂಗ್ರಹ ಪತ್ತೆಗೆ ವ್ಯಾಪಕ ದಾಳಿ ನಡೆಸುವಂತೆ ಮಾಡಿ ಲೆವಿ ಸಂಗ್ರಹದಲ್ಲಿ ದಾಖಲೆ ಸ್ಥಾಪಿಸಿದರು.

ಸಹಕಾರಿ ಸಂಸ್ಥೆಗಳನ್ನು ಕಟ್ಟಲು ಜನಬಲ ಮುಖ್ಯ ಹಾಗೂ ಹಣ ಅಲ್ಲವೆಂದು ಘೋಷಿಸಿದ ಪಾಟೀಲರು ಈ ಕಾಲದಲ್ಲಿ ಗದಗ ಪರಿಸರದಲ್ಲಿ ಸರ್ಜಿಕಲ್ ಕಾಟನ್, ದಿ. ಫಾರ್ಮರ್ಸ್ ಕೋ-ಆಫ್ ಆಯಿಲ್ ಸೀಡ್ಸ್ ಸೊಸಾಯಿಟಿ, ಶ್ರೀ ವೀರನಾರಾಯಣ ಪವರ್‌ಲೂಮ್ ಸೊಸಾಯಿಟಿ, ಗದಗ ನೇಕಾರರ ಅಭಿವೃದ್ಧಿ ಸಹಕಾರಿ ಸಂಘ, ಬೆಟಗೇರಿಯಲ್ಲಿ ಪ್ರತ್ಯೇಕ ಬಸ್ ನಿಲ್ದಾಣ, ರೈಲ್ವೆ ಓವರ್‌ಬ್ರಿಡ್ಜ್ ಜೊತೆಗೆ ಗದಗ ನಗರಕ್ಕೆ ಅನೌಪಚಾರಿಕ ಪಡಿತರ ಜಾರಿಗೊಳಿಸಿದರು.

ಶ್ರೀ ಕೆ.ಎಚ್. ಪಾಟೀಲರ ಉಸಿರು ರಚನಾತ್ಮಕ ಕೆಲಸಗಳು. ಅವರು ಸಂಸ್ಥೆಗಳ ಸೃಷ್ಟಿಕರ್ತರೂ ಹೌದು. ಅದಕ್ಕಾಗಿಯೇ ಅವರು ಸಚಿವರಾಗಿದ್ದಾಗ ಕರ್ನಾಟಕ ಅಗ್ರೋ ಇಂಡಸ್ಟ್ರೀಸ್ ಕಾರ್ಪೊರೇಶನ್, ಫಾರೆಸ್ಟ್ ಇಂಡಸ್ಟ್ರೀಸ್ ಕಾರ್ಪೊರೇಶನ್ ಮುಂತಾದವುಗಳು ಚೈತನ್ಯ ಪಡೆದವು.

ಕೃಷಿ ಅರಣ್ಯ ನಾಗರಿಕ ಪೂರೈಕೆ ಸಚಿವರಾಗಿದ್ದ ಅವಧಿಯಲ್ಲಿ ಅವರು ತಾವು ನಿರ್ವಹಿಸಿದ ಇಲಾಖೆಗಳಿಗೆ ಘನತೆ ತಂದರು. ರೈತರ ಅನುಕೂಲಕ್ಕಾಗಿ ಪ್ರತಿ ಜಿಲ್ಲೆಗೆ ಮಣ್ಣು ಪರೀಕ್ಷಾ ಪ್ರಯೋಗಾಲಯಗಳನ್ನು ವಿಸ್ತರಿಸಿ ಪ್ರತಿ ಉಪ ವಿಭಾಗಕ್ಕೊಂದು ಸಂಚಾರಿ ಪ್ರಯೋಗಾಲಯ ವ್ಯವಸ್ಥೆ ಮಾಡಿದ ಶ್ರೇಯಸ್ಸು ಅವರದು. ರಾಸಾಯನಿಕ ಗೊಬ್ಬರದ ವಿತರಣೆಯಲ್ಲಿ ಮಧ್ಯವರ್ತಿಗಳನ್ನು ತೆಗೆದುಹಾಕಿ ಸಹಕಾರ ರಂಗಕ್ಕೆ ಆ ಹೊಣೆಗಾರಿಕೆಯನ್ನು ವರ್ಗಾಯಿಸಿದರು. ಭೂ ಸಾರ ಸಂರಕ್ಷಣೆ ಕ್ಷೇತ್ರದಲ್ಲಿ ವ್ಯಾಪಕ ಕೆಲಸ ಮಾಡಿ ರೈತರ ಶೋಷಣೆ ಕಡಿಮೆ ಮಾಡಲು ಹಾಗೂ ಆತನ ಉತ್ಪಾದನೆಗೆ ಹೆಚ್ಚಿನ ಬೆಲೆ ದೊರೆಯಲು ಅನುಕೂಲವಾಗುವ ಕೃಷಿ ಆಧಾರಿತ ಕೈಗಾರಿಕೆಗಳ ಬೆಳವಣಿಗೆಗೆ ಚಾಲನೆ ನೀಡಿ ಚೈತನ್ಯ ತುಂಬಿದರು. ಅರಣ್ಯ ಭೂಮಿಯನ್ನು ಚಿಲ್ಲರೆ ಉದ್ದೇಶಗಳಿಗೆ ಬಳಸುವುದನ್ನು ತಡೆಯಲು ಕಾನೂನು ರಚಿಸಿದರು. ದೇಶ ಈ ದೃಷ್ಟಿಕೋನ ಮೆಚ್ಚಿಕೊಂಡಿತು. ಅನಂತರ ಅದು ದೇಶಾದ್ಯಂತ ವಿಸ್ತರಿಸಲ್ಪಟ್ಟಿತು.

ಅರಣ್ಯ ಇಲಾಖೆಯ ಆದಾಯ ಹಲವಾರು ಪಟ್ಟು ಹೆಚ್ಚಾಯಿತು. ತುರ್ತು ಪರಿಸ್ಥಿತಿ ಕಾಲದಲ್ಲಿ ಪ್ರಧಾನಿ ಪ್ರಕಟಿಸಿದ 20 ಅಂಶಗಳ ಕಾರ್ಯಕ್ರಮದ ಪರಿಣಾಮಕಾರಿ ಅನುಷ್ಠಾನಕ್ಕಾಗಿ ಪಾಟೀಲರು ಪಕ್ಷದ ಯಂತ್ರವನ್ನು ಸಜ್ಜುಗೊಳಿಸಿದರು. ಪ್ರತಿ ಗ್ರಾಮಕ್ಕೆ 5 ಜನ ಸದಸ್ಯರ ಸಮಿತಿ ರಚಿಸಿದರು. ಬಡಜನತೆಗೆ ದುರ್ಬಲರಿಗೆ ಕಾರ್ಯಕ್ರಮಗಳ ಲಾಭ ಮುಟ್ಟಿಸುವಂತೆ ಶ್ರಮವಹಿಸಿ ಕೆಲಸ ಮಾಡಲು ಪಕ್ಷದ ಕಾರ್ಯಕರ್ತರನ್ನು ಹುರಿದುಂಬಿಸಿದರು. ಬ್ಲಾಕ್, ಜಿಲ್ಲಾ ಹಾಗೂ ರಾಜ್ಯ ಹೀಗೆ ಮೂರು ಹಂತದ ಪಕ್ಷದ ವ್ಯವಸ್ಥೆಯನ್ನು ಪರಿಣಾಮಕಾರಿಯಾಗಿ ಜಾರಿಗೆ ತಂದರು. ಕೆ.ಪಿ.ಸಿ.ಸಿ. ಯಲ್ಲಿ ಹಲವಾರು ಘಟಕಗಳನ್ನು ರಚಿಸಿದರು.

ಕೇವಲ ಹೈಸ್ಕೂಲ್ ಶಿಕ್ಷಣ ಮುಗಿಸುತ್ತಲೇ ಸಾರ್ವಜನಿಕ ಜೀವನಕ್ಕೆ ಧುಮುಕಿದ ಪಾಟೀಲರಿಗೆ ಕಾಲೇಜ್ ಶಿಕ್ಷಣ ಪಡೆಯಲು ಸಾಧ್ಯವಾಗಿರಲಿಲ್ಲ. ವಿರಾಮಕಾಲದಲ್ಲಿ ತಮ್ಮನ್ನು ತಾವು ಎಂ.ಎ. (ರಾಜಕೀಯ ಶಾಸ್ತ್ರ) ವ್ಯಾಸಂಗಕ್ಕೆ ತೊಡಗಿಸಿಕೊಂಡರು. 53 ಸಂವತ್ಸರ ಕಂಡಿದ್ದ ಪಾಟೀಲರು ಮೈಸೂರು ವಿಶ್ವವಿದ್ಯಾನಿಲಯದ ಮಾನಸ ಗಂಗೋತ್ರಿಯಲ್ಲಿ ಶಿಸ್ತಿನ, ಅಧ್ಯಯನಶೀಲ ವಿದ್ಯಾರ್ಥಿಯೆನಿಸಿಕೊಂಡರು. ಎಂ.ಎ. ಉನ್ನತ ಶ್ರೇಣಿಯಲ್ಲಿ ತೇರ್ಗಡೆ ಹೊಂದಿದ ಪಾಟೀಲರು ತಮಗಿದ್ದ ಪದವಿ ಇಲ್ಲದ ಕೊರತೆಯನ್ನು ತುಂಬಿಕೊಂಡರು.

ಶ್ರೀ ಕೆ.ಎಚ್. ಪಾಟೀಲರು ತಮ್ಮ ಮತಕ್ಷೇತ್ರದಲ್ಲಿ ಶೈಕ್ಷಣಿಕ ಸಂಸ್ಥೆಗಳನ್ನು ಕಟ್ಟುವ ಕೆಲಸಕ್ಕೆ ಈ ಕಾಲದಲ್ಲಿ ಹೆಚ್ಚು ಅರ್ಪಿತರಾದರು. ಗದಗ ಪರಿಸರದಲ್ಲೇ ತಾಂತ್ರಿಕ ವಿದ್ಯಾಲಯ ಸ್ಥಾಪನೆ ಅವರ ಕನಸಾಗಿತ್ತು. ಅವರ ಒಂದು ಪ್ರಯತ್ನವನ್ನು ಹಿಂದೆ ರಾಜ್ಯ ಸರಕಾರ ವಿಫಲಗೊಳಿಸಿತು. ಎಡೆಬಿಡದ ತ್ರಿವಿಕ್ರಮನಂತೆ ಪಾಟೀಲರು ಪ್ರಯತ್ನಿಸಿದ್ದರ ಫಲವಾಗಿ ಹುಲುಕೋಟಿಯಲ್ಲಿ ಪಾಲಿಟೆಕ್ನಿಕ್ ಕಾಲೇಜು ಸ್ಥಾಪನೆಗೆ 1980ರ ಜುಲೈ ತಿಂಗಳಲ್ಲಿ ಸರಕಾರ ಮಂಜೂರಾತಿ ನೀಡಿತು. ದಿ. ಫಾರ್ಮರ್ಸ್ ಕೋ-ಆಫ್. ಸ್ಪಿನ್ನಿಂಗ್ ಮಿಲ್ಲಿನ ಅಡಿಗಲ್ಲು ಹಾಗೂ ಪಾಲಿಟೆಕ್ನಿಕ್ ಕಾಲೇಜಿನ ಉದ್ಘಾಟನೆಗೆ ಆಗಮಿಸಿದ ಮುಖ್ಯಮಂತ್ರಿ ಶ್ರೀ ಆರ್. ಗುಂಡೂರಾವ್‌ರವರು ಸಮಾರಂಭದ ಸ್ಥಳದಲ್ಲಿಯೇ ರೂರಲ್ ಟೆಕ್ನಿಕಲ್ ಎಜ್ಯುಕೇಶನ್ ಸೊಸಾಯಿಟಿಗೆ ಹಾಗೂ ಎಂಜಿನಿಯರಿಂಗ್ ಕಾಲೇಜು ಸ್ಥಾಪಿಸಲು ಸರಕಾರ ಮಂಜೂರಾತಿ ನೀಡಿದೆ ಎಂದು ಪ್ರಕಟಿಸಿದರು. ಪಾಟೀಲರು ಈ

ಎರಡೂ ತಾಂತ್ರಿಕ ಮಹಾವಿದ್ಯಾಲಯಗಳ ಹಾಗೂ ಹೊಸ ಮಿಲ್ಲಿನ ನಿರ್ಮಾಣದಲ್ಲಿ ತಮ್ಮನ್ನು ತಾವು ಸಂಪೂರ್ಣವಾಗಿ ತೊಡಗಿಸಿಕೊಂಡಿದ್ದರಿಂದಲೇ ಈ ಸಂಸ್ಥೆಗಳು ಬಹು ಬೇಗ ಪ್ರಸಿದ್ಧಿ ಪಡೆಯಿತು.

ಶ್ರೀ ಕೆ.ಎಚ್. ಪಾಟೀಲರಿಗೆ 1983ರಲ್ಲಿ ವಿಧಾನಸಭಾ ಚುನಾವಣೆಯಲ್ಲಿ ಪಕ್ಷದ ಟಿಕೇಟು ನಿರಾಕರಿಸಲ್ಪಟ್ಟಿತು. ರಾಜ್ಯದಲ್ಲಿ ಕಾಂಗ್ರೆಸ್ ಪಕ್ಷ ಮೊದಲ ಸಲ ಅಧಿಕಾರ ಕಳೆದುಕೊಂಡಿತು. ಇಂತಹ ಸನ್ನಿವೇಶದಲ್ಲಿ ಪಕ್ಷ ಕಟ್ಟುವ ಕೆಲಸ ಶ್ರೀ ಕೆ.ಎಚ್. ಪಾಟೀಲರಿಂದ ಮಾತ್ರ ಸಾಧ್ಯ ಎಂದು ಮನಗಂಡಿದ್ದ ಶ್ರೀಮತಿ ಇಂದಿರಾಗಾಂಧಿ ಜೂನ್ 25ರಂದು ಕೆ.ಪಿ.ಸಿ.ಸಿ. ಅಧ್ಯಕ್ಷರನ್ನಾಗಿ ಪಾಟೀಲರನ್ನು ನೇಮಕ ಮಾಡಿದರು. ದಿಲ್ಲಿಗೆ ಧಾವಿಸಿದ ಪಾಟೀಲರು ಶ್ರೀಮತಿ ಇಂದಿರಾ ಗಾಂಧಿಯವರ ಜೊತೆ ವ್ಯಾಪಕ ಸಮಾಲೋಚನೆ ನಡೆಸಿ ಕೆ.ಪಿ.ಸಿ.ಸಿ. ಅಧ್ಯಕ್ಷರಾಗಿ ಅಧಿಕಾರ ಸ್ವೀಕರಿಸಿದರು.

ಕೆ.ಪಿ.ಸಿ.ಸಿ. ಅಧ್ಯಕ್ಷರಾದ ನಂತರ ಪಾಟೀಲರು ರಾಜ್ಯದಲ್ಲಿ ಪಕ್ಷ ಕಟ್ಟಲು ಅವಿಶ್ರಾಂತ ಶ್ರಮಿಸಿದರು. 1984ರ ಪದವೀಧರ ಮತಕ್ಷೇತ್ರದಿಂದ ತಮ್ಮ ಪಕ್ಷದಿಂದ ಜೇಷ್ಠ ಪುತ್ರ ಶ್ರೀ ಹೆಚ್.ಕೆ. ಪಾಟೀಲರನ್ನು ಸ್ಪರ್ಧೆಗಿಳಿಸಬೇಕೆಂದು ಕೆಲವು ಹಿರಿಯ ಧುರೀಣರು ಪ್ರಯತ್ನಿಸಿದಾಗ ಅವರಿಗೆಲ್ಲ ತಣ್ಣೀರೆರಚಿದ ಪಾಟೀಲರು ತಾವು ಪುತ್ರನಿಗೆ ಬೆಂಬಲ ನೀಡಿದರೆಂಬ ಅಪಾದನೆಗೊಳಗಾಗಲು ಅವಕಾಶ ನೀಡಲಿಲ್ಲ. ಪಕ್ಷ ಪಕ್ಷೇತರಿಗೆ ಬೆಂಬಲ ನೀಡಲು ನಿರ್ಧರಿಸಿತು. ಶ್ರೀ ಹೆಚ್.ಕೆ. ಪಾಟೀಲರು ಧಾರವಾಡ, ಕಾರವಾರ-ಶಿವಮೊಗ್ಗ ಜಿಲ್ಲೆಗಳನ್ನೊಳಗೊಂಡ ನೈಋತ್ಯ ಪದವೀಧರ ಮತಕ್ಷೇತ್ರದಿಂದ ಕಾಂಗ್ರೆಸ್ ಬೆಂಬಲಿತ ಅಭ್ಯರ್ಥಿಯಾಗಿ ಆಯ್ಕೆಯಾಗಿ ತಂದೆಯ ಘನತೆಗೆ ಮೆರುಗು ತಂದರು. ಪುತ್ರನ ವಿಜಯದಿಂದ ಆನಂದಿತರಾದ ಪಾಟೀಲರು ಪಕ್ಷ ಕಟ್ಟುವ ಕೆಲಸದಲ್ಲಿ ತೊಡಗಿದ್ದಾಗಲೇ 1984ರ ನವೆಂಬರ್ ಕೊನೆ ದಿನ ಈ ದೇಶದ ಬಡವರ ಆಶಾಜ್ಯೋತಿಯಾಗಿದ್ದ ಪ್ರಧಾನಿ ಶ್ರೀಮತಿ ಇಂದಿರಾಗಾಂಧಿ ಅವರು ತಮ್ಮ ಅಂಗರಕ್ಷಕನ ಗುಂಡಿಗೆ ಬಲಿಯಾಗಿ ತರುಣ ಶ್ರೀ ರಾಜೀವ ಗಾಂಧಿ ಪ್ರಧಾನಿಯಾಗಿ ಅಧಿಕಾರ ವಹಿಸಿಕೊಂಡರು. 1984ರ ಕೊನೆಯಲ್ಲಿ ಲೋಕಸಭೆಗೆ ನಡೆದ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷ ಐತಿಹಾಸಿಕ ವಿಜಯ ಗಳಿಸಿತು.

ರಾಜ್ಯ ವಿಧಾನಸಭೆ ಚುನಾವಣೆಯಲ್ಲಿ ಪಾಟೀಲರು ಶ್ರೀ ರೊಟ್ಟಿಯವರನ್ನು ಪರಾಭವಗೊಳಿಸಿದರು. ಆದರೆ ಅವರ ಪಕ್ಷ ಅಧಿಕಾರಕ್ಕೆ ಬರಲು ವಿಫಲವಾಯಿತು. ಸೋಲಿನ ನೈತಿಕ ಹೊಣೆ ಹೊತ್ತ ಪಾಟೀಲರು ಕೆ.ಪಿ.ಸಿ.ಸಿ. ಅಧ್ಯಕ್ಷತೆ ತ್ಯಜಿಸಿದರು.

ಜಾಗೃತ ಶಾಸಕರೆನಿಸಿದ ಪಾಟೀಲರು ಶಾಸನಸಭೆಯಲ್ಲಿ ಸದಾ ಹಾಜರಾಗಿ ಸಕ್ರಿಯವಾಗಿ ಪಾಲುಗೊಳ್ಳುತ್ತಿದ್ದರು. ರಚನಾತ್ಮಕ ಧೋರಣೆಯ ಬಗ್ಗೆ ಅವರಿಗೆ ಅಪಾರ ಗೌರವವಿತ್ತು. ಸಹಕಾರ, ಕೃಷಿ, ಕೈಗಾರಿಕಾ ಹಾಗೂ ಮಾರುಕಟ್ಟೆ ವಿಷಯಗಳಲ್ಲಿ ಅಧಿಕಾರಯುತವಾಗಿ ಮಾತನಾಡುತ್ತಿದ್ದ ಪಾಟೀಲರ ಸಲಹೆಗಳಿಗೆ ಸರಕಾರ ಸದಾ ಸ್ವಾಗತ ನೀಡುತ್ತಿತ್ತು.

ಕರ್ನಾಟಕದ ಶ್ರೇಷ್ಠ ರಾಜಕಾರಣಿಗಳಲ್ಲಿ ಅಗ್ರಮಾನ್ಯ ಪಂಕ್ತಿಗೆ ಸೇರಿದವರು ಶ್ರೀ ಪಾಟೀಲರು. ಅಖಿಲ ಭಾರತ ರಾಜಕಾರಣಿಗಳಲ್ಲಿ ಪ್ರಭಾವಶಾಲಿಯಾದ ಸ್ಥಾನವನ್ನು ಉಳಿಸಿಕೊಂಡಿದ್ದಾರೆ.

ದೃಢವಾದ ನಂಬಿಕೆ, ಸ್ಪಷ್ಟ ಅಭಿಪ್ರಾಯಗಳು, ತಮ್ಮ ಅಭಿಪ್ರಾಯಗಳ ನಿರ್ಭೀತ ಪ್ರಕಟನೆ, ಮಾತಿಗೂ ಕೃತಿಗೂ ಸಮತೆಯನ್ನು ಹೊಂದಿಸಲು ಸತತ ಪ್ರಯತ್ನ, ನಡತೆಯಲ್ಲಿ, ಬಾಳಿನ ಪೂರ್ತಿ ಅರಗಿಸಿಕೊಂಡಿರುವ ಸುಸಂಸ್ಕೃತಿಯ ಒಂದು ಮೆರಗು, ಇವು ಇವರ ಸ್ವಭಾವನಜನ್ಯ ವಿಶಿಷ್ಟ ಗುಣಗಳಾಗಿವೆ. ಹಿಡಿದ ಕೆಲಸವನ್ನು ಬಿಡದೆ ಮಾಡುವ, ಮಾಡುವ ಕೆಲಸವನ್ನು ದೊಡ್ಡದಾಗಿ ಸಾಧಿಸುವ ಛಲದವರು, ಶಿಸ್ತಿನ ಸಿಪಾಯಿ, ದಣಿವರಿಯದ ಶ್ರಮಜೀವಿ, ಆಡಳಿತ ನಿಷ್ಠೆಯಲ್ಲಿ ಬಿಡದ ಪಟ್ಟು ಇವರದು. ಕೇವಲ ರಾಜಕಾರಣಿ ಎಂಬುದರಿಂದಷ್ಟೇ ಶ್ರೀ ಪಾಟೀಲರು ದೊಡ್ಡ ವ್ಯಕ್ತಿಯಾಗಿಲ್ಲ ಅವರಲ್ಲಿರುವ ಆದರ್ಶ ಗುಣಗಳು ಅವರ ದೊಡ್ಡತನಕ್ಕೆ ಕಾರಣವಾಗಿವೆ. ಆದರ್ಶ ರಾಜಕಾರಣಿಯ ವಿಶಿಷ್ಟ ಗುಣಗಳ ಗುಣ ಶ್ರೀ ಪಾಟೀಲರದು.

1986ರ ಮಾರ್ಚ್ ತಿಂಗಳಲ್ಲಿ ಅಖಿಲ ಭಾರತ ಸಹಕಾರ ನೂಲಿನ ಗಿರಣಿಗಳ ಮಹಾಮಂಡಲದ ಅಧ್ಯಕ್ಷರಾಗಿ ಅವಿರೋಧವಾಗಿ ಆಯ್ಕೆಯಾದ ಪಾಟೀಲರಿಗೆ ರಾಷ್ಟ್ರದ ಶ್ರೇಷ್ಠ ಸಹಕಾರಿ ಎಂದು ರಾಷ್ಟ್ರಮಟ್ಟದ ಪ್ರಶಸ್ತಿಯನ್ನು ಇಫ್ಕೊ ಸಂಸ್ಥೆ ನೀಡಿತು. 1988ರ ಫೆಬ್ರವರಿಯಲ್ಲಿ ಪ್ಯಾರೀಸ್‌ನಲ್ಲಿ ನಡೆದ ಸಹಕಾರ ಕುರಿತ ಅಂತರಾಷ್ಟ್ರೀಯ ಸಮ್ಮೇಳನದಲ್ಲಿ ಪಾಲ್ಗೊಂಡ ಪಾಟೀಲರು ಇಂಟರ್‌ನ್ಯಾಶನಲ್ ಕಮಿಟಿ ಆಫ್ ಪ್ರೊಡ್ಯೂಸರ್ಸ್ ಆ್ಯಂಡ್ ಆರ್ಟಿಸನಲ್ ಕೋ-ಆಪರೇಶನ್ ಎಂಬ 100 ದೇಶಗಳ ಸದಸ್ಯತ್ವದ ಅಂತರಾಷ್ಟ್ರೀಯ ಸಹಕಾರ ಸಂಸ್ಥೆ 'ಸಿಕೋಪಾ'ದ ಅಧ್ಯಕ್ಷರಾಗಿ ಆಯ್ಕೆಯಾದರು. ಹಳ್ಳಿಯ ಪಂಚಾಯತಿಯ ಚೇರಮನ್ 100 ದೇಶಗಳ ಸಂಘಟನೆಯ ಅಧ್ಯಕ್ಷರಾದುದು ನಾಡಿನ ಗ್ರಾಮೀಣ ನಾಯಕತ್ವಕ್ಕೆ ಸಂದ ಗೌರವವಾಗಿದ್ದಿತು. ಸಹಕಾರವೇ ಉಸಿರಾಗಿದ್ದ ಪಾಟೀಲರು ಆಸ್ಟ್ರೇಲಿಯಾದ ಸಿಡ್ನಿಯಲ್ಲಿ ನಡೆದ ಅಂತರರಾಷ್ಟ್ರೀಯ ಸಹಕಾರ ಸಮ್ಮೇಳನದಲ್ಲಿ ಪಾಲ್ಗೊಂಡರು. ರಾಜ್ಯದಲ್ಲಿ ಸಹಕಾರ ಸಂಘ ಚಳವಳಿ ಬೆಳೆಯಲು ಅವಿರತ ಶ್ರಮಿಸಿದರು.

1989ರ ಚುನಾವಣೆಯಲ್ಲಿ ಶ್ರೀ ಕೆ.ಎಚ್. ಪಾಟೀಲರು ಗದಗ ಮತಕ್ಷೇತ್ರದಲ್ಲಿ ತಮ್ಮ ಪ್ರತಿಸ್ಪರ್ಧಿ ಶ್ರೀ ಮುತ್ತಿನಪೆಂಡಿಮಠರನ್ನು ಬಾರಿ ಮತಗಳ ಅಂತರದಿಂದ ಸೋಲಿಸಿ ವಿಧಾನಸಭೆ ಪ್ರವೇಶಿಸಿದರು. ಅವರ ಜೊತೆ ಪಕ್ಷವೂ ಅಧಿಕಾರಕ್ಕೆ ಬಂದಿತು. ಶ್ರೀ ವೀರೇಂದ್ರ ಪಾಟೀಲರು ಮುಖ್ಯಮಂತ್ರಿಯಾದರೂ ಅವರ ಸಂಪುಟಕ್ಕೆ ಪಾಟೀಲರು ಸೇರಲು 5 ತಿಂಗಳ ವಿಳಂಬವಾಯಿತು. 1990ರ ಮೇ ತಿಂಗಳ ಮೊದಲ ವಾರದಲ್ಲಿ ಶ್ರೀ ವೀರೇಂದ್ರ ಪಾಟೀಲರ ಸಂಪುಟ ಸೇರಿದ ಪಾಟೀಲರು ಕಂದಾಯ ಹಾಗೂ ಕಾರ್ಮಿಕ ಖಾತೆ ಸಚಿವರಾದರು. ಜನಸೇವೆಯ ಮೂಲಕ ಜನಾರ್ಧನನ ಪ್ರೀತಿಗಳಿಸುವುದೇ ಜೀವನದ ಗುರಿ ಎಂದು ಘೋಷಿಸಿದ ಪಾಟೀಲರು ಕಂದಾಯ ಮಂತ್ರಿಯಾದ ತಕ್ಷಣ ಕೃಷಿ ಕುಟುಂಬಕ್ಕೆ ಪಾಸ್ ಬುಕ್ ನೀಡುವುದಾಗಿ ಪ್ರಕಟಿಸಿದರು. ಲಂಬಾಣಿ ತಾಂಡಗಳನ್ನು ಕಂದಾಯ ಹಳ್ಳಿಗಳನ್ನಾಗಿ ಮಾಡುವುದಾಗಿ ಘೋಷಿಸಿದರು.

ಶ್ರೀ ಬಂಗಾರಪ್ಪ ಸಂಪುಟದಲ್ಲಿ ಕಂದಾಯ ಸಹಕಾರ ಮಂತ್ರಿಯಾದ ಪಾಟೀಲರು ಸಹಕಾರಿ ರಂಗದಲ್ಲಿ ಸರಕಾರಿ ಹಸ್ತಕ್ಷೇಪ ತಡೆಯಲು ಮಸೂದೆ ಮಂಡಿಸುವುದಾಗಿ ಪ್ರಕಟಿಸಿದರಲ್ಲದೆ

ಬಗೆಹರಿಯದೆ ಉಳಿದಿದ್ದ ಸಹಕಾರ ವಿವಾದಗಳ ಇತ್ಯರ್ಥಕ್ಕೆ ನಿತ್ಯ ನ್ಯಾಯಾಧೀಶರಾಗಿ ಕೆಲಸ ನಿರ್ವಹಿಸಿ ದಾಖಲೆ ಕೇಸುಗಳನ್ನು ಇತ್ಯರ್ಥಗೊಳಿಸಿದರು. ಗ್ರಾಮಾಂತರ ಪ್ರದೇಶದಲ್ಲಿ ಕುಡಿಯುವ ನೀರು ಪೂರೈಕೆಗೆ ಆದ್ಯತೆ ನೀಡಿದ ಪಾಟೀಲರು ತಮ್ಮ ಮತಕ್ಷೇತ್ರಕ್ಕೆ ತುಂಗಭದ್ರ ನೀರು ಪೂರೈಕೆಗೆ ಎಲ್ಲ ವ್ಯವಸ್ಥೆ ಮಾಡಿದರು. ಗದಗ ಜಿಲ್ಲಾ ರಚನೆಗೆ ನಾಂದಿಯಾಗಿ ಕೆ.ಎಸ್.ಆರ್.ಟಿ.ಸಿ. ವಿಭಾಗೀಯ ಕಛೇರಿ ಪ್ರಾರಂಭಿಸಿದರು. ಜಿಲ್ಲಾ ಪರಿಷತ್ ಕಾಯ್ದೆಗೆ ತಿದ್ದುಪಡಿ ರೂಪಿಸಿದರು.

ಪ್ರಜಾಸತ್ತಾತ್ಮಕ ವ್ಯವಸ್ಥೆಯ ಅಚಲ ವಿಶ್ವಾಸಿಯಾಗಿದ್ದ ಶ್ರೀ ಪಾಟೀಲರು ಈ ವ್ಯವಸ್ಥೆಯ ರಕ್ಷಣೆಗೆ ಅಪಾರವಾದ ಕಾಣಿಕೆ ಸಲ್ಲಿಸಿದ್ದಾರೆ. ಪ್ರಜಾಸತ್ತೆಯ ಹೆಸರಿನಲ್ಲಿ ಅಸಭ್ಯ ಸ್ವತಂತ್ರ ಪ್ರವೃತ್ತಿ ಬೆಳೆಯುವುದನ್ನು ಖಂಡಿತವಾಗಿ ಟೀಕಿಸುವ ಅವರು ಆಡಳಿತ ಶಿಥಲಗೊಂಡರೆ ಅದರಿಂದ ಪ್ರಜಾಸತ್ತೆಯ ಬೇರು ಸಡಿಲಗೊಳ್ಳುತ್ತದೆಂದು ಹೇಳುತ್ತಾರೆ. ಅವರ ಮಾತು ನೂರಕ್ಕೆ ನೂರರಷ್ಟು ಸತ್ಯ. ಆಡಳಿತ ದಕ್ಷತೆ ಅಭಿವೃದ್ಧಿಯ ದೃಷ್ಟಿಯಿಂದ ಅಷ್ಟೇ ಅಲ್ಲ, ಸಮಾಜದ ನೆಮ್ಮದಿಗೂ ಅಗತ್ಯ ಇದನ್ನು ಆಡಳಿತ ನಡೆಸುವವರು ಮತ್ತು ಆಡಳಿತದ ಅನುಕೂಲ ಪಡೆಯುವವರು ಇಬ್ಬರೂ ನೆನಪಿನಲ್ಲಿಟ್ಟುಕೊಳ್ಳಬೇಕು. ಆಡಳಿತದಲ್ಲಿ ನಿರ್ದಾಕ್ಷಿಣ್ಯರೆನಿಸಿದರೂ ಶ್ರೀ ಕೆ.ಎಚ್. ಪಾಟೀಲರು ಸ್ನೇಹ, ವಿಶ್ವಾಸಗಳಲ್ಲಿ ಅಷ್ಟೇ ಸರಳರು ಸಹೃದಯಿಗಳು. ಅವರ ಬದುಕು ಮತ್ತು ಸಾಧನೆಗಳ ಸ್ಮರಣೆ ನಮ್ಮ ಯುವ ಜನತೆಗೆ ಸ್ಫೂರ್ತಿಯಾಗಿದೆ.

ಶ್ರೀ ಕೆ.ಎಚ್. ಪಾಟೀಲರ ಸೇವೆಯನ್ನು ಕನ್ನಡ ನಾಡಿನ ಜನ ಸದಾ ನೆನೆಯುತ್ತದೆ. ಮನುಷ್ಯನು ಪ್ರೇರೇಪಿಸಬಲ್ಲ ಅಂಶ ವೈಚಾರಿಕತೆ ಅಥವಾ ವೈಚಾರಿಕತೆಯೊಡಗೂಡಿದ ರಾಜಕೀಯವಷ್ಟೇ ಅಲ್ಲ ಅವುಗಳಿಗೆ ಒಂದು ವಿಧದಲ್ಲಿ ತಳಹದಿಯಾಗಬಲ್ಲ ಭಕ್ತಿ-ಕರುಣೆ-ಶೌರ್ಯ ಮುಂತಾದವೂ ಉಂಟು. ಇದು ಪಾಟೀಲರಿಗೆ ಗೊತ್ತು. ಆದುದರಿಂದಲೇ ಅವರೆಂದಿಗೂ ಈರ್ಷೆ-ಅಸೂಯೆ-ಕೌಟಿಲ್ಯಗಳಿಂದ ಪ್ರೇರೇಪಿತರಾಗಲಿಲ್ಲ. ಶ್ರೀ ಪಾಟೀಲರವರದ್ದು ತುಂಬಿ ಹರಿಯುವ ಸ್ವಭಾವ, ಇಹ, ಪರ ಎರಡೂ ದಡಗಳನ್ನು ಚಾಚಿಕೊಂಡುದು ಅವರ ಓಘ. ಸಮಯ ಬಂದರೆ ದಬೆ ದಬೆಯಾಗಿ ಧುಮುಕಿ ಶಕ್ತಿ ಉತ್ಪಾದನೆಗೆ ಅಣಿಯಾಗುವ ಧೀರತನ ಇವರದು. ತನ್ನಿಂದ ಏನಾದರೂ ಬೆಳೆಯುವುದಾದರೆ ತಮ್ಮನ್ನು ತಾವೇ ನಾಲೆಯಾಗಿ ಸೀಳಿಕೊಳ್ಳುವುದಕ್ಕೂ ಸಿದ್ಧ. ಆದರೆ ಯಾವ ಅಣೆಕಟ್ಟೆಯೂ ಇವರ ಸೆಳೆವನ್ನೆಲ್ಲಾ, ಸೆಲೆಯನ್ನೆಲ್ಲಾ ತಡೆದು ತಬ್ಬಿಕೊಳ್ಳಲಾರದು.

ತನ್ನ ಅಧಿಕಾರಕ್ಕೆ ಸಂಚಕಾರ ಬರುತ್ತದೆಂದು ಗೊತ್ತಿದ್ದರೂ ಅದರ ಗತವೈಭವವನ್ನು ಸಾಕಾರಗೊಳಿಸಲು ಶ್ರಮಿಸಿದ ಅಸಾಧಾರಣ ವ್ಯಕ್ತಿ. ನಮ್ಮ ರಾಜ್ಯ ಹಸನಾಗಬೇಕು, ಸಮೃದ್ಧಿಯ ನಾಡಾಗಬೇಕು. ಪ್ರತಿ ಪ್ರಜೆಯೂ ಹೆಮ್ಮೆಪಡುವಂತಾಗಬೇಕೆಂದು ಸತತವಾಗಿ ದುಡಿಯುತ್ತಿದ್ದ ಚೇತನ. ಸತತ ಪರಿಶ್ರಮದ ದುಡಿತದಿಂದ ಪಾಟೀಲರ ದೇಹಸ್ಥಿತಿ ವಿಷಮಿಸಿತು. ಅದನ್ನು ಅಲಕ್ಷಿಸುತ್ತಲೇ ಬಂದರು. ಮೂತ್ರಪಿಂಡದ ತೊಂದರೆಯಿಂದ ಬಳಲಿದ ಪಾಟೀಲರು ದೂರದ ಮದ್ರಾಸದಲ್ಲಿ ಶಸ್ತ್ರ ಚಿಕಿತ್ಸೆಗೊಳಗಾದರು. ಚಿಕಿತ್ಸೆ ಯಶಸ್ವಿಯಾದರೂ ವಿಧಿಯ ಲೆಕ್ಕಾಚಾರ ಬೇರೆಯಾಗಿತ್ತು. 1992 ಫೆಬ್ರವರಿ ದಿ. 9ರ ಮುಂಜಾನೆ 11ರ ವೇಳೆಗೆ ತಮ್ಮ ಖಾಸಗಿ ವೈದ್ಯರ

ಜೊತೆ ಚರ್ಚಿಸುತ್ತಿದ್ದಾಗಲೇ ತೀವ್ರ ಹೃದಯಾಘಾತದಿಂದ ಪಾಟೀಲರು ಅಸ್ತಂಗತರಾದರು. ಸಹಕಾರ ಧ್ರುವತಾರೆ ಮರೆಯಾಯಿತು.

ಸರ್ವರ ಹಿತಕ್ಕಾಗಿ ದುಡಿಯುವವರನ್ನು ಗೌರವಿಸುವುದು ನಡೆದುಕೊಂಡು ಬಂದ ಒಂದು ಒಳ್ಳೆಯ ಸಂಪ್ರದಾಯ. ಈ ಗೌರವ ಪಡೆಯುವ ವ್ಯಕ್ತಿಗಳು ವಿರಳ. ಅಂತಹ ವಿರಳತೆಯಲ್ಲಿ ಎದ್ದು ಕಾಣುವ ವ್ಯಕ್ತಿ ಶ್ರೀ ಕೆ.ಎಚ್. ಪಾಟೀಲರು. ಸಾರ್ವಜನಿಕ ಜೀವನದಲ್ಲಿ ಸುದೀರ್ಘ ಕಾಲ ದುಡಿದಿರುವ ಶ್ರೀಯುತರು ಎಂದೆಂದೂ ಚಿರಸ್ಮರಣೀಯರು.

# ಭಾಗ - 2

## ಶಾಸನ ಸಭೆಯಲ್ಲಿ ಕೆ.ಹೆಚ್. ಪಾಟೀಲ್

## 1968-69ನೇ ಸಾಲಿನ ಆಯವ್ಯಯದ ಮೇಲಿನ ಸಾಮಾನ್ಯ ಚರ್ಚೆ

ಮಾನ್ಯ ಸಭಾಪತಿಗಳೇ, ನಾನು ಮಾನ್ಯ ಆರ್ಥಿಕ ಸಚಿವರು ಮಂಡಿಸಿದ ಬಜೆಟ್ಟನ್ನು ವಿರೋಧಿಸುತ್ತಾ ಕೆಲವು ಮಾತುಗಳನ್ನು ಹೇಳಬಯಸುತ್ತೇನೆ. ಈಗ ಮಾತನಾಡಿದವರು ನಿಜವಾಗಿಯೂ ಆರ್ಥಿಕ ಸಚಿವರನ್ನು ಅಭಿನಂದಿಸುತ್ತೇನೆಂದು ಹೇಳಿದರೂ ಕೂಡ ಸರಕಾರ ಮಾಡಿದ ಕೃತಿಗಳನ್ನು ವಿರೋಧಪಕ್ಷಕ್ಕಿಂತ ಕಟುವಾಗಿ ಟೀಕಿಸಿದ್ದಾರೆ. ಆದ್ದರಿಂದ ಸಂತೋಷವಾಗುತ್ತಿದೆ. ದೀಪಕ್ಕೆ ಮುತ್ತುಕೊಟ್ಟರೆ ಸುಡುತ್ತದೆ. ಆದರೆ ಸದಸ್ಯರ ಮೇಲೆ ಲೋಪದೋಷಗಳನ್ನು ತಿದ್ದುವ ಜವಾಬ್ದಾರಿಯಿದೆ. ನಾವು ಎಷ್ಟೇ ಹೇಳಿದರೂ ಬೋರ್ಗಲ್ಲ ಮೇಲೆ ಮಳೆ ಸುರಿದಂತೆ ಆಗುತ್ತಿದೆ. ಮಾನ್ಯ ರಾಮಕೃಷ್ಣ ಹೆಗಡೆಯ[illegible]ರು ನಮ್ಮ ಮುಂದೆ ಮಂಡಿಸಿದ ಬಜೆಟ್ಟನ್ನು ನೋಡಿದರೆ ನಿಜವಾಗಿಯೂ ಅವರು ಬಹಳ [illegible]ತುವರ್ಜಿಯಿಂದ ಶ್ರಮವಹಿಸಿ ತಯಾರಿಸಿ ಮಂಡಿಸಿರುವುದಕ್ಕಾಗಿ ಅವರಿಗೆ ಅಭಿನಂದನೆ ಸಲ್ಲಿಸಬೇಕಾಗುತ್ತದೆ. ಅವರು ಶಕ್ತಿಮೀರಿ ಹಿಡಿತಕ್ಕೆ ತರಲು ಪ್ರಯತ್ನ ಮಾಡಿದ್ದಾರೆ ಮತ್ತು ಈ ಸಭೆಗೆ ಗೊತ್ತಾದ ರೀತಿಯಲ್ಲಿ ಸಹ ಕೆಲವು ವಿಷಯಗಳನ್ನು ಬಚ್ಚಿಡುವುದಕ್ಕೆ ಪ್ರಯತ್ನ ಮಾಡಿದ್ದಾರೆ. ಅವರ ಈ ಮುತುವರ್ಜಿ ಅಭಿನಂದನೀಯವೇ ಸರಿ, ಅದೇನೇ ಇರಲಿ, ಇದು ಖೋತಾ ಬಜೆಟ್ಟಲ್ಲ, ಉಳಿತಾಯ ಬಜೆಟ್, ಇದಕ್ಕೆ ಬೆಲೆ ಬರಬೇಕೆಂದು ಹೆಚ್ಚುವರಿ ಬಜೆಟ್ ಶ್ರಮವಹಿಸಿ ತಯಾರಿಸಿದ್ದಾರೆ. ಹೊರಗೆ ಬೆಲೆ ಬರಬೇಕೆಂಬುದು ಅವರ ಉದ್ದೇಶ. ಆದರೆ ವಾಸ್ತವವಾಗಿ ಏನಿದೆ ಎಂಬುದನ್ನು ನೋಡೋಣ. ಈ ವಿಷಯವನ್ನು ಇದುವರೆಗೆ ಮಾತನಾಡಿರುವವರು ಆಗಲೇ ತಿಳಿಸಿರುವುದರಿಂದ ನಾನು ಹೆಚ್ಚು ಸಮಯವನ್ನು ಆ ಕಡೆ ಹರಿಸುವುದಿಲ್ಲ. ಈ ದಿವಸ ವಕ್ಕಲುತನ, ಸಹಕಾರಿ ರಂಗ, ಸಾಮುದಾಯಕ ಅಭಿವೃದ್ಧಿ - ಇವುಗಳ ಕಡೆ ಹೆಚ್ಚು ಗಮನ ಕೊಡುವ ವಿಷಯವನ್ನು ಮಂತ್ರಿಗಳು ಒದಗಿಸಿರುವ ರಿವ್ಯೂನಲ್ಲಿ ಬಹಳ ಚೆನ್ನಾಗಿ ವಿವರಿಸಿದ್ದಾರೆ. ಮೊಟ್ಟಮೊದಲನೆಯಾಗಿ ಯಾವುದೇ ಒಂದು ಅಂಕಿಅಂಶ ಇಡುವಾಗ 1955-56ಕ್ಕೂ ಇಂದಿಗೂ ಪ್ರಗತಿ ಹೇಗೆ ಆಗಿದೆ ಎಂಬುದನ್ನು ತೋರಿಸಿದ್ದಾರೆ. ಇಂದು ಕೊಟ್ಟಿರುವ ಬಜೆಟ್ಟಿನಲ್ಲಿ 10 ವರ್ಷದ ವಿಚಾರ ವಿವರಿಸಲು ಪ್ರಯತ್ನ ಮಾಡಿದ್ದಾರೆ, ತಮ್ಮ ಆಡಳಿತೆಯ ಕಾಲಾವಧಿ ಈಗ ಮುಗಿಯುವುದೆಂದು 10 ವರ್ಷಗಳಲ್ಲಿ ಕಾಂಗ್ರೆಸ್ ಸರಕಾರ ಮಾಡಿರುವ ಕೆಲಸವನ್ನು ತಿಳಿಸಿ, ವಿರೋಧ ಪಕ್ಷ ಅದನ್ನು ನೋಡಿ ಸಮಧಾನಪಟ್ಟುಕೊಳ್ಳಲಿ ಎಂದು ಮಾಡಿರುವಂತೆ ಭಾಸವಾಗುತ್ತದೆ. ಇಂದು ವಕ್ಕಲುತನಕ್ಕೆ ಹೇಗೆ ಖರ್ಚು ಮಾಡಿದ್ದಾರೆ ಎಂಬುದನ್ನು ನೋಡಿದರೆ ಹೋದ ಸಲ 654 ಲಕ್ಷ ರೂಪಾಯಿ ಮಾಡಿದ್ದರೆ ಈ ದಿವಸ 665 ಲಕ್ಷ ರೂಪಾಯಿಗಳನ್ನು ಬಜೆಟ್ಟಿನಲ್ಲಿ ಆಳವಡಿಸಿದ್ದಾರೆ. ಅತ್ಯಂತ ಪ್ರಗತಿಪರ ರೀತಿಯಿಂದ ಸುಧಾರಣೆ ಮಾಡಬೇಕು ಎಂದು ವಕ್ಕಲುತನದ ಬಗ್ಗೆ ಹೇಳುತ್ತಾರೆ. ಗ್ರಾಮಾಂತರದ ಅಭಿವೃದ್ಧಿಗೆ 101 ಲಕ್ಷ ರೂಪಾಯಿ ಹೋದ ಸಲ ಒದಗಿಸಿ ಈ ಸಲ 69 ಲಕ್ಷ ಮಾತ್ರ ಬಜೆಟ್ಟಿನಲ್ಲಿ ತೋರಿಸಿದ್ದಾರೆ. ಉದ್ಯೋಗ ದಂಧೆಗಳಿಗೆ ಎಲ್ಲೆಲ್ಲಿಂದಲೋ ಜನರನ್ನು ಕರೆಸಿ ಉದ್ಯೋಗ ಮಾಡಿ ಎಂದು ಹೇಳುವವರು ಇಂದು 12 ಕೋಟಿ 63 ಲಕ್ಷ ಒದಗಿಸಿದ್ದಾರೆ, ಹೋದ ಸಲ ಸಹ 12 ಕೋಟಿ 38 ಲಕ್ಷ

---

ವಿಸನದಿ : 6-3-1968

ಕೊಟ್ಟಿದ್ದರು. ಈ ರೀತಿಯಾದರೆ ಯಾವ ಸುಧಾರಣೆ ಮಾಡುವುದು ? ಉದ್ಯಮ ಎಷ್ಟರ ಮಟ್ಟಿಗೆ ಯಶಸ್ವಿಯಾಗಲು ಸಾಧ್ಯ? ವಕ್ಕಲುತನದ ವಿಚಾರದಲ್ಲಿ ಕಲ್ಯಾಣ ಮಾಡುವುದಾಗಿ ಹೇಳುತ್ತಾರೆ. ಆದರೆ ಅವರ ಪಕ್ಷದಿಂದಲೂ ಟೀಕೆ ಬರುತ್ತಿದೆ, ವಿರೋಧ ಪಕ್ಷದ ವಿಷಯವಿರಲಿ. ಇದನ್ನು ನೋಡಿದರೆ ನಿಜವಾಗಿಯೂ ಸುಧಾರಣೆ ಮಾಡಿದ್ದೀರಾ ಎಂದು ವಿಚಾರ ಮಾಡಬೇಕು. ವಕ್ಕಲಿಗನ ಉತ್ಪತ್ತಿಗೆ ಎಷ್ಟು ಹುಟ್ಟುವಳಿ ಮಾಡಿದರೂ ಬೆಲೆ ಕಟ್ಟುವವರೇ ಬೇರೆ. ಬೇರೆಯವರು ಮಾಲೀಕರಾಗುತ್ತಿದ್ದಾರೆ. ವ್ಯವಸಾಯಗಾರರಿಲ್ಲದೆ ಹೋದರೆ ಬಹಳ ತೊಂದರೆಯಾಗುವುದೆಂಬುದನ್ನು ಎಚ್ಚರಿಕೆಯಿಂದಲೂ, ದೂರದೃಷ್ಟಿಯಿಂದಲೂ ನೋಡಬೇಕು. ವ್ಯವಸಾಯಗಾರರಿಗೆ ಭೂಮಿ ಉಳುವವರಿಗೆ ಇಂದೇನು ಮಾಡಿದ್ದೀರಿ? ಅವರು ಕಷ್ಟಪಟ್ಟು ಮೈ ಬೆವರು ಸುರಿಸಿ ಬೆಳೆಯುವಾಗ, ಪೇಟೆಯಲ್ಲಿ ಮಾರುವಾಗ ಹೆಚ್ಚಿನ ಬೆಲೆ ದೊರಕಿಸಲು ವ್ಯವಸಾಯಗಾರನಿಗೆ ಅನುಕೂಲತೆ ಕೊಡುತ್ತಿಲ್ಲ. ರೆಗ್ಯುಲೇಟೆಡ್ ಮಾರ್ಕೆಟ್ಟಿದ್ದರೂ ಕೂಡ ಹೇಳಿಕೊಳ್ಳುವಷ್ಟು ವಕ್ಕಲಿಗನ ಕಲ್ಯಾಣವಾಗುತ್ತಿಲ್ಲ. ವಕ್ಕಲುತನದಲ್ಲಿ ಅನೇಕ ಸುಧಾರಣೆ ಮಾಡಬೇಕೆಂದು ಟ್ರಾಕ್ಟರುಗಳನ್ನು ಕೊಡಲಾಗುತ್ತಿದೆ, ಕಾಂಟೂರು ಬಂಡಿಂಗ್ ಮಾಡುತ್ತಿದೆ. ಆದರೆ ಅದರ ಪರಿಣಾಮವೇನಾಗಿದೆ ಬಡವರಿಗೆ ಸಹಾಯ ಸಲ್ಲಿದೆಯೇ? ಒಕ್ಕಲಿಗನು ಬೆಳೆದ ಪದಾರ್ಥಗಳನ್ನು ಮಾರಾಟಮಾಡುವ ಸಂಘಗಳಿಗೆ ಕಳುಹಿಸಿದಾಗ ಪ್ರೋತ್ಸಾಹಕರವಾದ ಬೆಲೆಯನ್ನು ನಿರ್ಧಾರ ಮಾಡಲು ಪ್ರಯತ್ನ ಮಾಡಿದ್ದೀರಾ? ಈ ಬಗ್ಗೆ ಖರೀದಿ ಮಾಡುವ ಸಹಕಾರೀ ಸಂಘಗಳ ಬಗ್ಗೆ ಏನು ಯೋಜನೆ ಇದೆ? ಯೋಜನೆಯಲ್ಲಿ ಒಂದು ಅಕ್ಷರ ಕೂಡ ಇಲ್ಲ. ಈ ಸರಕಾರಕ್ಕೆ ಯಾವ ರೀತಿಯ ಮುಂದಾಲೋಚನೆಯಿದೆಯೋ ಗೊತ್ತಿಲ್ಲ. ಸಾಲ ಕೊಡುತ್ತಿದ್ದೀರಿ, ಮಾರ್ಕೆಟಿಂಗ್ ಸಂಘಗಳಿಗೆ ರೈತ ಬರಬೇಕು ಎಂದಿದೆ. ಆದರೆ ಮಾರಾಟ ಮಾಡುವಾಗ, ಖರೀದಿ ಮಾಡುವಾಗ ವಕ್ಕಲಿಗನಿಗೆ ಅನುಕೂಲವಾಗುವಂತೆ ಏನು ವ್ಯವಸ್ಥೆ ಮಾಡಲಾಗಿದೆ? ಅನೇಕ ಪ್ರೋಸೆಸಿಂಗ್ ಸೊಸೈಟಿಗಳನ್ನು ಮಾಡಿದ್ದಾರೆ, ಪ್ರಗತಿಗೆ ದಾರಿ ಮಾಡಿದೆ ಎಂದು ಹೇಳುತ್ತಾರೆ. ಆದರೆ ನಿಯಂತ್ರಣದಲ್ಲಿರುವ ಸಕ್ಕರೆ ಹುಟ್ಟಿಸುವ ಸಕ್ಕರೆ ಕಾರ್ಖಾನೆ ಬಿಟ್ಟರೆ ಬೇರೆಲ್ಲೂ ಸರಿಯಾದ ವ್ಯವಸ್ಥೆ ಮಾಡಿಲ್ಲ. ಸಕ್ಕರೆ ನಿಯಂತ್ರಣಕ್ಕೆ ಒಳಪಟ್ಟಿರುವುದರಿಂದ ಅಲ್ಲಿ ಲಾಭವಿದೆ. ಅದನ್ನು ಬಿಟ್ಟರೆ ನಿಯಂತ್ರಣಕ್ಕೊಳಗಾಗದಿರುವ ಯಾವುದನ್ನೇ ನೋಡಿದರೂ ಸರಿಯಾದ ಏರ್ಪಾಡಿಲ್ಲ. ಸ್ಪಿನ್ನಿಂಗ್ ಮಿಲ್ಲುಗಳನ್ನು ನೋಡಿದರೆ 4-5 ಗಿರಣಿಗಳ ಸ್ಥಾಪನೆ ಪ್ರಯತ್ನ ಸಾಗಿದ್ದರೂ ಯಾವುದೂ ಸರಿಯಾಗಿ ನಡೆಯುತ್ತಿಲ್ಲ. ಹಣ ಖರ್ಚಾಗುವುದರಿಂದಲೇ ಪ್ರಗತಿ ಅನ್ನುವಂತಾಗಿದೆ. ಅಡಿಟರು ಬಂದಾಗ ಲೆಕ್ಕಪತ್ರ ಸರಿಯಾಗಿಲ್ಲವೆಂದು ಬರೆಯಲು ಅವರಿಗೆ ಅವಕಾಶ ಕೊಡದಂತೆ ಲೆಕ್ಕಪತ್ರಗಳನ್ನೇ ಬರೆಯಲಾರದೆ ಹೇಗಾದರೂ ಮಾಡಿ ತಪ್ಪಿಸಿಕೊಂಡು ಅನಂತರ ಮನಬಂದಂತೆ ಮಾಡುವವರನ್ನು ಈ ಆಡಳಿತೆಯಲ್ಲಿ ಕಾಣಬಹುದು. ಇಂದು ಪಬ್ಲಿಕ್ ಅಕೌಂಟ್ಸ್ ಸಮಿತಿಯವರು ಸರಕಾರದಲ್ಲಿ ನಡೆದಿರುವ ಹಣದ ದುರುಪಯೋಗ, ವಿವೇಕ ಮೀರಿದ ರೀತಿ ಮುಂತಾದುವನ್ನು ಸ್ಪಷ್ಟಪಡಿಸಿದ್ದಾರೆ. ಪಬ್ಲಿಕ್ ವರ್ಕ್ಸ್ ಇಲಾಖೆಯಲ್ಲಿ ಕಬ್ಬಿಣ ಮುಂತಾದ ಎಷ್ಟೋ ಮಾಲು ಲಕ್ಷಗಟ್ಟಲೆ ಲೋಪವಾಗಿರುವುದು ಬೆಳಕಿಗೆ ಬಂದಿದೆ. ಸಹಕಾರಿ ಸಂಸ್ಥೆಗಳ ಬಗ್ಗೆ ಅಂಕಿಸಂಖ್ಯೆಗಳನ್ನು ನೀಡಿ ಅವು ಪ್ರಗತಿಯಾಗಿವೆ ಎಂದು ಹೇಳಿದ್ದಾರೆ. ಆದರೆ ನಿಜವಾಗಿಯೂ ಎಷ್ಟು ಮಟ್ಟಿಗೆ ಅವು ಮುಂದುವರಿದಿವೆ. ಎಷ್ಟು ಸಂಘಗಳು ಪ್ರಗತಿ ಸಾಧಿಸಿವೆ ಎಂಬುದನ್ನು ನೋಡಬಹುದು. 1955-56ನೇಯ ಸಾಲಿನ ಅಂಕಿಸಂಖ್ಯೆಗಳನ್ನು

ನೋಡಿ. ಹೋದ ಸಲಕ್ಕೂ ಈ ಸಲಕ್ಕೂ ಹೋಲಿಕೆ ಮಾಡಿ ನೋಡಿದರೆ ಏನೂ ಪ್ರಗತಿಯಾಗಿಲ್ಲ, ಕೇವಲ ಶೇಕಡಾ 18ರಷ್ಟು ಜನ ಮಾತ್ರ ಸದಸ್ಯರಾಗಿದ್ದಾರೆ. ಅದು ಎನೇನೂ ಸಾಲದು. ನೂರರಲ್ಲಿ ಹತ್ತು ಮಂದಿಗೆ ಕೂಡ ಸಾಲ ಕೊಡುವುದಕ್ಕೆ ಆಗಿಲ್ಲ. ಗದಗ ತಾಲೂಕು ಮಾರ್ಕೆಟಿಂಗ್ ಸಂಘವೊಂದರಲ್ಲಿಯೇ ನಾಲ್ಕು ಸಾವಿರಕ್ಕಿಂತ ಹೆಚ್ಚಿನ ಸದಸ್ಯರಿದ್ದಾರೆ. ಅದಲ್ಲದೆ, ಸದಸ್ಯ ಸಂಘಗಳಲ್ಲಿಯ ಅಪ್ರತ್ಯಕ್ಷ 4 ಸಾವಿರಕ್ಕೂ ಹೆಚ್ಚು ಜನ ಸದಸ್ಯರು ಹಳ್ಳಿಗಳಲ್ಲಿ ಇದ್ದಾರೆ. ಗದಗ ತಾಲ್ಲೂಕಿನಂತಹ ಪ್ರಯತ್ನವನ್ನು ಸರ್ಕಾರ ಮಾಡಿಲ್ಲ ಅನ್ನುವಂತಹ ಮಾತನ್ನು ಹೇಳಬೇಕಾಗಿದೆ. ತಾವು ಇವತ್ತಿನ ದಿವಸ ಷೇರುಗಳನ್ನು ತೆಗೆದುಕೊಂಡಿರುವುದು ನೂರಕ್ಕೆ ಹತ್ತು ಪಟ್ಟು ಇದೆ, ಸರ್ಕಾರದಿಂದ ಕೊಡತಕ್ಕ ಸಾಲ ನೂರಕ್ಕೆ 31 ಪಟ್ಟು ಹೆಚ್ಚಿದೆ. ಈ ರೀತಿ ತಮ್ಮ ಆರ್ಥಿಕಾಭಿವೃದ್ಧಿ ಏನಾಗಿದೆ ಎಂದರೆ ದೇಶದ ಜನರನ್ನು ಸಾಲಗಾರರನ್ನಾಗಿ ಮಾಡಿದ್ದೀರಿ. ಇದನ್ನು ತಾವು ಸ್ವಲ್ಪ ಯೋಚನೆ ಮಾಡಬೇಕು. ಬೆಳೆ ಅಭಿವೃದ್ಧಿ ಸಾಲವನ್ನು ತಾವು ಕೊಡುವುದು ನಿಜವಾಗಿಯೂ ಒಕ್ಕಲಿಗನಿಗೆ ವೇಳೆಗೆ ಸರಿಯಾಗಿ ಸಿಗುವುದಿಲ್ಲ. ತಾವು ಕೊಡತಕ್ಕ ಹಣವೆಲ್ಲ ಶ್ರೀಮಂತರು ಯಾರಿದ್ದಾರೋ ಅವರಿಗೆ ಹೋಗುತ್ತಿದೆ. ರಾಮಕೃಷ್ಣಹೆಗಡೆಯವರು ಇದನ್ನು ಬಹಳ ಸೂಕ್ಷ್ಮವಾಗಿ ಪರಿಶೀಲನೆ ಮಾಡಿ ಈ ಅಸೆಂಬ್ಲಿ ಮುಗಿಯವುದರೊಳಗೆ ಇದನ್ನು ಸಮರ್ಪಕವಾಗಿ ಬದಲಾವಣೆ ಮಾಡಬೇಕೆಂದು ಹೇಳುತ್ತೇನೆ. ಇನ್ನೂ ಅನೇಕ ಸಲಹೆಗಳನ್ನು ಮಾಡುವುದು ಇದೆ. ಅವುಗಳನ್ನು ವೇಳೆಯ ಅಭಾವದ ಮೂಲಕ ಇಲ್ಲಿ ಹೇಳದೆ, ಬರೆದು ಕಳುಹಿಸಲಿಕ್ಕೆ ಪ್ರಯತ್ನ ಮಾಡುತ್ತೇನೆ.

ಮುಂಬೈ ಕರ್ನಾಟಕ ಏರಿಯಾದೊಳಗೆ ಗ್ರ್ಯಾಂಟ್ ಇನ್ ಏಡ್ ಕೊಡ್ ಮಾಡಿದ್ದರು. ಅದರೊಳಗೆ ಯಾವ ಸಂಸ್ಥೆಯು ತಮ್ಮದೇ ಆದ ಇಮಾರತಿಯನ್ನು ಬಡವ ಶ್ರೀಮಂತರಿಂದ ದುಡ್ಡುಕೂಡಿಸಿ ಕಟ್ಟಿದ್ದರೆ ಅದಕ್ಕೆ ಬಾಡಿಗೆ ಕೊಡುವ ಹಾಗಿಲ್ಲ, ಬೇರೊಬ್ಬರಿಂದ ಬಾಡಿಗೆ ಪಡೆದರೆ ಅದಕ್ಕೆ ಬಾಡಿಗೆ ಕೊಡುತ್ತೇವೆ ಅಂತ ಹೇಳಿದ್ದಾರೆ, ಇದರಿಂದ ಅಂತಹವರು ಆ ಇಮಾರತಿಯನ್ನು ಎರಡನೆಯವರಿಗೆ ಮಾರಿ ಗ್ರ್ಯಾಂಟನ್ನು ಪಡೆಯಬೇಕಾಗಿದೆ. ಇಲ್ಲವೇ ಅಪ್ರಾಮಾಣಿಕ ವ್ಯವಹಾರಸಾಗಬೇಕು. ಇದು ಸರಿಯಲ್ಲ. ಧಾರವಾಡದ ಡಾ|| ಕಬ್ಬೂರವರ ಅಧ್ಯಕ್ಷತೆಯಲ್ಲಿ ಶಿಕ್ಷಣ ಸಂಸ್ಥೆಗಳ ಪ್ರತಿಸ್ಥಿತಿಗಳೆಲ್ಲಾ ಸೇರಿ ಮನವಿಯನ್ನು ಈಗಾಗಲೇ ಶಿಕ್ಷಣ ಸಚಿವರಿಗೆ ಮಾಡಿದ್ದಾರೆ. ಏನು ಮಾಡಿದರೂ ಕೂಡ ಇವರ ಮುಂದೆ ಬೋರ್ಗಲ್ ಮೇಲೆ ಮಳೆಗರೆದರೆ ನೀರ್ಕುಡಿಯಬಹುದೇ ಎಂಬಂತಾಗಿದೆ. ನಮ್ಮ ಮಾನ್ಯ ಸ್ನೇಹಿತರು ಹೇಳಿದಂತೆ ಇವರು ಬುದ್ಧಿಪ್ರದವಾದ ಮಾತನ್ನು ಕೇಳುವುದಿಲ್ಲ. ಯಾವುದನ್ನು ಹೇಳಬೇಕಾಗಿದ್ದರೂ ಚಳುವಳಿಯ ರೂಪದಲ್ಲಿ ಚಳುವಳಿ ವಾಣಿಯಿಂದಲೇ ಹೇಳಬೇಕಾಗಿದೆ. ಸಜ್ಜನರ ಸದಭಿಪ್ರಾಯಗಳು ಇವರಿಗೆ ಅರಿವನ್ನುಂಟು ಮಾಡಲಾರವು.

ಇನ್ನು ಕಲೆಗೆ ಸಂಬಂಧಪಟ್ಟಂತೆ ಡ್ರಾಯಿಂಗ್ ಶಿಕ್ಷಕರು ಯಾರಿದ್ದಾರೆ ಅವರಿಗೆ ಬೇಕಾಗುವಂತಹ ಎಲ್ಲಾ ಸೌಕರ್ಯಗಳನ್ನೂ ಮಾಡಿ ಕೊಡಬೇಕು.

ಸೆಕ್ಯುಲಾರ್ ಸ್ಟೇಟು ಎಂದು ಹೇಳುತ್ತಾ ಇದ್ದೀರಿ. ಆದರೆ ನೀವು ಏನು ಮಾಡುತ್ತಾ ಇದ್ದೀರಿ ಇದನ್ನು ಆಲೋಚನೆ ಮಾಡಿರಿ. ನೀವು ಯಾವ ರೀತಿಯಿಂದ ನಡೆದಿದ್ದೀರಿ, ನಿಮ್ಮಲ್ಲಿ ಜಾತಿಯ ಭಾವನೆ ಯಾವ ರೀತಿಯಿಂದ ತಾಂಡವವಾಡುತ್ತಿದೆ ಎಂಬುದು ತಾವು ಹೊರಡಿಸಿರತಕ್ಕ

ಒಂದು ಪತ್ರಿಕೆ ನೋಡಿದರೆ ಗೊತ್ತಾಗುತ್ತದೆ. ಬಸವಣ್ಣನವರ ಜಯಂತಿಗೆ 10 ಲಕ್ಷ ರೂಪಾಯಿಗಳನ್ನು ಕೊಟ್ಟಿದ್ದು ಅಕ್ಷಮ್ಯ. ಯಾರೂ ಒಪ್ಪಲಾರದಂತಹ ಮಾತನ್ನು ದೇಶದ ಮುಂದೆ ಇಟ್ಟಿದ್ದೀರಿ, ರಾಜ್ಯದ ಬೊಕ್ಕಸದಿಂದ 10 ಲಕ್ಷ ರೂಪಾಯಿಗಳನ್ನು ಅದಕ್ಕಾಗಿ ಖರ್ಚು ಮಾಡಿದರೆ ತಪ್ಪಾದೀತು. ಅದೇ ರೀತಿ ನೀವು ಮುಸಲ್ಮಾನರಿಗೆ, ಕ್ರಿಶ್ಚಿಯನ್ನರಿಗೆ ಕೊಡುವುದಕ್ಕೆ ತಯಾರಿದ್ದೀರೇನು? ಈ ರೀತಿ ಎಲ್ಲಾ ಮಾಡುವುದರಿಂದ ಜಾತಿ ಭಾವನೆ ಬರುತ್ತದೆ. ಹಾಸ್ಟೆಲುಗಳಿಗೆ ಜಾತಿಯ ಹೆಸರುಗಳನ್ನು ಇಟ್ಟಿದ್ದೀರಿ, ಈ ರೀತಿ ಮಾಡಿದರೆ ಜಾತಿಯ ಭಾವನೆ ಜಾಸ್ತಿಯಾಗುತ್ತದೆ ಎಂದು ಜನರಿಗೆ ಹೇಳುತ್ತೀರಿ. ನೀವು ಮಾತ್ರ ಹೀಗೆ ವರ್ತಿಸುತ್ತೀರಿ.

ಸರ್ಕಾರದ ದೃಷ್ಟಿಯಿಂದ, ನ್ಯಾಯಾಂಗದ ಹೆಸರಿನಲ್ಲಿ ನೀವು ಮಾಡುವ ಕೃತಿ ನೆಟ್ಟಗೆ ಇರಬೇಕು. ಇವನ್ನು ನಾವು ಹೇಳುವುದು ತಮಗೆ ಸರಿಕಾಣದೆ ಇರಬಹುದು. ವಿದುರವಾಣಿಯನ್ನು ಕೇಳಿದಾಗ ಎಲ್ಲರೂ ನಕ್ಕರು. ಅವನ ಬುದ್ಧಿವಾದವನ್ನು ಕೇಳಲಿಲ್ಲ. ಮುಂದೆ ನಡೆದ ಘಟನೆಯಿಂದ ವಿದುರವಾಣಿ ಯೋಗ್ಯವಾದದ್ದು ಎಂದು ಹೇಳಿ ಎಲ್ಲರಿಗೂ ಗೋಚರಕ್ಕೆ ಬಂತು. ಆದಕಾರಣ ನಾವು ಹೇಳತಕ್ಕ ವಿದುರ ವಾಣಿ ಏನಿದೆ ಇದನ್ನು ಸ್ವಲ್ಪ ಗಮನಕ್ಕೆ ತೆಗೆದುಕೊಂಡು ನಿಮ್ಮ ಆಡಳಿತೆಯ ವರ್ತನೆಯನ್ನು ತಿದ್ದಿಕೊಂಡು ಕೆಲಸ ಮಾಡಿರಿ.

ನಾನು ಬಸವ ಎಂದು ಹೇಳಿಕೊಳ್ಳುವುದಕ್ಕೆ ಹೆಮ್ಮೆ ಪಡುತ್ತೇನೆ. ನಿಮ್ಮ ಸರಕಾರವು ಸತತವಾಗಿ ಆ ತತ್ವದ ಉಲ್ಲಂಘನೆ ಮಾಡುವುದರಿಂದ ನಾನು ಯಾರು / ನಾವು ಯಾರು ಎಂದು ಹೇಳಿಕೊಳ್ಳುವುದಕ್ಕೆ ಯಾವುದೇ ನೈತಿಕ ಹಕ್ಕು ನಿಮಗಿಲ್ಲ ಎಂದು ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ.

# ಕೃಷಿ ಇಲಾಖೆಯ ಅನುದಾನ ಬೇಡಿಕೆ ಮೇಲೆ ಚರ್ಚೆ

ಸನ್ಮಾನ್ಯ ಸಭಾಪತಿಗಳೇ, ಇವೊತ್ತಿನ ದಿವಸ ಒಕ್ಕಲುತನದ ಶಾಖೆಯ ಸಚಿವರು ಮಂಡಿಸಿರುವ ಡಿಮಾಂಡ್ 20ನ್ನು ವಿರೋಧಿಸುತ್ತ ಕೆಲವು ಮಾತುಗಳನ್ನು ಹೇಳಬಯಸುತ್ತೇನೆ. ಎರಡೂ ಕಡೆಯಿಂದ ಅನೇಕ ಉಪಯುಕ್ತವಾದ ಸಲಹೆಗಳು ಮಾಡಲ್ಪಟ್ಟಿವೆ. ಉಳಿದ ಖಾತೆಗಳಿಗೂ ಒಕ್ಕಲುತನದ ಖಾತೆಗೂ ವಿಪರೀತ ವ್ಯತ್ಯಾಸ ಉಂಟು ಡಾ॥ ನಾಗನಗೌಡರು ಅನೇಕ ಸಲಹೆಗಳನ್ನು ಮಾಡಿದ್ದಾರೆ. ಅವರ ಮಟ್ಟಿಗೆ ಮದ್ರಾಸಿನ ಅಂದಿನ ಮುಖ್ಯಮಂತ್ರಿಗಳಾಗಿದ್ದ ಶ್ರೀ ಸಿ. ರಾಜಗೋಪಾಲಾಚಾರಿ ಅವರು ಮಾತನಾಡುತ್ತ 'ಕೃಷಿಯ ಬಗ್ಗೆ ಡಾ॥ ನಾಗನಗೌಡರ ಮಾತು ಅಂತಿಮ' ಎಂದು ಹೇಳಿದ ಸಂದರ್ಭ ಉಂಟು. ನಾವು ತುಲನಾತ್ಮಕವಾಗಿ ನೋಡಿದರೆ ಅಲ್ಲಿಯೂ ಕಾಂಗ್ರೆಸ್ ಸರ್ಕಾರವಿತ್ತು. ಇಲ್ಲಿಯೂ ಕಾಂಗ್ರೆಸ್ ರಾಜ್ಯವಿದೆ. ಅಲ್ಲಿ ಅವರ ಮಾತಿಗೆ ಇದ್ದ ಮನ್ನಣೆ ಇಲ್ಲಿ ಬರಲಾರದಾಗಿದೆ. ಇದು ಏಕೆ ಎನ್ನುವುದನ್ನು ನಾವು ವಿವೇಚನೆ ಮಾಡಬೇಕಾಗಿದೆ.

ನಮ್ಮ ಆರ್ಥಿಕ ಸಚಿವರಾದ ರಾಮಕೃಷ್ಣ ಹೆಗಡೆ ಅವರು ಅನೇಕ ಪರರಾಷ್ಟ್ರಗಳಲ್ಲಿ ತಿರುಗಿ ಬಂದದ್ದುಂಟು. ಡಾ॥ ನಾಗನಗೌಡರು ಒಕ್ಕಲುತನಕ್ಕೆ ಸಂಬಂಧಪಟ್ಟಂತೆ ಕೊಟ್ಟಿರುವ ಉಪಯುಕ್ತವಾದ ಸಲಹೆಗಳಿಗೆ ಹೊಂದುವಂತೆ ಯೋಜನೆಯನ್ನು ಅಳವಡಿಸಿಕೊಂಡು ಕಾರ್ಯಗತ ಮಾಡಿದ್ದರೆ ಚೆನ್ನಾಗಿತ್ತು. ಅಮೋನಿಯಾ ಗ್ಯಾಸನ್ನು ದೊರಕಿಸಿಕೊಡುವ ಅಥವಾ ಯಾವುದೇ ರೀತಿಯ ಗೊಬ್ಬರವನ್ನು ಒದಗಿಸುವ ಫ್ಯಾಕ್ಟರಿಯನ್ನು ನಮ್ಮಲ್ಲಿ ಮಾಡಿದ್ದರೆ ಹೆಚ್ಚು ಸುಖವಾಗುತ್ತಿತ್ತು. ಮಂಗಳೂರಿನಲ್ಲಿ ಒಂದು ಫರ್ಟಲೈಸರ್ ಫ್ಯಾಕ್ಟರಿ ಮಾಡುತ್ತೇವೆಂದು ಪ್ರತಿ ವರ್ಷವೂ ಹೇಳುತ್ತಿದ್ದಾರೆ. ಅದು ನಮ್ಮ ಕಾಲಕ್ಕೆ ನಮ್ಮ ಮಕ್ಕಳ ಕಾಲಕ್ಕೆ ಅಥವಾ ನಮ್ಮ ಮೊಮ್ಮಕ್ಕಳ ಕಾಲಕ್ಕೆ, ಯಾವ ಕಾಲಕ್ಕೆ ಬರುತ್ತಿದೆಯೋ ಗೊತ್ತಿಲ್ಲ. ಮಾನ್ಯ ಮಂತ್ರಿವರ್ಯರು ಅನೇಕ ಸಾರಿ ಉದ್ಯೋಗ ದಂಧೆಗಳ ಬಗ್ಗೆ ಮಾತನಾಡುವಾಗ ಸಣ್ಣ ಕಾರುಗಳು ಬೇಕು ಎಂದು ಹೇಳುತ್ತಾರೆ. ಆಟಿಕೆಯ ವಸ್ತುಗಳು, ಸ್ನೋ, ಪೌಡರುಗಳು, ಲಿಪ್‌ಸ್ಟಿಕ್ ಇಂಥವುಗಳಿಗೆ ಸಂಬಂಧಪಟ್ಟ ಉದ್ಯೋಗ ದಂಧೆಗಳನ್ನು ಪ್ರಾರಂಭ ಮಾಡುವುದಕ್ಕೆ ಬದಲಾಗಿ ಅವುಗಳಿಗೆ ಕೆಲವು ಕಾಲ ಪೂರ್ಣ ವಿರಾಮ ಕೊಟ್ಟು ಒಕ್ಕಲುತನದ ಅಭಿವೃದ್ಧಿ ಆಗುವಂಥ ದಂಧೆಗಳನ್ನು ಬೆಳೆಸಿದರೆ ದೇಶದಲ್ಲಿ ಉತ್ಪಾದನೆ ಹೆಚ್ಚಾಗಿ ಬೆಳೆಯಬಹುದು. ನಮ್ಮ ಆರ್ಥಿಕ ಸಚಿವರು ಉದ್ಯೋಗ ಸಚಿವರು ಆಗಿರುವುದರಿಂದ ಒಕ್ಕಲುತನಕ್ಕೆ ಹೆಚ್ಚು ಆಸಕ್ತಿವಹಿಸುವಂತಹ ಭೂಮಿಕೆಯನ್ನು ಮನೋಭಾವವನ್ನು ತೋರಿಸಬೇಕೆಂದು ಅವರಲ್ಲಿ ಪ್ರಾರ್ಥನೆ ಮಾಡುತ್ತೇನೆ.

ಒಕ್ಕಲುತನಕ್ಕೆ ಉಪಯೋಗವಾಗುವಂಥ ಅಮೋನಿಯಂ ಸಲ್‌ಫೇಟ್, ಸೂಪರ್ ಫಾಸ್ಫೇಟ್, ಇವುಗಳನ್ನು ಬೇರೆ ಕಡೆಗಳಿಂದ ತರಿಸಿ ಅದನ್ನು ಒಕ್ಕಲುತನ ಮಾಡುವವರಿಗೆ ಕೊಡುತ್ತಿದ್ದಾರೆ. ಇದರ ಬೆಲೆಯನ್ನು ಪ್ರತಿ ವರ್ಷವೂ ನೂರಕ್ಕೆ ಹತ್ತಿಪ್ಪತ್ತರಷ್ಟು ಏರಿಸುತ್ತಿದ್ದಾರೆ. ಒಕ್ಕಲುತನದಲ್ಲಿ ಬೆಳೆಯತಕ್ಕ ಮಾಲನ್ನು ದೊಡ್ಡ ದೊಡ್ಡ ಷಹರುಗಳವರು ಸೆಳೆಯುತ್ತಾರೆ.

---

ವಿಸನದಿ : 25-3-1968

ಷಹರುಗಳಲ್ಲು ದೊರೆಯುವ ವಸ್ತುಗಳನ್ನು ತೆಗೆದುಕೊಂಡು ಹೋಗಿ ಅದನ್ನು ಗೊಬ್ಬರವಾಗಿ ಮಾರ್ಪಡಿಸುವುದಕ್ಕೆ ಬೇಕಾದ ಪ್ಲಾಂಟ್‌ಗಳ ಕಿಮ್ಮತ್ತು 20-25 ಲಕ್ಷ ರೂಪಾಯಿ ಆಗುತ್ತದೆ. ಇಷ್ಟು ಕಡಿಮೆ ವೆಚ್ಚದಿಂದ ಅನೇಕ ಪ್ಲಾಂಟ್ಸ್ ಹಾಕುವುದಕ್ಕೆ ಶಕ್ಯವಿದೆ. ನೂರಾರು ಪ್ಲಾಂಟ್‌ಗಳನ್ನು ಹಾಕಿದರೆ ಅದರಿಂದ ಪ್ರತಿಯೊಬ್ಬ ರೈತನೂ ಕಾಂಪೋಸ್ಟ್ ಗೊಬ್ಬರವನ್ನು ಪಡೆಯುವುದಕ್ಕೆ ಅವಕಾಶವಾಗುತ್ತದೆ. ಇಂಥ ಯೋಜನೆಯನ್ನು ಅಳವಡಿಸಿಕೊಳ್ಳಬೇಕು ಎಂದು ಹೇಳುತ್ತೇನೆ.

ಡಾ|| ನಾಗನಗೌಡರು ಇಂದಿನ ವ್ಯವಸಾಯ ಇಲಾಖೆಯ ಡೈರೆಕ್ಟರ್ ವಿಷಯವಾಗಿ ಅನೇಕವಾದ ಮಾತುಗಳನ್ನು ಆಡಿದ್ದಾರೆ. ಇಂದಿನ ಡೈರೆಕ್ಟರ್ ಟೆಕ್ನಿಕಲ್ ವಿಷಯದಲ್ಲಿ ಅಥಾರಿಟಿ ಇದ್ದರೂ ಸಹ ಮಾಡತಕ್ಕುದಾದರೂ ಏನು? ನೀವು ಅವರಿಗೆ ಕೊಡತಕ್ಕ ಸಾಧನ ಸಾಮಗ್ರಿಗಳು ಸರಿಯಾಗಿ ಇಲ್ಲದೆ ಇದ್ದಾಗ ಅವರಿಗೆ ಹಣವನ್ನು ಸರಿಯಾಗಿ ಕೊಡದೇ ಇದ್ದಾಗ ಅವರ ಕೈಕೆಳಗಿನ ನೌಕರ ವರ್ಗವನ್ನು ಸಂತುಷ್ಟವಾಗಿ ಇಡದೇ ಇದ್ದಾಗ ಎಂಥ ಡೈರೆಕ್ಟರು ಆದರೆ ಏನು, ಪರಮಾತ್ಮನೇ ಖುದ್ದಾಗಿ ಬಂದರೆ ಏನು. ಹೇಗೆ ಸುಧಾರಣೆ ಮಾಡುವುದಕ್ಕೆ ಸಾಧ್ಯವಾಗುತ್ತದೆ ಎನ್ನುವುದನ್ನು ಇವೊತ್ತು ಒಕ್ಕಲುತನದ ಸಚಿವರು ಅರ್ಥಮಾಡಿಕೊಳ್ಳಬೇಕಾದ ಕಾಲ ಬಂದಿದೆ.

ಮಾನ್ಯ ನಿಜಲಿಂಗಪ್ಪನವರು ತಮ್ಮ ಕೈಯಲ್ಲಿ ಒಕ್ಕಲುತನದ ಸುಧಾರಣೆ, ಕಲ್ಯಾಣ ಸಾಧ್ಯವಿಲ್ಲ ಎಂದು ತಮ್ಮಲ್ಲಿದ್ದ ಈ ಖಾತೆಯನ್ನು ಬೇರೆಯವರಿಗೆ ಕೊಟ್ಟರೋ ಏನೋ ಗೊತ್ತಿಲ್ಲ. ಇವರು ಈ ಖಾತೆಯನ್ನು ವರ್ಗಾಯಿಸುವಾಗ ಮಾನ್ಯ ರಾಮಕೃಷ್ಣ ಹೆಗಡೆ ಅವರಲ್ಲಿದ್ದ ಅರ್ಥ ಖಾತೆಯನ್ನು ಬೇರೆ ಮಾಡಿ ಒಕ್ಕಲುತನ ಖಾತೆಯನ್ನು ಅವರಿಗೆ ಕೊಟ್ಟಿದ್ದರೆ ಹೆಚ್ಚು ಸಮರ್ಪಕವಾಗುತ್ತಿತ್ತು ಎಂದು ನಾನು ಹೇಳಬಯಸುತ್ತೇನೆ. ವಿದ್ಯೆ ಖಾತೆ ಬಹು ದೊಡ್ಡ ಖಾತೆ. ಅದರ ಜೊತೆಗೆ ಒಕ್ಕಲುತನದ ಖಾತೆಯನ್ನೂ ಸೇರಿಸಿ ಎರಡನ್ನೂ ಒಬ್ಬರಿಗೇ ಕೊಟ್ಟರೆ ಎಷ್ಟೇ ಒಕ್ಕಲುತನದಲ್ಲಿ ಆಸ್ಥೆ ಇರುವವರಾದರೂ ಕೂಡ ಎರಡೂ ಖಾತೆಗಳ ಕೆಲಸವನ್ನು ಸಮರ್ಪಕವಾಗಿ ನಡೆಸಲು ಸಾಧ್ಯವಾಗುತ್ತದೆ ಎಂದು ಹೇಳುವುದಕ್ಕಾಗುವುದಿಲ್ಲ.

ಒಕ್ಕಲುತನಕ್ಕೆ ಹೆಚ್ಚು ಪ್ರಾಧಾನ್ಯತೆಯನ್ನು ಕೊಡಬೇಕೆಂದು ಈ ಮಂತ್ರಿಮಂಡಲ, ಈ ಸರ್ಕಾರ ಒಪ್ಪುವುದಾದರೆ ಒಕ್ಕಲುತನಕ್ಕೆ ಒಬ್ಬ ಮಂತ್ರಿಯನ್ನು ನೇಮಕ ಮಾಡುವುದು ಅತ್ಯವಶ್ಯವಿದೆ ಎನ್ನುವಂಥ ಮಾತನ್ನು ಹೇಳುತ್ತೇನೆ.

ಸೀಡ್ಸ್, ಸಾಯಿಲ್ ಕನ್ಸರ್‌ವೇಷನ್ ಮೆನ್ಯೂರ್, ಕ್ರಾಪ್ ಪ್ರೊಡಕ್ಷನ್ ಹೀಗೆ ಅನೇಕ ವಿಧವಾದ ಸಲಹೆಗಳನ್ನು ಮಾಡಿದ್ದಾರೆ. ಸೀಡ್ಸ್ ಕಾರ್ಪೋರೇಷನ್ ಬಗ್ಗೆ ಮಾನ್ಯ ಹಾವೇರಿ ಸದಸ್ಯರು ಮಾತನಾಡುತ್ತ ಸೀಡ್ಸ್ ಕಾರ್ಪೋರೇಷನ್ ಬಹಳ ಪ್ರಗತಿಯನ್ನು ಮಾಡಿದೆ. ಇದರ ಬಗ್ಗೆ ವಿರೋಧ ಸದಸ್ಯರು ವಿಚಾರ ಮಾಡಬೇಕು ಎಂದು ಹೇಳಿದರು. ಯಾರು ಮಾಡಿದ್ದಾರೆ ಸೀಡ್ಸ್ ಪ್ರೋಕ್ಯೂರ್‌ಮೆಂಟ್? ಹೈಬ್ರಿಡ್ ಸೀಡಿನ ಬೆಳವಣಿಗೆಯನ್ನು ಮಾಡಿದವರು ಯಾರು, ಸೀಡ್ಸ್ ಕಾರ್ಪೋರೇಷನ್ ಮಾಡಿದುದನ್ನು ತೋರಿಸಿ. ರೈತರಿಗೆ ಬೇಕಾಗುವಂಥ ಹೈಬ್ರಿಡ್ ಸೀಡ್ಸ್ ಸರ್ಟಿಫಿಕೇಷನ್ ಬೇಕಾದರೆ ಸಹಿತ ಅವುಗಳನ್ನು ಸರ್ಕಾರದವರು ಸರ್ಟಿಫೈ ಮಾಡಿಕೊಟ್ಟಿಲ್ಲ. ನಿಮ್ಮಲ್ಲಿ ಅದಕ್ಕೆ ಬೇಕಾದ ಮೆಷಿನರಿ ಇಲ್ಲ. ನಿಮ್ಮ ಆಡಳಿತ ವರ್ಗ ಕುಂಠಿತವಾಗಿದೆ. ಸಮರ್ಪಕವಾದ ರೀತಿಯಲ್ಲಿ ನಡೆಸಲಾರದವರಾಗಿದ್ದೀರಿ. ಈ ದಿವಸ ಸೀಡ್ ಕಾರ್ಪೋರೇಷನ್ ಚೆನ್ನಾಗಿ ಕೆಲಸ

ಮಾಡಬೇಕಾಗಿದೆ. ಹಾಗೆ ಮಾಡುವವರೆಗೆ ರೈತರಿಗೆ ಅನುಕೂಲವಾಗುವುದಿಲ್ಲ. ಈಗ ಗಂಡ ಹೆಂಡಿರ ಜಗಳದಲ್ಲಿ ಕೂಸು ಬಡವಾದಂತಾಗಿದೆ. ಒಕ್ಕಲುತನದವರು ಮಾಲನ್ನು ತಂದುಕೊಟ್ಟು ಸರ್ಟಿಫಿಕೇಟ್ ಕೊಡಿ ಎಂದರೆ ಅದಕ್ಕೆ ಸಂಬಂಧಪಟ್ಟ ಅಧಿಕಾರಿ ಇರುವುದಿಲ್ಲ. ಅವರಿದ್ದರೆ ಸೀಡ್ ಕಾರ್ಪೊರೇಷನ್ ಅಧಿಕಾರಿ ಇರುವುದಿಲ್ಲ. 6 ತಿಂಗಳಾದರೂ ಸರ್ಟಿಫಿಕೇಟ್ ಸಲುವಾಗಿ ಒದ್ದಾಡಬೇಕಾಗುತ್ತದೆ. ನೀವು ಒಕ್ಕಲುತನದ ಅಭಿವೃದ್ಧಿಗಾಗಿ ಬೇಕಾದಷ್ಟು ಕೆಲಸ ಮಾಡಿದ್ದೇವೆಂದು ಹೇಳುವುದಾದರೂ ರೈತರಿಗೆ ಅದರಿಂದ ಸಾಕಷ್ಟು ಪ್ರಯೋಜನವಾಗಿದೆಯೇ ಎಂಬುದನ್ನು ಪರಿಶೀಲನೆ ಮಾಡಬೇಕು.

ಇನ್ನು ರೀಸರ್ಚ್ ವಿಚಾರ ಹೇಳಬೇಕಾದರೆ ಡಾ|| ನಾಗನಗೌಡರು ಅವರು ಯಾವ ಪಕ್ಷದಲ್ಲಿದ್ದಾರೋ ಅದರ ವರ್ಣನೆ ಮಾಡಿ ರಿಸರ್ಚಿಗೆ ಒಂದು ಲಕ್ಷ ರೂಪಾಯಿಗಳನ್ನು ಒದಗಿಸಿದ್ದಾರೆ. ಲ್ಯಾಬೋರೇಟರಿ ಮಾಡುತ್ತಾರೆ ಎಂದು ಹೇಳಿದರು. ಆದರೆ ಅವರು ಸರಕಾರವನ್ನು ಅದು ಮಾಡಿರುವ ಕೆಲಸಕ್ಕಾಗಿ ಹೊಗಳಲಿಲ್ಲ. ಚುಚ್ಚು ಮನಸ್ಸಿನಿಂದ ಹೇಳಿದ್ದಾರೆ. ಒಂದು ಲಕ್ಷ ಸಾಕಾಗುವುದಿಲ್ಲ ಎಂಬ ಅರ್ಥದಲ್ಲಿ ಹೇಳಿದ್ದಾರೆ. ಪ್ರತಿಯೊಂದು ಕಡೆಯೂ ಸಂಶೋಧನೆ ಆಗಬೇಕಾಗದೆ. ಒಕ್ಕಲುತನದ ಬಗ್ಗೆ ಸರಕಾರ ಸಹಾಯ ಮಾಡಿರುವುದೇನೋ ನಿಜ. ಆದರೆ ನಮ್ಮ ಕಾಲಮೇಲೆ ನಾವು ನಿಲ್ಲಬೇಕು, ಅದನ್ನು ಜನರು ಅರ್ಥ ಮಾಡಿಕೊಂಡಿದ್ದಾರೆ. ಆದರೆ ಸರಕಾರ ಮಾಡಿರುವುದೇನು? ಹಿಂದೆ ಮಾಡಿರುವುದಲ್ಲದೆ ಹೊಸ ಯೋಜನೆಯನ್ನೇನು ಮಾಡಿದ್ದೀರಿ? ಅಜ್ಜನ ಕಾಲದಿಂದ ನಡೆದುಕೊಂಡು ಬಂದಿರುವ ರೀತಿಯಲ್ಲಿ ಇನ್ನೂ ಅನೇಕ ಕಡೆ ನಡೆಯುತ್ತಿದೆ. ಈಗ ಎಕ್ಕದ ಗಿಡಗಳಿವೆ, ಅವನ್ನು ತೆಗೆದು ಹಾಕಲು ಏನು ಅನುಕೂಲ ಮಾಡಿದ್ದೀರಿ? ಅವನ್ನು ಕೈಯಿಂದಲೇ ತೆಗೆಯಬೇಕಾಗಿದೆ. ಅದರ ಭೀತಿಯಿಂದ ರೈತರನ್ನು ತಪ್ಪಿಸಲು ಏನೂ ಮಾಡಿಲ್ಲ. ಸಾಯಿಲ್ ಕನ್‌ಸರ್ವೇಷನ್ ಚಿತ್ರದುರ್ಗದಲ್ಲಿ ಮಾಡಲಾಗಿದೆ. ಆದರೆ ಅದರ ಫಲಿತಾಂಶವೇನು? ಅದನ್ನು ಎಲ್ಲ ಕಡೆಗೂ ತಿಳಿಯದಂತೆ ಮಾಡಿದ್ದೀರಾ? ಒಂದು ಕಡೆ ಅದನ್ನು ಮಾಡಿದರೆ ಎಲ್ಲಾ ಕಡೆಯೂ ಮಾಡಿದಂತಾಯಿತೇ? ಇಂದು ಎಲೆ ಭೂಮಿ ಸಾಯಿಲ್ ಕನ್‌ಸರ್ವೆಷನ್ ಯಂತ್ರದ ಮೂಲಕ ಪರೀಕ್ಷೆಗೊಳಪಟ್ಟಿದೆ. ಅದೇ ಅಮೇರಿಕಾ ದೇಶದಲ್ಲಿ ಹೇಗೆ ಮಾಡುತ್ತಿದ್ದಾರೆಂಬುದನ್ನು ನೋಡಿ. ಮಾನ್ಯ ಆರ್ಥಿಕ ಸಚಿವರು ಅಲ್ಲಿಗೆ ಹೋಗಿ ಬಂದಿದ್ದಾರೆ. ಅವರೇನು ಒಕ್ಕಲುತನದ ಬಗ್ಗೆ ಸುಧಾರಣೆ ಮಾಡಲು ಪ್ರಯತ್ನ ಮಾಡಿದ್ದಾರೆ? ಹೊರ ದೇಶಗಳಲ್ಲಿ ಬೆಳೆದವನಿಗೆ ಬೆಲೆ ಕಟ್ಟುವುದಕ್ಕೆ ತನ್ನ ಪದಾರ್ಥಗಳಿಗೆ ಬೆಲೆ ನಿಗದಿ ಮಾಡಲು ಅವಕಾಶವಿದೆ. ಅದಕ್ಕೆ ಇಲ್ಲಿ ಅವಕಾಶವಿಲ್ಲ ಕಚ್ಚಾ ಪದಾರ್ಥ ಏನು ಉಪಯೋಗ ಮಾಡಿರುತ್ತಾನೆ ಅದರ ಬೆಲೆ, ವ್ಯವಸಾಯಕ್ಕೆ ಆಗಿರುವ ಖರ್ಚು, ಹಾಕಿರುವ ಬಂಡವಾಳ, ಅದಕ್ಕಾಗುವ ಬಡ್ಡಿ ಮುಂತಾದ್ದೆಲ್ಲವು ಒಕ್ಕಲಿಗನಿಗೆ ಗೊತ್ತಿರುವುದರಿಂದ ಅವನಿಗೆ ತಾನು ಬೆಳೆದುದಕ್ಕೆ ಬೆಲೆ ಕಟ್ಟಲು ಅವಕಾಶವಿರಬೇಕು. ಪ್ರತಿಯೊಂದು ವಿಭಾಗದಲ್ಲೂ ಆ ರೀತಿ ಅವಕಾಶವಿರುವಾಗ ಒಕ್ಕಲುತನಕ್ಕೆ ಮಾತ್ರ ಏಕೆ ಇಲ್ಲ. ಇತರರಿಗೆ ಒಕ್ಕಲಿಗ ಕಟ್ಟಿದಂತೆ ಸರಿಯಾದ ಬೆಲೆ ಕಟ್ಟಲು ಸರಿಯಾದ ಯೋಗ್ಯತೆ ಇರುವುದಿಲ್ಲ. ಅವಕಾಶವಿರಬೇಕು. ಇದಕ್ಕಿಂತ ನಾಚಿಕೆಗೇಡಿನ ವಿಚಾರ ಇನ್ನೊಂದಿಲ್ಲ. ನಿಜವಾಗಿಯೂ ಪ್ರಜಾಪ್ರಭುತ್ವವಿರುವ ದೇಶದಲ್ಲಿ ಈ ರೀತಿ ನಡೆಯಬಹುದೇ? ಇದಕ್ಕೆ ಯೋಗ್ಯ ಪರಿಹಾರ ನೀಡಬೇಕು. ಇಂದು ಅಮೇರಿಕಾದಲ್ಲಿ ಹೆಚ್ಚಾಗಿ ಬೆಳೆದರೆ ಧಾರಣೆ ಕಡಿಮೆಯಾಗಬಹುದೆಂದು

ಹೆಚ್ಚಾದ್ದನ್ನು ಸುಟ್ಟು ಹಾಕುತ್ತಾರೆ. ಧಾರಣೆ ಇಳಿದರೆ ಯಾರೂ ರೈತರು ಉಳಿಯುವುದಿಲ್ಲ ಎಂದು ಹಾಗೆ ಮಾಡುತ್ತಾರೆ. ಆದರೆ ನಮ್ಮ ದೇಶದಲ್ಲಿ ಏನು ಮಾಡುತ್ತಾರೆಂಬುದನ್ನು ನೋಡಬಹುದು. ಹಿಂದೆ ಏನು ಜೋಳದ ಬೆಲೆ ಅತೀ ಕಡಿಮೆಯಾಯಿತು. ಲೆವಿ ಬೆಲೆಗಿಂತ ಕಡಿಮೆಯಾಯಿತು. ಆದರೆ ಆಗ ಸರಕಾರ ಅದನ್ನು ಖರೀದಿ ಮಾಡಲಿಲ್ಲ. ಧಾರಣೆ ಹೆಚ್ಚಾದಾಗ ಮಾತ್ರ ಸರಕಾರ ತಾನು ನಿಗದಿ ಮಾಡುವ ಬೆಲೆಗೆ ಕೊಳ್ಳುವುದು. ಇದು ನ್ಯಾಯವೇ? ನಾವು ಸದ್ವಿವೇಕದಿಂದ ಶಾಂತಿಯಿಂದ ಏನಾದರೂ ಹೇಳಿದರೆ ನಮಗೆ ಬುದ್ಧಿಯಿಲ್ಲವೆಂದು ಭಾವಿಸುತ್ತಾರೆ. ಆದರೆ ತಮ್ಮವರೇ ಆದ ಡಾ|| ನಾಗನಗೌಡರು ಹೇಳಿದ್ದಕ್ಕಾದರೂ ಗಮನ ಕೊಡುವುದು ಸೂಕ್ತವಲ್ಲವೇ? ಲೆವಿ ಕೊಡಬಾರದು ಎಂದು ಹೇಳುವವರ ಬಗ್ಗೆ ಕ್ರಮ ತೆಗೆದುಕೊಳ್ಳುವುದಾಗಿ ಹೇಳುತ್ತೀರಿ ಹೀಗೆ ಮಾಡಿ ಚಳುವಳಿಗೆ ಅವಕಾಶ ಕೊಡುತ್ತೀರಿ. ಚಳವಳಿ ತಪ್ಪಿಸಬೇಕಾದರೆ ವಕ್ಕಲುತನದವರಿಗೆ ಯೋಗ್ಯ ಧಾರಣೆ ಕೊಡಿ. ಇಲ್ಲದಿದ್ದರೆ ಕಾರ್ಮಿಕರು ಮಾಡುವ ಹಾಗೆ ರೈತರೂ ಕೂಡ ಒಂದಲ್ಲ ಒಂದು ದಿನ ಸತ್ಯಾಗ್ರಹ ಮಾಡಬೇಕಾಗುತ್ತದೆ. ಅದನ್ನು ಮಾಡದೆ ಬಿಡುವುದಿಲ್ಲ. ರೈತನಿಗೆ ತ್ರಾಸ ಕೊಡುವುದು ಮಹಾಪಾಪ. ಈ ಭಾವನೆ ಬರಬೇಕು. ಬಾರದಿದ್ದರೆ ರೈತರು ಒಂದು ವರ್ಷ ಬಿತ್ತನೆ ಮಾಡದಿದ್ದರೆ ಇಡೀ ದೇಶಕ್ಕೆ ತೊಂದರೆಯಾಗುವುದು.

ಸೀಡ್ಸ್ ಕಾರ್ಪೊರೇಷನ್ ವಿಚಾರದಲ್ಲಿ ಅನೇಕರು ಅನೇಕ ವಿಧವಾಗಿ ಹೇಳುತ್ತಿದ್ದಾರೆ. ರೈತರಿಗೆ ಹೆಚ್ಚು ಧಾರಣೆ ಕೊಡಬೇಕು. ಪ್ರೊಸೆಸಿಂಗ್ ಯೂನಿಟ್ ಇದೆ, ರೈತರಿಗೆ ಜರ್ಮ್ಸ್ ಇರುವ ಸೀಡ್ಸ್ ಕೊಟ್ಟರೆ ಅದರಿಂದ ಸಾಕಷ್ಟು ಪ್ರಯೋಜನವಾಗುವುದಿಲ್ಲ. ಉದ್ಯೋಗ ಮಾಡುವ ಕಡೆ ಮದತ್ತು ಮಾಡಬೇಕು. ರೈತ ತನ್ನ ಕಾಲಮೇಲೆ ತಾನು ನಿಂತುಕೊಳ್ಳಲು ಸಾಧ್ಯವಾಗುವಂತೆ ಸರಿಯಾದ ಯೋಜನೆ ಮಾಡಿ ಸಕಲ ಸವಲತ್ತುಗಳನ್ನು ಸಾಕಷ್ಟು ಪ್ರಮಾಣದಲ್ಲಿ ಕೊಡಬೇಕು. ಕೃಷಿ ಖಾತೆಯಲ್ಲಿ ಪ್ರಗತಿ ಬಹಳ ನಿಧಾನವಾಗಿದೆ. ಅಲ್ಲಿನ ನೌಕರರಿಗೆ ಸರಿಯಾದ ಭಡ್ತಿ ವಗೈರೆ ಕೊಡುತ್ತಿಲ್ಲವೆಂದು ಅವರು ಹೈಕೋರ್ಟಿಗೆ ಹೋಗುತ್ತಿದ್ದಾರೆ. ಇಂದು ಡಿಸ್ಕ್ರಿಮಿನೇಷನ್ ಮಾಡುವುದು ಉಚಿತವಲ್ಲ. ಹೈಕೋರ್ಟ್ ಆರ್ಡರನ್ನು ಕೂಡ ಉಲ್ಲಂಘನೆ ಮಾಡಿರುವ ಸಂಧರ್ಬಗಳಿವೆ. ನ್ಯಾಯಬದ್ಧವಾಗಿ ನೌಕರರ, ಅಧಿಕಾರಿಗಳ ಹಕ್ಕು ಬಾಧ್ಯತೆಯನ್ನು ಕಾಪಾಡಿದರೆ ಅವರು ಮನಃಪೂರ್ವಕವಾಗಿ ರೈತರ ಸೇವೆ ಮಾಡುತ್ತಾರೆ. ಸರಿಯಾದ ಸುಧಾರಣೆಯಾಗುತ್ತದೆ. ಈಗ ಸಮಯ ಸಾಕಷ್ಟಿಲ್ಲವಾದುದರಿಂದ ನಾನು ಹೇಳಬೇಕಾಗಿರುವ ವಿಷಯಗಳೇನಿವೆ ಅದನ್ನು ಬರೆದು ಕೊಡುತ್ತೇನೆ. ಮಂತ್ರಿಗಳು ಉತ್ತರ ಹೇಳುವಾಗ ಎಲ್ಲ ಪಾಯಿಂಟುಗಳಿಗೂ ಜವಾಬು ಹೇಳಬೇಕು ಎಂದು ಕೇಳಿಕೊಂಡು ನನ್ನ ಮಾತನ್ನು ಮುಗಿಸುತ್ತೇನೆ.

# ಹೈನುಗಾರಿಕೆ ಅಭಿವೃದ್ಧಿ ಕುರಿತು ಚರ್ಚೆ

ಮಾನ್ಯರೆ, ನಾನು ಶ್ರೀ ಪಿ.ಎಲ್. ಪಾಟೀಲರ ದಾವೆಯನ್ನು ಮತ್ತು ಗದಗ ಬೆಟಗೇರಿ ಪಟ್ಟಣದ 142 ಸೂಚಿತ ನೀರು ಸರಬರಾಜು ಯೋಜನೆಯನ್ನು ಮಂಡಿಸುತ್ತಿದ್ದೇನೆ.

ಸನ್ಮಾನ್ಯ ಸಭಾಪತಿಗಳೇ, ನಮ್ಮ ಸರಕಾರದಿಂದ ಜನವನ್ನಂತೂ ಸುಧಾರಣೆ ಮಾಡಲಿಕ್ಕೆ ಆಗಲಿಲ್ಲ. ಹಣಕಾಸಿನ ಮಂತ್ರಿಗಳು ಎಷ್ಟೇ ಉದಾತ್ತವಾದ ವಿಚಾರಗಳನ್ನು, ಪ್ರಗತಿಪರವಾದ ವಿಚಾರಗಳನ್ನು ಜನತೆಗೆ ಹೇಳಿದರೂ ಜನರ ಸುಧಾರಣೆ ಮಾಡುವುದಂತೂ ಅವರಿಂದ ಆಗಲಿಲ್ಲ. ದನಗಳನ್ನಾದರೂ ಸುಧಾರಣೆ ಮಾಡುವುದಕ್ಕೆ ಅವಕಾಶ ಕೊಟ್ಟಿದ್ದಾರೆಯೇ ಎಂದರೆ ಹಣಕಾಸಿನ ಮಂತ್ರಿಗಳು ಇದಕ್ಕಾಗಿ ಒದಗಿಸಿರುವ ಅಂಕಿ ಅಂಶಗಳನ್ನು ನೋಡಿದರೆ ಅವರಿಗೆ ಇದರ ಬಗ್ಗೆ ಮನಸ್ಸು ಇಲ್ಲವೇನೋ ಎಂದು ಕಾಣಿಸಲಿಕ್ಕೆ ಹತ್ತಿದೆ.

ಈವತ್ತಿನ ದಿವಸ ಅನೇಕ ಮಿತ್ರರು ಡೈರಿಯ ಬಗ್ಗೆ ಬಹಳ ಮಾತನಾಡುತ್ತಿದ್ದಾರೆ. ಜನರಿಗೆ ಹಾಲು ಬೇಕು, ತತ್ತಿ ಬೇಕು, ಇವನ್ನು ಆಹಾರದ ಜೊತೆಗೆ ಒದಗಿಸಿದರೆ ಹೆಚ್ಚು ಆಹಾರ ಬೆಳೆಸುವ ಚಳುವಳಿಗೆ ಮತ್ತು ಆಹಾರ ಪದಾರ್ಥಗಳ ಮಿತವಾದ ಉಪಯೋಗಕ್ಕೆ ಸಹಾಯವಾಗಬಹುದು ಎಂದು ದೇಶದಲ್ಲಿ ಹೇಳುತ್ತಿದ್ದಾರೆ, ನಿಜ. ಆದರೆ ಈ ಸಂಬಂಧವಾದ ಅಂಕಿಸಂಖ್ಯೆ ನೋಡಿದರೆ, ಹಾಲಿನ ವಿಷಯ ನೋಡಿದರೆ ಅಥವಾ ಪೌಲ್ಟ್ರಿ ವಿಷಯ ನೋಡಿದರೆ ಆ ಬಗ್ಗೆ ಸಾಕಷ್ಟು ಏನೂ ಸಾಧಿಸಿಲ್ಲ. ಎಂದು ಹೇಳಿದರೆ ಅದು ಸಮರ್ಪಕವಾದೀತು, ಪ್ರಾಮಾಣಿಕವಾದ ಮಾತು ಆದೀತು ಎಂದು ನಾನು ಭಾವಿಸುತ್ತೇನೆ ಎಂದು ಹೇಳಬಹುದು. ಹಿಂದೆ ಡೈರಿ ಇರಲಿಲ್ಲ. ಈಗ ಬೆಂಗಳೂರಿನಲ್ಲಿ ಒಂದು ಡೈರಿಯನ್ನು ಸ್ಥಾಪಿಸಿ ಅದಕ್ಕೆ ದೊಡ್ಡ ಕಟ್ಟಡ ಕಟ್ಟಿಸಿ ಬಾಟಲುಗಳಲ್ಲಿ ಬಿಳಿಯ ಮತ್ತು ಗುಲಾಬಿ ಬಣ್ಣದ ಹಾಲನ್ನು ಜನರಿಗೆ ಒದಗಿಸುತ್ತಿದ್ದೇವೆ ಎಂದು. ಆದರೆ ಇದು ಪ್ರಗತಿಯಲ್ಲ. ಎಲ್ಲೋ ಒಂದು ಕಡೆ ದೇಶದಲ್ಲಿ ಡೈರಿಯನ್ನು ಮಾಡಿದರೆ ಅದರಿಂದ ದೇಶದ ಜನರಿಗೆಲ್ಲಾ ಸಹಾಯವಾಗುವುದಿಲ್ಲ. ಇತರ ಕಡೆಗಳಲ್ಲೂ ಸ್ಥಾಪನೆ ಮಾಡಬೇಕು. ಅನೇಕ ರಾಜ್ಯಗಳಲ್ಲಿ ಮಹಾರಾಷ್ಟ್ರದಲ್ಲಿ ನೋಡಿ, ತುಲನಾತ್ಮಕ ದೃಷ್ಟಿಯಿಂದ ಅದಕ್ಕೆ ಹೊಂದಾಣಿಕೆ ಮಾಡಿ ನೋಡಿದರೆ ಅಲ್ಲಿ ಮಾಡಿರುವುದಕ್ಕಿಂತ ಹೆಚ್ಚಾಗಿ ಇಲ್ಲೇನೂ ಸಾಧಿಸಿಲ್ಲ. ಮಹಾರಾಷ್ಟ್ರದವರು ಡೈರಿ ವಿಚಾರದಲ್ಲಿ ಯಾವ ರೀತಿಯ ಪ್ರಗತಿಯನ್ನು ಸಾಧಿಸಿದ್ದಾರೆ ಎಂಬುದನ್ನು ನೋಡಿದರೆ ಮೈಸೂರು ಸರಕಾರ ಅಷ್ಟು ಜನರಿಗೆ ಉಪಕಾರ ಮಾಡಿದಂತಾಗುತ್ತದೆ. ನಿಜವಾಗಿಯೂ ಹೇಳಬೇಕಾದರೆ ದನಗಳ ಸುಧಾರಣೆಯು ಅನಾದಿ ಕಾಲದಿಂದ ಮಹಾರಾಜರ ಕಾಲದಿಂದ ಬಹಳ ಪ್ರಗತಿದಾಯಕವಾಗಿ ರಾಜ್ಯದಲ್ಲಿ ಬಹಳ ಚೆನ್ನಾಗಿ ನಡೆಯುತ್ತಿತ್ತು. ಹಳೆಯ ಮೈಸೂರಿನಲ್ಲಿ ಬಹಳಷ್ಟು ಘನತರವಾಗಿ ನಡೆಯುತ್ತಿತ್ತು. ಆದರೆ ಹೊಸ ಮೈಸೂರು ಆದನಂತರ ಕರ್ನಾಟಕವನ್ನು ನೋಡಿದರೆ ಹೊಸದಾಗಿ ಮೈಸೂರಿಗೆ ಸೇರಿದ ಭಾಗಗಳಿಗೆ ಡೈರಿ ವಿಚಾರದಲ್ಲಿ ಏನೇನೂ ಮಾಡಿಲ್ಲ ಎಂದು ಹೇಳಬಹುದು. ತಮಗೆ ಬೇಕಾದ ಕಡೆ ತಮಗೆ ಬೇಕಾದವರಿರುವ ಕಡೆ ಅದರ ಸುತ್ತಮುತ್ತ ಎರಡು ಮೈಲಿ ಫಾಸಲೆಯಲ್ಲಿ ಬೇಕಾದ ಯೋಜನೆಗಳನ್ನು ಜಾರಿಗೆ ತರುವರೇ ಹೊರತು ಇತರ ಕಡೆಗಳಲ್ಲಿ

---

ದಿನಾಂಕ : 8-4-1968

ತರುವುದಿಲ್ಲ. ಮೈಸೂರು ರಾಜ್ಯದ ಇತರ ಭಾಗಗಳಲ್ಲೂ ಜನರಿದ್ದಾರೆ. ಅವರಿಗೂ ಸಹಾಯ ಮಾಡಬೇಕು ಎಂಬ ಭಾವನೆ ಕೂಡ ಇರುವಂತೆ ತೋರುವುದಿಲ್ಲ. ಒಂದು ಯೋಜನೆ ಮಾಡಬೇಕಾದರೆ ಯಾವಾಗಲೂ ದೇಶದಲ್ಲಿರುವ ಎಲ್ಲ ಜನರ ಹಿತದೃಷ್ಟಿಯಿಂದ ಮಾಡಬೇಕು. ಇಲ್ಲದಿದ್ದರೆ ಪ್ರಯೋಜನವಾಗುವುದಿಲ್ಲ. ನಮ್ಮ ಸುದೈವದಿಂದ ದೊಡ್ಡ ಪರಂಪರೆಯಲ್ಲಿ ಬೆಳೆದು ಬಂದ ಶ್ರೀ ದೇವರಾಜ ಅರಸ್‌ರವರು ಈ ಖಾತೆಯಲ್ಲಿದ್ದಾರೆ. ಅವರಿಂದ ದೇಶಕ್ಕೆ ಅನುಕೂಲವಾಗಬಹುದು ಎಂದಿದ್ದೆವು. ಆದರೆ ಅವರು ಬೇಕಾದ್ದನ್ನು ಸಾಧಿಸಲು ಹಣವನ್ನು ಅವರಿಗೆ ಒದಗಿಸದಿದ್ದರೆ ಅವರೇ ತಾನೆ ಏನು ಮಾಡಲು ಸಾಧ್ಯ? ಕೆಡಿಸಿರುವ ಖಾತೆಯನ್ನು ಅವರು ಸುಧಾರಿಸಬೇಕಾಗಿದೆ. ಅವರು ಎಷ್ಟು ದಿವಸಗಳಲ್ಲಿ ಸುಧಾರಿಸಬಹುದು ಎಂಬುದನ್ನು ಹೇಳುವುದಕ್ಕೆ ಸಾಧ್ಯವಿಲ್ಲ. ದನಗಳ ಸುಧಾರಣೆ, ತಳಿ ಸುಧಾರಣೆ ಬಹಳ ಚೆನ್ನಾಗಿ ಆಗುತ್ತಿದೆ ಎಂದು ಹೇಳಿಕೊಳ್ಳುತ್ತಾರೆ ನಿಜ. ಆದರೆ ಎಷ್ಟರ ಮಟ್ಟಿಗೆ ಆಗಿದೆ ಎಂಬುದನ್ನು ನೋಡಬೇಕು. ಹುಲ್ಕೋಟಿಗೆ ಬೇಕಾದ ಸೀಮನ್ ಬೆಂಗಳೂರಿನಿಂದ ಬರಬೇಕು. ಆದರೆ ಅದು ಜಾಗ್ರತೆ ಬರ ಏನು ತಾನೆ ಅನುಕೂಲ ಮಾಡಿದ್ದೀರಿ? ಈ ಇಲಾಖೆಯ ಡೈರೆಕ್ಟರಿಗೆ ಮೋಟಾರು ಇದೆಯೇ? ವಿಮಾನಗಳಲ್ಲಿ ಕಳಿಸಲು ಸೌಕರ್ಯ ಮಾಡಿರುವಿರಾ? ಜಾಗ್ರತೆ ಕಳಿಸಲು ಯಾವ ಏರ್ಪಾಡನ್ನೂ ಸರಿಯಾಗಿ ಮಾಡಿರುವುದಿಲ್ಲ. ನಾವು ಕೇಳಿದರೆ ಬಡ್ಜೆಟ್ಟಿನಲ್ಲಿ ಪ್ರಾವಿಷನ್ ಇಲ್ಲ ಎಂದು ಹೇಳುತ್ತಾರೆ. ಮಂತ್ರಿಗಳು ಕೇಳಿದರೆ ಹಣಕಾಸಿನ ಮಂತ್ರಿಗಳು ಕೊಟ್ಟಿರುವ ಹಣವನ್ನು ಬಡ್ಜೆಟ್ಟಿನಲ್ಲಿ ಹೊಂದಾಣಿಕೆ ಮಾಡಬೇಕು ಎಂದು ಹೇಳಬಹುದು. ಈ ರೀತಿಯಾಗಿ ಡೈರೆಕ್ಟರು ಒಂದು ತರಹ, ಮಂತ್ರಿಗಳು ಒಂದು ಹೇಳುವುದು ಸರಿಯಲ್ಲ. ಇದು ಬಹಳ ದಿವಸ ನಡೆಯುವುದಿಲ್ಲ. ಇಂದು ಡೈರಿ ಫಾರಂ ಕಡೆಗೆ ಸರಿಯಾದ ಲಕ್ಷ್ಯವಿಡಿ, ಸರಿಯಾದ ಆಡಳಿತ ಅಲ್ಲಿರುವಂತೆ ನೋಡಿಕೊಂಡು ಅದರಿಂದ ಜನರಿಗೆ ಅನುಕೂಲವಾಗುವಂತೆ ಮಾಡಿ. ಮಂಗಳೂರಿನಲ್ಲಿ ಈ ಸಂಬಂಧವಾಗಿ ಸರಿಯಾದ ಡೆವಲಪ್‌ಮೆಂಟ್ ಆಗಿಲ್ಲ. ಅಲ್ಲಿ ಬೆಳವಣಿಗೆಯಾಗಿಲ್ಲ. ಅದಕ್ಕೆ ಸರಿಯಾದ ಲಕ್ಷ್ಯಕೊಟ್ಟು ಹೆಚ್ಚು ಹಣ ಕೊಡಿ. ಇಲ್ಲದಿದ್ದರೆ ಸರಿಯಾದ ಪ್ರಯೋಜನವಾಗುವುದಿಲ್ಲ. ಧಾರವಾಡದಲ್ಲಿ ಡೈರಿಯೋಜನೆಯನ್ನು ಮಂಜೂರು ಮಾಡಿದ್ದೀರಿ, ಅದಕ್ಕೆ ಮಣ್ಣು ಹಾಕಬೇಡಿ. ಅದನ್ನು ಸುಧಾರಣೆ ಮಾಡುವುದಕ್ಕೆ ಎಷ್ಟು ವರ್ಷ ಬೇಕು? ಹಣ ದುರುಪಯೋಗ ಮಾಡುವವರಿಗೆ ಅವಕಾಶ ಕೊಡಬಾರದು. ಎಚ್ಚರಿಕೆಯಿಂದ ತೀವ್ರವಾಗಿ ಪ್ರಾರಂಭಿಸಬೇಕು.

ದನಗಳ ಬಗ್ಗೆ ಹೇಳುವುದಾದರೆ ಡ್ಯಾನಿಷ್ ಸರ್ಕಾರದವರು ಕೊಟ್ಟಿದ್ದಾರೆ ಅಂತ ಹೇಳಿಕೊಂಡು ಫಾರಂಗಳನ್ನು ಮಾಡುತ್ತ ಹೋಗುವುದು ಸರಿಹೋಗುವುದಿಲ್ಲ. ಎಲ್ಲಾ ಕಡೆಗಳಲ್ಲಿ ಕೆಲವು ಕಡೆಗಳಲ್ಲಿ ಕೆಲ ಕೆಲವು ಬ್ರೀಡಿಂಗ್ ಸೆಂಟರ್ಸ್‌ನ್ನು ಇಡಬೇಕು ಮತ್ತು ಆರ್ಟಿಫಿಷಿಯಲ್ ಎನ್‌ಸೆಮಿನೇಷನ್‌ಗೆ ವ್ಯವಸ್ಥೆ ಮಾಡಬೇಕು ಎಂದು ಹೇಳುತ್ತೇನೆ. ಪ್ರತಿಯೊಂದಕ್ಕೂ ಕೂಡ ಬೆಂಗಳೂರಿನ ಸುತ್ತಮುತ್ತಲೂ ಬರಬೇಕೆಂದರೆ ಸರಿಹೋಗುವುದಿಲ್ಲ. ಇಡೀ ರಾಜ್ಯ ಪ್ರತಿನಿಧಿಗಳು ನಾವು ಅಂತ ತಿಳಿದುಕೊಂಡು ಜನತಾ ಖಾತೆಗೆ ನಾವು ಹೆಚ್ಚು ಲಕ್ಷ್ಯ ಕೊಡದಿದ್ದರೆ ಹೋಗಲಿ ದನಗಳ ಖಾತೆಗಾದರೂ ಲಕ್ಷ್ಯಕೊಡಬೇಕೆಂಬುದು ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ.

# ರೈತರ ಬೆಳೆ, ಒಕ್ಕಲುತನ ಸಮಸ್ಯೆ ಬಗ್ಗೆ ಚರ್ಚೆ

ಸನ್ಮಾನ್ಯ ಸಭಾಪತಿಗಳೇ, ಈಗ ನಮ್ಮ ಎದುರಿಗಿರುವ ಬಿಲ್ಲು ಅತ್ಯಂತ ಸದುದ್ದೇಶವುಳ್ಳದ್ದಾಗಿದ್ದರೂ ಅದರ ರೂಪರೇಷೆಗಳ ಬಗ್ಗೆ ತುಲನೆ ಮಾಡಿದರೆ ಅದರ ಪರಿಣಾಮದ ಬಗ್ಗೆ ವಿಚಾರ ಮಾಡಿದರೆ ಅದು ನಿಜವಾಗಿಯೂ ಕೂಡ ಮೈಸೂರು ರಾಜ್ಯದ ಒಕ್ಕಲುತನದವರಿಗೆ ತೊಂದರೆಯನ್ನುಂಟು ಮಾಡುತ್ತದೆ ಎಂಬುದು ವ್ಯಕ್ತವಾಗುತ್ತದೆ. ಇಂದು ಈ ಸಭೆಯಲ್ಲಿ ನಾಯಕರಾದ ಶ್ರೀಮಾನ್ ವೀರೇಂದ್ರ ಪಾಟೀಲರು ಮಾತನಾಡುತ್ತಾ ಮಾನ್ಯ ಸದಸ್ಯರು ರಚನಾತ್ಮಕವಾದ ಸಲಹೆ ಕೊಟ್ಟರೆ ಅದು ಯಾವುದೇ ಪಕ್ಷದಿಂದ ಬಂದರೂ ಸಹ ಸ್ವಾಗತಿಸುವುದಾಗಿ ಹೇಳಿದರು, ಬಹಳ ಸಂತೋಷ. ಈ ದಿವಸ ಪೈರಿಗೆ ರೋಗ ಬರುವುದನ್ನು ನಿವಾರಣೆ ಮಾಡುವುದಾಗಿ ಹೇಳುವ ಸರಕಾರ ಹಾಗೆ ಮಾಡಿ ರೈತರಿಗೆ ಉಪಕಾರ ಮಾಡುವುದಾಗಿ ಹೇಳುವ ಸರಕಾರ ರೈತರಿಗೆ ತೊಂದರೆ ಮಾಡಲು ಅವರನ್ನು ಗುಲಾಮರನ್ನಾಗಿ ಮಾಡಲು ಅಧಿಕಾರ ಪಡೆದಿದ್ದಾರೆ. ಅಲ್ಲದೆ ಆ ಅಧಿಕಾರವನ್ನು ಒಬ್ಬ ಡೆಪ್ಯುಟಿ ಡೈರೆಕ್ಟರಿಗೆ ಕೊಟ್ಟಿದ್ದಾರೆ. ಇದರ ಪರಿಣಾಮವೇನಾಗುತ್ತದೆಂಬುದನ್ನು ಸಂಬಂಧಪಟ್ಟ ಉಪಮಂತ್ರಿಗಳು ಮತ್ತು ಮಂತ್ರಿಗಳು ಗಮನಿಸಬೇಕು ಎಂಬುದನ್ನು ನಿವೇದನೆ ಮಾಡುತ್ತಿದ್ದೇನೆ. ಅಧಿಕಾರ ಯಾರಿಗೂ ಕೂಡ ಬಹಳ ದಿವಸ ಇರುವುದಿಲ್ಲ. ಹಿಂದಿನ ಮುಖ್ಯ ಮಂತ್ರಿಗಳು ತಾವು ಮೈಸೂರು ರಾಜ್ಯದಲ್ಲಿರುವವರೆಗೂ ಈ ರಾಜ್ಯದ ಮುಖ್ಯ ಮಂತ್ರಿಯಾಗಿರುವುದಾಗಿ ಹೇಳುತ್ತಿದ್ದರು. ಈ ದಿವಸ ಅವರು ಮುಖ್ಯ ಮಂತ್ರಿಯಾಗಿಲ್ಲ. ಇಂದಿರುವ ವೀರೇಂದ್ರ ಪಾಟೀಲರೂ ಕೂಡ ಶಾಶ್ವತವಾಗಿ ಬಹಳ ಕಾಲದವರೆಗೆ ಮುಖ್ಯಮಂತ್ರಿಗಳಾಗಿರುವುದಿಲ್ಲ ಎಂಬುದನ್ನು ಅವರು ಅರಿಯಬೇಕು. ಇಂದು ನಾವು ಮಾಡುವ ಕಾಯಿದೆ ಮುಂದೆ ನಾವು ಅಧಿಕಾರ ಬಿಟ್ಟ ಮೇಲೆ ನಮ್ಮ ಮೇಲೆ ಸಹ ಅದರ ಪರಿಣಾಮ ಉಂಟುಮಾಡುತ್ತದೆ ಎಂಬುದನ್ನು ಅವರು ಅರಿಯಬೇಕು. ಆ ದೃಷ್ಟಿಯಿಂದ ಈ ಕಾಯಿದೆಯನ್ನು ವಿಮರ್ಶೆ ಮಾಡಬೇಕು. ಈ ಬಿಲ್ಲು ಸೆಲೆಕ್ಟ್ ಸಮಿತಿಗೆ ಹೋಗುವಾಗ ಮಾನ್ಯ ಮುಖ್ಯಮಂತ್ರಿಗಳು ಇದರ ಪುನರ್ಪರಿಶೀಲನೆಯಾಗುತ್ತದೆ ಲೋಪದೋಷಗಳು ನಿವಾರಣೆಯಾಗುತ್ತದೆ ಎಂದು ಆಶ್ವಾಸನೆ ಕೊಟ್ಟರು. ಇಂದು ಆ ಸಮಿತಿಯ ವರದಿ ಬಂದರೂ ಸಹ ಆ ಸಮಿತಿಯ ಸದಸ್ಯರು ಎಲ್ಲರೂ ಸಮಿತಿಯ ವರದಿಗೆ ಪೂರ್ಣ ಒಪ್ಪಿಗೆಯನ್ನು ನೀಡಿಲ್ಲ. ಕೆಲವರು ಭಿನ್ನಾಭಿಪ್ರಾಯವನ್ನು ಸೂಚಿಸಿದ್ದಾರೆ. ಎಂ.ಆರ್. ಪಾಟೀಲರು ಪ್ರಾಸಿಕ್ಯೂಷನ್ ಕ್ರಮ ತೆಗೆದುಕೊಳ್ಳುವ ಸೆಕ್ಷನ್ ಬಗ್ಗೆ ಬಹಳ ಕಟುವಾಗಿ ಟೀಕಿಸಿರುವುದು ಸಮಿತಿಯ ವರದಿಯಲ್ಲಿದೆ. ಅಲ್ಲದೆ ಪ್ರಾಸಿಕ್ಯೂಷನ್ ಬಗ್ಗೆ ಡೆಪ್ಯುಟಿ ಡೈರೆಕ್ಟರಿಗೆ ಅಧಿಕಾರ ಕೊಡುವುದು ಯಾವ ನ್ಯಾಯ? ನಾನು ಬೆಳೆದ ಪೈರನ್ನು ರಕ್ಷಣೆ ಮಾಡಬೇಕೆಂಬ ಬಗ್ಗೆ ನನಗೆ ಆಸಕ್ತಿ ಇರುವುದಿಲ್ಲವೇ? ರೈತರ ಕೈಲಿ ಬೆಳೆಯನ್ನು ಕ್ರಿಮಿಕೀಟಗಳಿಂದ, ರೋಗದಿಂದ ರಕ್ಷಣೆ ಮಾಡಲು ಸಾಧ್ಯವಾಗದಿರುವಾಗ ಸಾಮೂಹಿಕವಾಗಿ ಕೆಲಸ ಮಾಡಿ ರೋಗ ನಿವಾರಣೆ ಮಾಡಬೇಕೆಂದು ಹೇಳುವುದೇನೋ ಸರಿ. ಆದರೆ ರೈತ ಸಹಕರಿಸಲಿಲ್ಲ. ರೋಗ ನಿವಾರಿಸಲು ಸರಿಯಾದ ಕ್ರಮ ತೆಗೆದುಕೊಳ್ಳಲಿಲ್ಲ ಎಂದು ಆ ಒಂದು ನೆಪದಿಂದ ಕಡ್ಡಾಯವಾಗಿ ಆ ಕೆಲಸವನ್ನು ಬೇರೆಯವರಿಂದ ಮಾಡಿಸಿ ರೈತನಿಂದ ಕಡ್ಡಾಯವಾಗಿ ಅದಕ್ಕೆ ತಗಲುವ ಖರ್ಚನ್ನು ವಸೂಲು ಮಾಡಬೇಕೆಂದು ಹೇಳುವುದು ಸರಿಯೇ? ರೈತ ಆ ಖರ್ಚನ್ನು ಕೊಡದಿದ್ದರೆ ಅದನ್ನು ಅವರ

---

ವಿಸನದಿ : 3-9-1968

ಆಸ್ತಿಪಾಸ್ತಿಯಿಂದ ವಸೂಲು ಮಾಡುತ್ತೇವೆಂದು ಹೇಳುವುದು ಬುದ್ಧಿವಂತಿಕೆಯೇ? ಹೀಗೆ ಮಾಡಿ ಅಧಿಕಾರಿಗಳು ರೈತನನ್ನು ಹಿಂಸೆ ಮಾಡಲು ಅವಕಾಶ ಇದೆ. 7 ದಿವಸ ರೈತನನ್ನು ಕೆಲಸಕ್ಕೆ ಕರೆಯಲು ಡೆಪ್ಯುಟಿ ಡೈರೆಕ್ಟರಿಗೆ ಅಧಿಕಾರವಿದೆ. ಈ ರೀತಿ ರೈತರನ್ನು ಹಿಂಸೆಗೆ ಗುರಿಮಾಡಲು ಅವಕಾಶವಿರುವುದರಿಂದ ಈ ಬಿಲ್ಲನ್ನು ವಿರೋಧಿಸಬೇಕಾಗಿದೆ. ಹೀಗಿರುವುದರಿಂದ ಈ ಬಿಲ್ಲನ್ನು ಯಾವ ಉದ್ದೇಶದಿಂದ ತಂದರೋ ಅದು ಸಾರ್ಥಕವಾಗುವುದಿಲ್ಲ. ರಾಜ್ಯದಲ್ಲಿ ಒಕ್ಕಲತನದ ಅಭಿವೃದ್ಧಿಯಾಗಬೇಕು, ಏಳಿಗೆಯಾಗಬೇಕು ಎಂದು ಹೇಳುವಾಗ ಈ ಬಿಲ್ಲಿನ ಉದ್ದೇಶ ಅದಕ್ಕೆ ಧಕ್ಕೆ ತರುವಂತಿದೆ. ರೈತರಿಗೆ ಪೈರಿಗೆ ಬರುವ ರೋಗವನ್ನು ತಡೆಗಟ್ಟಲು ಅವರ ಆರ್ಥಿಕ ಪರಿಸ್ಥಿತಿ ಚೆನ್ನಾಗಿಲ್ಲ. ಅದು ಅವರು ಮಾಡಬೇಕಾದ ಕೆಲಸಕ್ಕೆ ಅಡ್ಡಿ ತರುತ್ತದೆ. ಅದರಲ್ಲಿ ತಾಂತ್ರಿಕ ಅಜ್ಞಾನ ಇದೆ. ಅದನ್ನು ಗಮನಿಸಿ ಈ ಬಿಲ್ಲನ್ನು ತಂದರೂ ಅದರ ಉದ್ದೇಶ ನೆರವೇರುವಂತಿಲ್ಲ. ಇಂದು ವಿಮಾನದಿಂದ ಔಷಧಿಯನ್ನು ಸಿಂಪಡಿಸಿ ಸರಕಾರ ಅದಕ್ಕೆ ಹಣ ಖರ್ಚು ಮಾಡಿ ಸಂಬಂಧಪಟ್ಟ ರೈತರ ಆಸ್ತಿ ಪಾಸ್ತಿಯಿಂದ ಅದನ್ನು ವಸೂಲು ಮಾಡಬೇಕೆನ್ನುವುದು ಮತ್ತು ಕರೆದಾಗ 7 ದಿವಸಗಳಲ್ಲಿ ಬರಬೇಕೆಂಬುದು ರೈತರಿಗೆ ಕಿರುಕುಳವನ್ನುಂಟು ಮಾಡುತ್ತದೆ. ಇಡೀ ಕಾಯಿದೆಯನ್ನು ಓದಿದರೆ ಅನೇಕ ಕಲಮುಗಳಲ್ಲಿ ಲೋಪದೋಷಗಳು ಇರುವುದು ಕಂಡು ಬರುತ್ತದೆ. ಅದನ್ನು ಸರಿಪಡಿಸದಿದ್ದರೆ ಮಸೂದೆಯನ್ನು ತಂದಿರುವ ಉದ್ದೇಶ ಸಫಲವಾಗುವುದಿಲ್ಲ. ಸೆಲೆಕ್ಟ್ ಕಮಿಟಿಗೆ ಸಾಕಷ್ಟು ಕಾಲಾವಕಾಶ ಸಿಕ್ಕದೆ ಅಥವಾ ಸಿಕ್ಕಿದ್ದರೂ ಅವರು ಸರಿಯಾಗಿ ಪರಿಶೀಲಿಸಲು ಅವಕಾಶವಾಗದೆ ಲೋಪದೋಷಗಳು ಪೂರ್ಣವಾಗಿ ನಿವಾರಣೆಯಾಗಿಲ್ಲ. ಅದಕ್ಕಾಗಿ ನಂಜೇಗೌಡರು ಹೇಳಿದಂತೆ ಇದನ್ನು ಪುನಃ ಸೆಲೆಕ್ಟ್ ಕಮಿಟಿಗೆ ಅಥವಾ ಬೇರೊಂದು ಸಮಿತಿಗೆ ಕಳಿಸಿ ಪುನರ್ ಪರಿಶೀಲನೆ ಮಾಡಿಸುವುದು ಅತ್ಯಾವಶ್ಯಕವಾಗಿದೆ. ಆದುದರಿಂದ ಈ ವಿಧೇಯಕವನ್ನು ಈ ಸಭೆಯಿಂದ ವಿತ್ ಡ್ರಾ ಮಾಡಿ ಪುನರ್ ಪರಿಶೀಲನೆ ಮಾಡಲು ತಕ್ಕ ಕ್ರಮ ಕೈಕೊಳ್ಳಬೇಕು.

ಇಂದು ಈ ಮಸೂದೆಯಲ್ಲಿ ರಾಜ್ಯಾಂಗದಲ್ಲಿ ನಮೂದಾಗಿರುವ ಹಕ್ಕಿಗೆ ಚ್ಯುತಿ ಬರುವಂತಿದೆ. ಎಲ್ಲರಿಗೂ ಸಮಾನವಾದ ಹಕ್ಕು ಇರಬೇಕು ಎಂದು ಹೇಳುವಾಗ ಹೆಣ್ಣು ಮಕ್ಕಳಿಗೇ ಒಂದು ಗಂಡು ಮಕ್ಕಳಿಗೇ ಒಂದು ಕಾಯಿದೆ ಮಾಡುವುದು ಸರಿಯಲ್ಲ. ಅದಲ್ಲದೆ ಔಷಧಿ ಸಿಂಪಡಿಸಲು ಹೆಣ್ಣು ಮಕ್ಕಳ ಉಪಯೋಗವೇ ಜಾಸ್ತಿ ಎಂಬುದನ್ನು ಮರೆತಿರುವ ಹಾಗೆ ತೋರುತ್ತದೆ. ಆದರೆ ಅವರಿಗೆ ಕ್ರಿಮಿಕೀಟಗಳ ನಿಯಂತ್ರಣ ಮಾಡಲು ಕಾಯಿದೆಯಲ್ಲಿ ಅವಕಾಶವಿಲ್ಲ. ಗಂಡಸರಿಗೆ ಮಾತ್ರ ಅವಕಾಶ ಮಾಡಿದ್ದಾರೆ. ಅನೇಕ ಕಲಮುಗಳಲ್ಲಿ ಹೀಗೆ ವಿಪರ್ಯಾಸವಿದೆ. ಈ ಕಾಯಿದೆಯನ್ನು ಯಾವ ಉದ್ದೇಶದಿಂದ ತಂದರೋ ಅದು ನೆರವೇರದೆ ಬಹಳ ದುಷ್ಪರಿಣಾಮವುಂಟಾಗಲಿದೆ. ಇಂದು ಪ್ರಜಾಪ್ರಭುತ್ವವು ಯಶಸ್ವಿಯಾಗಿ ನಡೆಯಬೇಕೆಂದಿದ್ದರೆ ಸರಿಯಾದ ಕಾನೂನುಗಳನ್ನು ರಚಿಸಬೇಕು, ಇಲ್ಲದಿದ್ದರೆ ಅದು ನಶಿಸಿ ಹೋಗುತ್ತದೆ. ಇತ್ತೀಚಿಗೆ ಈ ಸರಕಾರ ಊಳುವವರನ್ನು ತನ್ನ ನಿಯಂತ್ರಣದಲ್ಲಿಡಬೇಕು ಎಂಬ ಅಭಿಲಾಷೆ ಹೊಂದಿರುವಂತೆ ಭಾಸವಾಗುತ್ತಿದೆ. ಸರಕಾರ ಇಂದು ಜನತೆಯ ವಿಶ್ವಾಸವನ್ನು ಕಳೆದುಕೊಂಡಿದೆ ಎಂಬ ಭಾವನೆಯಿದೆ. ಜನರಿಗೆ ಸರಿಯಾದ ಆಳಿವಳಿಕೆ ಕೊಡಲು ಸಾಮರ್ಥ್ಯವಿಲ್ಲದೆ ನೈತಿಕ ಬೆಂಬಲ ಕಳೆದುಕೊಂಡಿರುವ ಸರಕಾರ ಅಧಿಕಾರವನ್ನು ಬಿಡುವುದು ಒಳ್ಳೆಯದು. ನಮ್ಮದು ರೈತರ ರಾಜ್ಯವಾಗಬೇಕೆಂದು ಮಹಾತ್ಮಾ ಗಾಂಧಿಯವರು

ಹೇಳುತ್ತಿದ್ದರು. ಆದರೆ ರೈತರನ್ನು ಇವತ್ತಿನ ದಿನ ಕೂಲಿಗಾರರಂತೆ ಭಾವಿಸಲಾಗುತ್ತಿದೆ. ವಿರೋಧ ಪಕ್ಷದವರು ಹೇಳುವುದಕ್ಕೆ ಇಂದು ಸಾಕಷ್ಟು ಬೆಲೆ ಇಲ್ಲ. ಮುಂದೆ ಬೆಲೆ ಕೊಡಬೇಕಾದ ಕಾಲ ಬರುತ್ತದೆ. ವಿರೋಧ ಪಕ್ಷದವರು ರೈತರ ಮತ್ತು ಜನರ ಅಭಿಪ್ರಾಯಗಳನ್ನು ಪ್ರತಿಬಲವಾಗಿ ವಿರೋಧಿಸಿ ಇದನ್ನು ಪುನರ್ಪರಿಶೀಲನೆ ಮಾಡಬೇಕೆಂದು ಒತ್ತಾಯ ಮಾಡಿ ನನ್ನ ಮಾತನ್ನು ಮುಗಿಸುತ್ತೇನೆ.

# ಮೈಸೂರು ವಿಧಾನಮಂಡಲ ಸದಸ್ಯರ ಸಂಬಳ (ತಿದ್ದುಪಡಿ) ವಿಧೇಯಕ, 1968ರ ಮೇಲಿನ ಚರ್ಚೆ

ಸನ್ಮಾನ್ಯ ಸಭಾಪತಿಗಳೇ, ಮೈಸೂರು ಲೆಜಿಸ್ಲೇಚರ್ ಸ್ಯಾಲರೀಸ್ ಅಮೆಂಡ್‌ಮೆಂಟ್ ಬಿಲ್ಲನ್ನು ನಾನು ಸ್ವಾಗತ ಮಾಡುತ್ತ ಕೆಲವೊಂದು ಮಾತುಗಳನ್ನು ಹೇಳಬಯಸುತ್ತೇನೆ.

ಸ್ಪೀಕರ್ ಮತ್ತು ಚೇರ್‌ಮನ್ ಅವರ ಪಗಾರವನ್ನು ಸಭೆಯ ಕರ್ತವ್ಯ ದೃಷ್ಟಿಯಿಂದ ಹೆಚ್ಚು ಮಾಡಬೇಕು ಎನ್ನುವುದು ಬಹಳ ಸ್ತುತ್ಯ. ನಮ್ಮ ದೇಶದ ಪರಿಸ್ಥಿತಿ ಏನೇ ಇರಲಿ, ಸಭೆಯ ಗೌರವವನ್ನು ಕಾಯುವ ದೃಷ್ಟಿಯಿಂದ ಮಂತ್ರಿಗಳಿಗಿಂತಲೂ ಅಧಿಕ ಸ್ಥಾನದಲ್ಲಿ ಅಧ್ಯಕ್ಷರಿರಬೇಕು ಎಂದು ಈ ತಿದ್ದುಪಡಿ ತಂದಿರುವುದಕ್ಕಾಗಿ ನಾನು ಸರ್ಕಾರವನ್ನು ಅಭಿನಂದಿಸುತ್ತೇನೆ.

ಡೆಪ್ಯುಟಿ ಸ್ಪೀಕರ್ ಸಹ ಪ್ರತಿ ದಿವಸ ಸಭೆಯಲ್ಲಿ ಅಧ್ಯಕ್ಷತೆ ವಹಿಸಲು ಕೂತಿರಬೇಕಾಗುತ್ತದೆ. ಅವರು ಸ್ಪೀಕರ್‌ಗಿಂತ ಹೆಚ್ಚು ಕಾಲ ಕುಳಿತಿರಬೇಕಾಗಬಹುದು. ನಾನು ಹೀಗೆ ಹೇಳುವಾಗ ತಪ್ಪು ಹೇಳುತ್ತೇನೆಂದು ಭಾವಿಸಬಾರದು. ನಮ್ಮ ಹಿರಿಯರಾದ ಮಾನ್ಯ ಪಾರ್ಲಿಮೆಂಟರಿ ವ್ಯವಹಾರಗಳ ಮಂತ್ರಿಗಳಲ್ಲಿ ನಾನು ಸವಿನಯಪೂರ್ವಕವಾದ ಬಿನ್ನಹ ಮಾಡಿಕೊಳ್ಳುತ್ತೇನೆ. ಈಗ ತಂದಿರುವ ಮಸೂದೆಯಲ್ಲಿ ಅದನ್ನು ಅಡಕ ಮಾಡದೇ ಇದ್ದರೂ ಇನ್ನೊಂದು ಮಸೂದೆಯನ್ನು ತಂದು ಡೆಪ್ಯುಟಿ ಸ್ಪೀಕರ್‌ಗೆ ಸಹ ಯಾವ ಮಂತ್ರಿಗಿಂತಲೂ ಕಡಿಮೆ ಇರಲಾರದಂತೆ ಪಗಾರ ಕೊಡುವಂತೆ ಮಾಡಬೇಕು. ಈಗ ಡೆಪ್ಯುಟಿ ಸ್ಪೀಕರ್ ಅವರಿಗೆ ಡೆಪ್ಯುಟಿ ಮಂತ್ರಿಗೆ ಹೊಂದಿಸುವ ಪ್ರಯತ್ನವನ್ನು ಮಾಡಿದ್ದಾರೆ. ಡೆಪ್ಯುಟಿ ಸ್ಪೀಕರಿಗೆ ಹೆಚ್ಚಿನ ದರ್ಜೆ ಮತ್ತು ಸ್ಥಾನವನ್ನು ಕೊಟ್ಟು ಅವರಿಗೂ ಹೆಚ್ಚು ಪಗಾರ ಮತ್ತು ಸ್ಥಾನ ಇರುವಂತೆ ಮಾಡಬೇಕು ಎಂದು ನಿವೇದನೆ ಮಾಡಿಕೊಳ್ಳುತ್ತೇನೆ.

ಸಂಪ್ಚ್ಯುಯರಿ ಅಲೋಯನ್ಸ್ ಜಾಸ್ತಿ ಮಾಡಲು ಕೇಳಿರುವುದು ನ್ಯಾಯವಾಗಿದೆ. ನಮ್ಮ ರಾಜ್ಯಕ್ಕೆ ಬೇರೆ ಬೇರೆ ರಾಜ್ಯಗಳ ಮತ್ತು ರಾಷ್ಟ್ರಗಳ ಪ್ರತಿನಿಧಿಗಳು ಬಂದಾಗ ಸ್ಪೀಕರ್ ಅಥವಾ ಚೇರ್‌ಮನ್ ಆದವರು ಅವರನ್ನು ಟ್ರೀಟ್ ಮಾಡಬೇಕು. ಸರ್ಕಾರದ ಗೌರವವನ್ನು ರಾಜ್ಯದ ಗೌರವವನ್ನು ಕಾಯ್ದುಕೊಳ್ಳಬೇಕು ಎನ್ನುವ ದೃಷ್ಟಿಯಿಂದ ಈ ಬಾಬ್ತಿಗೆ ಸ್ವಲ್ಪ ಹೆಚ್ಚಿನ ಹಣ ವಿನಿಯೋಗವಾಗುತ್ತದೆ ಎನ್ನುವ ಭಾವನೆಯಿದೆ. ಇದರಲ್ಲಿ ಕಂಜೂಸ್ ಆಗುವುದು ಬೇಡ ಎನ್ನುವ ದೃಷ್ಟಿಯಿಂದ ಇದನ್ನು ಸಹ ಪೂರ್ಣವಾಗಿ ಅನುಮೋದಿಸುತ್ತೇನೆ.

ಶಾಸನ ಸಭೆಯ ಸದಸ್ಯರಿಗೆ ಡೆಲ್ಲಿಯಲ್ಲಿರುವ ಮೈಸೂರು ಭವನದಲ್ಲಿ ಸರ್ಕಾರದವರು ಕಾಲಕಾಲಕ್ಕೆ ಹೊರಡಿಸುವ ನೋಟಿಫಿಕೇಷನ್‌ನಲ್ಲಿ ದೊರೆಯಬಹುದಾದ ರೇಟುಗಳು ಅನ್ವಯವಾಗುತ್ತದೆ ಎಂದು ಹೇಳಿದ್ದಾರೆ. ಇದು ಸಮಂಜಸವಾದುದಲ್ಲ. ಇಂಥ ಅಧಿಕಾರವನ್ನು ತನ್ನ ಕೈಯಲ್ಲಿಟ್ಟುಕೊಂಡು ಆಗಾಗ್ಗೆ ಹೆಚ್ಚು ಕಡಿಮೆ ಮಾಡುತ್ತದೆ ಎಂದು ಹೇಳುವುದು ಯಾವ ವಿವೇಕವಾದ ಸರ್ಕಾರಕ್ಕೂ ಭೂಷಣವಲ್ಲ. ಅಧಿಕಾರಿಗಳಿಗೆ ಯಾವ ರೀತಿ ಸೌಲಭ್ಯಗಳು ಸಿಕ್ಕುತ್ತವೆಯೋ ಅದೇ ಸೌಲಭ್ಯಗಳು ಎಲ್ಲ ಸದಸ್ಯರಿಗೂ ಸಿಕ್ಕಬೇಕು ಎನ್ನುವ ನಿರ್ದಿಷ್ಟವಾದ ಕಲಮನ್ನು ಕಾನೂನಿನಲ್ಲಿ ಹಾಕದೆ ಇದ್ದರೂ ಗವರ್ನಮೆಂಟ್ ಆರ್ಡರಿನಲ್ಲಿ ಅದನ್ನು ಸ್ಪಷ್ಟವಾಗಿ

ವಿಸನದಿ : 12-9-1968

ನಮೂದಿಸಬೇಕು ಎಂದು ಹೇಳುತ್ತೇನೆ. ಅನೇಕ ಪ್ರವಾಸಿ ಮಂದಿರಗಳಲ್ಲಿ ಸದಸ್ಯರಿಗೇ ಬೇರೆ, ಅಧಿಕಾರಿಗಳಿಗೇ ಬೇರೆ ದರಗಳನ್ನು ವಿಧಿಸುವ ದುರದೃಷ್ಟವಾದ ಪರಿಸ್ಥಿತಿ ಇದೆ. ಮೈಸೂರಿನಲ್ಲಿ ಐ.ಎ.ಎಸ್. ಅಧಿಕಾರಿಗಳು ಹೋದಾಗ ಅವರು ಬೇಕಾದಷ್ಟು ಭತ್ಯ ಪಡೆಯುತ್ತಿದ್ದರೂ ಊಟ ಮಾಡಲು ಒಂದೂವರೆ ರೂಪಾಯಿ ತೆಗೆದುಕೊಂಡು ಸದಸ್ಯರಾದವರಿಗೆ ಮೂರು ರೂಪಾಯಿ ತೆಗೆದುಕೊಳ್ಳುವ ವ್ಯವಸ್ಥೆ ಮಾಡಿದ್ದಾರೆ. ಏಕೆ ಈ ರೀತಿ ಮಾಡುತ್ತಾರೆನ್ನುವುದು ತಿಳಿದಿಲ್ಲ. ಇದನ್ನು ಬುದ್ಧಿಪೂರ್ವಕವಾಗಿ ಮಾಡುತ್ತಿದ್ದಾರೆಯೋ ಅಥವಾ ಅಧಿಕಾರಿಗಳು ಇಟ್ಟದ್ದಕ್ಕೆ ಕಣ್ಣು ಮುಚ್ಚಿ ಸಹಿ ಮಾಡುವ ಮಂತ್ರಿಮಂಡಲವಾಗಿದೆಯೋ ಎನ್ನುವುದು ತಿಳಿಯದಾಗಿದೆ. ಅದನ್ನು ತಿದ್ದಿಕೊಳ್ಳಬೇಕು.

ಕ್ಲಾಜ್ ಆರರ ಬಗ್ಗೆ ಈಗಾಗಲೇ ಕೆಲವು ಮಾನ್ಯ ಸದಸ್ಯರು ಹೇಳಿರುವುದನ್ನು ನಾನು ಸಂಪೂರ್ಣವಾಗಿ ಅನುಮೋದಿಸುತ್ತೇನೆ. ವಿರೋಧ ಪಕ್ಷದ ನಾಯಕರು, ಅವರ ಸ್ಥಾನಮಾನ ಅವರಿಗೆ ಕೊಡಬೇಕಾದ ಸೌಲಭ್ಯಗಳು ಈ ವಿಚಾರಗಳನ್ನೆಲ್ಲ ಪರಿಶೀಲನೆ ಮಾಡುವುದಕ್ಕೆ ನಿನ್ನೆಯ ದಿನ ಒಂದು ಸಮಿತಿಯನ್ನು ರಚನೆ ಮಾಡಿದ್ದಾರೆ. ಅದಕ್ಕಾಗಿ ಮಾನ್ಯ ಮಂತ್ರಿಗಳು ಆರನೇ ಕ್ಲಾಜ್ ಪರಿಶೀಲನೆಗೆ ತೆಗೆದುಕೊಳ್ಳುವ ವಿಚಾರ ಹೇಳಲಿಲ್ಲವೆಂದು ಭಾವಿಸುತ್ತೇನೆ. ಈಗ ವಿರೋಧ ಪಕ್ಷದ ನಾಯಕರಾಗಿರುವ ಮಾನ್ಯ ಶಿವಪ್ಪನವರು ನನಗೆ ಪಗಾರ ಬೇಕಾಗಿಲ್ಲ ಎಂದು ಬಹಳ ದಿವಸಗಳಿಂದ ಹೇಳುತ್ತಿದ್ದಾರೆ. ವಿರೋಧ ಪಕ್ಷದ ನಾಯಕರಾದವರಿಗೆ ಕೊಡಬೇಕಾದ ಸ್ಥಾನಮಾನಗಳನ್ನು ಪರಿಶೀಲಿಸುವಾಗ ಮುಖ್ಯಮಂತ್ರಿಗಳಾಗಿ ಯಾರೇ ಇರಲಿ ಅವರಿಗೆ ಇರತಕ್ಕ ಗೌರವಗಳಿಗೆ, ಅವರಿಗೆ ಇರತಕ್ಕ ಸೌಕರ್ಯಗಳಿಗೆ ಯಾವ ರೀತಿಯಿಂದಲೂ ವಿರೋಧಪಕ್ಷದ ನಾಯಕರಾದವರಿಗೆ ಕಡಿಮೆಯಾಗಬಾರದೆಂದು ನಾನು ಬಲವಾಗಿ ಪ್ರತಿಪಾದನೆ ಮಾಡುತ್ತೇನೆ. ಈಗ ಆ ವಿಷಯ ಬರುವುದಿಲ್ಲ. ವಿರೋಧಪಕ್ಷದ ನಾಯಕರು ಬೆಂಗಳೂರಿಗೆ ಮಾತ್ರ ಮೀಸಲಾಗಿಲ್ಲ. ಮುಖ್ಯಮಂತ್ರಿಗಳ ಹಾಗೆ ಇಡೀ ರಾಜ್ಯಕ್ಕೆ ಮೀಸಲಾಗಿರುತ್ತಾರೆ ಎನ್ನುವ ಮಾತನ್ನು ಆಲೋಚನೆ ಮಾಡಬೇಕು. ವಿರೋಧ ಪಕ್ಷದ ನಾಯಕರಿಗೆ ಸೌಕರ್ಯಗಳನ್ನು ಕೊಡುವಾಗ ಪ್ರತ್ಯೇಕವಾಗಿ ಅಪೋಜಿಷನ್ ಸೆಕ್ರೆಟೇರಿಯಟ್ ಎಂದು ಮಾಡಿ ಅಲ್ಲಿ ನಾಲ್ಕಾರು ಜನ ಕೆಲಸ ಮಾಡಲು ಅನುಕೂಲ ಮಾಡಿಕೊಟ್ಟರೆ ಒಳ್ಳೆಯದಾಗುತ್ತದೆ ಎಂದು ಸಲಹೆ ಮಾಡಿ ನನಗೆ ಇಷ್ಟು ಮಾತನಾಡಲು ಸಮಯ ಕೊಟ್ಟದ್ದಕ್ಕಾಗಿ ಅಧ್ಯಕ್ಷರಿಗೆ ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

# ಮೈಸೂರು ಮಂತ್ರಿಗಳ ಸಂಬಳ ಮತ್ತು ಭತ್ಯೆ (ತಿದ್ದುಪಡಿ) ಮಸೂದೆ 1968ರ ಮೇಲಿನ ಚರ್ಚೆ

ಮಾನ್ಯ ಅಧ್ಯಕ್ಷರೇ, ಈಗತಾನೇ ಮಾನ್ಯ ಸಚಿವರಾದ ಶ್ರೀ ಪುಟ್ಟಸ್ವಾಮಿಯವರು ಇಲ್ಲಿ ತಂದಂತಹ ಬಿಲ್ಲಿನ ಮೇಲೆ ಚರ್ಚೆ ಮಾಡುತ್ತಾ ನನ್ನ ಸ್ನೇಹಿತರಾದ ಶ್ರೀಮಾನ್ ನಾಗಪ್ಪನವರು ಒಂದು ತಿದ್ದುಪಡಿಯನ್ನೂ ತಂದು ಅದರ ವಿಷಯವಾಗಿಯೂ ಇಲ್ಲಿ ಹೇಳಿದ್ದಾರೆ. ಇಲ್ಲಿ ತಿದ್ದುಪಡಿ ತರುವುದಕ್ಕೆ ಕಾರಣಗಳಿವೆ ಎನ್ನುವುದನ್ನು ಈ ಸಭೆಗೆ ಮನವರಿಕೆ ಮಾಡಿಕೊಡಬೇಕೆಂದು ನಾನು ಭಾವನೆ ಮಾಡಿಕೊಂಡಿದ್ದೇನೆ.

ಸ್ವಾಮೀ, ನಮ್ಮ ಈ ಸಭೆಯ ನಡೆವಳಿಕೆ 73ರಲ್ಲಿ ಯಾವುದಾದರೂ ಒಂದು ಆರ್ಡಿನೆನ್ಸ್ ತರಬೇಕಾದರೆ ಅಂತಹ ಆರ್ಡಿನೆನ್ಸ್‌ಗಳಿಗೆ ಕಾರಣ ಏನು ಇರಬೇಕು ಎನ್ನುವುದಕ್ಕೆ ಸೆಕ್ಷನ್ 70 ಸಬ್ ಸೆಕ್ಷನ್ (1)ರಲ್ಲಿ ಹೇಳಲಾಗಿದೆ. ಸ್ಟೇಟ್‌ಮೆಂಟ್ ಆಫ್ ಅಬ್ಜೆಕ್ಟ್ ಮತ್ತು ರೀಸನ್ಸ್‌ನಲ್ಲಿ ಹೀಗೆ ಹೇಳಿದ್ದಾರೆ.

"ಶಾಸನ ಸಭೆಯ ಅಧಿವೇಶನ ನಡೆಯದೆ ಇದ್ದು ಈಗಲೇ ಮಂತ್ರಿಗಳ ಸಂಬಳ ಹಾಗೂ ಭತ್ಯೆ ಪಾವತಿ ವ್ಯವಸ್ಥೆ ಅಸಾಧ್ಯವಾಗಿರುವುದರಿಂದ ಅದರ ಶೀಘ್ರ ಅನುಶಾಸನದ ಪ್ರಸಾರಿಕೆಯ ತೀರಾ ಅಗತ್ಯತೆ ಇದೆ."

ಇದನ್ನು ವಿಚಾರ ಮಾಡೋಣ. ಹಿಂದೆ ಇದ್ದ ಆಕ್ಟಿನಲ್ಲಿ ಪಾರ್ಲಿಮೆಂಟರಿ ಸೆಕ್ರೆಟರಿಗಳು ಎಂದು ಇತ್ತು. ಅದನ್ನು ತೆಗೆದು ಬಿಟ್ಟು ಈಗ ಬದಲಾವಣೆ ಮಾಡಿ ತಂದಿರುವುದಕ್ಕೆ ಕಾರಣವೇನು. ಆಗ ಸೆಕ್ಷನ್ ಇತ್ತು ಆದ್ದರಿಂದ ಇದಕ್ಕಾಗಿ ಬೇರೆ ಒಂದು ಸೆಕ್ಷನ್ ಕೊಡಿಸಿ ಕಾಯಿದೆ ಮಾಡಬಹುದಿತ್ತು ಎಂದು ನನ್ನ ಮಿತ್ರರಾದ ಶ್ರೀ ನಾಗಪ್ಪನವರು ಹೇಳಿದುದಕ್ಕೆ ತಾವು ಇಲ್ಲಿ ಒಂದು ರೂಲಿಂಗು ಕೊಟ್ಟಿರಿ. ನಾನು ಅದರ ವಿಷಯವಾಗಿ ಯಾವುದೇ ವಿಧವಾದ ಟೀಕೆ ಮಾಡುವುದಕ್ಕೆ ಹೋಗುವುದಿಲ್ಲ. ಕಡೆಯದಾಗಿ ಈ ಸರಕಾರಕ್ಕೆ ಸಲಹೆ ಕೊಡುವುದು ಏನೆಂದರೆ ಮಾನವನು ತನ್ನ ದಾವೆಗೆ ತಾನೇ ನ್ಯಾಯಾಧೀಶನಾಗಲಾರ ಎಂದು ಹೇಳುವ ಹಾಗೆ ಸರಕಾರ ತನ್ನ ನಿಲುವಿನ ಬಗ್ಗೆ ತನ್ನ ಕಾಯಿದೆ ಮಾಡುವುದರಲ್ಲಿ ತಪ್ಪು ಹಾದಿ ಪಡೆದಿದೆ ಎನ್ನುವುದನ್ನು ಮಾತ್ರ ಇಲ್ಲಿ ತಮ್ಮ ಗಮನಕ್ಕೆ ತರುತ್ತಿದ್ದೇನೆ. ಇದರಲ್ಲಿ ಬೋನಾಫೈಡ್ಸ್‌ಗಳಿವೆ, ಮಾರಾಫೈಡ್ಸ್‌ಗಳಿವೆ ಎನ್ನುವುದನ್ನು ವಿಚಾರ ಮಾಡುವುದಕ್ಕೆ ಹೋಗುತ್ತಿಲ್ಲ. ಈ ಹೌಸಿನಲ್ಲಿರುವ ನ್ಯಾಯವಾದಿಗಳು ಹಾಗೂ ವಿಚಾರವಂತರು ಇದನ್ನು ವಿಚಾರ ಮಾಡಬೇಕು ಎಂದು ಹೇಳುತ್ತಿದ್ದೇನೆ. ಇದರ ಅಂಕೆ ಸಂಖ್ಯೆಯನ್ನು ಕೊಡಬೇಕಾದರೆ 29-5-68ನೇ ದಿನ ಈ ಹೌಸ್ ಸೆಷನ್‌ನಲ್ಲಿ ಇತ್ತು. ನಮ್ಮ ರೂಲ್ಸು ಪ್ರಕಾರ ಹಿಂದೆ ಕೌನ್ಸಿಲ್ ಆಫ್ ಮಿನಿಸ್ಟರುಗಳು, ಡೆಪ್ಯುಟಿ ಮಿನಿಸ್ಟರ್‌ಗಳು ಹಾಗೂ ಪಾರ್ಲಿಮೆಂಟರಿ ಸೆಕ್ರಟರಿಗಳು ಎಂದು ಇತ್ತೇ ವಿನಾ ಸ್ಟೇಟು ಮಿನಿಸ್ಟರುಗಳು ಎಂದು ಅಲ್ಲಿ ವ್ಯಾಖ್ಯಾನ ಇರಲಿಲ್ಲ. 29-5-68ನೇ ದಿನ ಐದು ಜನರನ್ನು ಸ್ಟೇಟು ಮಿನಿಸ್ಟರನ್ನು ನೇಮಿಸಿ ಇದರ ಜೊತೆಗೆ ಡೆಪ್ಯುಟಿ ಮಿನಿಸ್ಟರನ್ನೂ ನೇಮಕ ಮಾಡಿಕೊಂಡರು. ಇಂತಹ ಸ್ಥಿತಿಯೊಳಗೆ ಕಾನ್‌ಸ್ಟಿಟ್ಯೂಷನಲ್ ರೈಟ್ ಪ್ರಕಾರ ಓತ್ ಆಫ್ ಆಫೀಸನ್ನು ಎಂದರೆ

---

ವಿಸನದಿ : 13-9-1968

ಪ್ರಮಾಣ ವಚನವನ್ನು ಇವರು ತೆಗೆದುಕೊಂಡಿದ್ದಾರೆ. ಆದರೆ ಯಾವ ನಿಯಮದ ಪ್ರಕಾರ ತೆಗೆದುಕೊಂಡರು ಎಂದು ನಾವು ಕೇಳುತ್ತಿರುವುದು. ಇಲ್ಲಿರುವ ನಿಯಮದ ಪ್ರಕಾರ ಸ್ಟೇಟು ಮಿನಿಸ್ಟರುಗಳ ಹುದ್ದೆಗಳು ಇರಲಿಲ್ಲ. ಓತ್ ಆಫ್ ಆಫೀಸ್ ಎಂದು ಗವರ್ನರ ಮುಂದೆ ಪ್ರಮಾಣ ವಚನ ಸ್ವೀಕರಿಸಲು ಬರುವುದಿಲ್ಲ. ಯಾರೋ ಐದು ಜನ ಕಾಂಗ್ರೆಸ್ ಸದಸ್ಯರನ್ನು ಕರೆದುಕೊಂಡು ಹೋಗಿ ಅವರಿಂದ ಪ್ರಮಾಣ ವಚನ ತೆಗೆದುಕೊಂಡರು ಎಂದಾಗುತ್ತದೆ. ಇವೊತ್ತಿನ ದಿವಸ ನಮ್ಮ ಸ್ನೇಹಿತರು ಚುನಾವಣೆಯಲ್ಲಿ ವೋಟನ್ನು ಪಡೆಯಬೇಕೆನ್ನುವ ದೃಷ್ಟಿಯಿಂದ ವೆಯೊಲೇಷನ್ ಆಫ್ ರೂಲ್ಸ್ ಆಗಿದ್ದರೂ ಇವರನ್ನು ನೇಮಕ ಮಾಡಿದ್ದಾರೆ. ಇದಕ್ಕಾಗಿ ಒಂದು ತಿದ್ದುಪಡಿಯನ್ನು ನಾನು ಇಲ್ಲಿ ತಂದಿದ್ದೇನೆ. ಇದು ಯಾವ ಇತಿಹಾಸದಲ್ಲೂ ಇಲ್ಲ. ಇದಕ್ಕಾಗಿ ಕಾನೂನಿನ ವಿಚಾರದಲ್ಲಿ ಒಂದು ಎಚ್ಚರಿಕೆ ಕೊಡುವುದಕ್ಕಾಗಿ ಮಾನ್ಯ ಮಂತ್ರಿಗಳಾದ ಪುಟ್ಟಸ್ವಾಮಿಯವರಲ್ಲಿ ಇವನ್ನೆಲ್ಲಾ ಕೇಳಬಯಸುತ್ತೇನೆ. ಇದಾದ ನಂತರ ಅನೇಕ ದಿನಗಳವರೆಗೆ ಇವರಿಗೆ ಪಗಾರ ಕೊಡುವ ಸಲಹೆ ತಂದಿದೆ. ಇದು ಆರ್ಟಿಕಲ್ 214ರಲ್ಲಿ ಸ್ಪಷ್ಟವಾಗಿದೆ. ಅಲ್ಲಿ ಸರಕಾರ ಒಪ್ಪಿದರೆ ಎಂದಿದೆ. ಇವರು ಕೊಟ್ಟಿರುವ ಸ್ಟೇಟ್‌ಮೆಂಟ್ ಆಫ್ ಅಬ್ಜೆಕ್ಟ್ ಆಂಡ್ ರೀಸನ್ಸ್‌ನಲ್ಲಿ:

"ಶಾಸನ ಸಭೆಯ ಅಧಿವೇಶನ ನಡೆಯದೆ ಇದ್ದು ಈಗಲೇ ಮಂತ್ರಿಗಳ ಸಂಬಳ ಹಾಗೂ ಭತ್ಯೆ ಪಾವತಿ ವ್ಯವಸ್ಥೆ ಅಸಾಧ್ಯವಾಗಿರುವುದರಿಂದ ಅದರ ಶೀಘ್ರ ಅನುಶಾಸನದ ಪ್ರಸಾರಿಕೆಯ ತೀರಾ ಅಗತ್ಯತೆ ಇದೆ".

ಎಂದು ಹೇಳಿದ್ದಾರೆ. ಸ್ಪೆಸಿಫಿಕ್ ಆಗಿ ಸೆಕ್ಷನ್ ಇತ್ತು. ಪ್ರೊರೋಗು ಆಗಿರಲಿಲ್ಲ. ನಮ್ಮ ಮುಖ್ಯ ಮಂತ್ರಿಗಳು ಗೈರು ಕಾಯಿದೆ ಆಗಿದ್ದರೂ, ಇವರನ್ನು ದೊಡ್ಡದಾಗಿ ಸ್ಟೇಟು ಮಿನಿಸ್ಟರು ಎಂದು ಮಾಡಿದುದಕ್ಕೆ, ನಿಜವಾಗಿಯೂ ಈ ಮಂತ್ರಿ ಮಂಡಲದಲ್ಲಿರುವವರೆಲ್ಲರೂ ಹೊಣೆಗಾರರು ಎಂದು ಹೇಳಬಯಸುತ್ತೇನೆ. ಸ್ಟೇಟು ಮಿನಿಸ್ಟರು ಎಂದು ಮಾಡಬೇ ಡೆಪ್ಯೂಟಿ ಮಿನಿಸ್ಟರು ಎಂದು ಮಾಡಿದ್ದರೆ ನಾವು ಇಷ್ಟು ಹೇಳುತ್ತಿರಲಿಲ್ಲ. ಇಲ್ಲವೇ ಇವರನ್ನೆಲ್ಲಾ ಕ್ಯಾಬಿನೆಟ್ ಮಂತ್ರಿಗಳನ್ನಾಗಿ ಮಾಡಿದ್ದರೂ ನನಗೆ ಸಂತೋಷವಾಗುತ್ತಿತ್ತು. ಇದಕ್ಕೆ ಕಾಯದೆ ಇದೆ. ಇದನ್ನು ಒಪ್ಪಬಹುದಾಗಿತ್ತು. ಅದುದರಿಂದ ಇಂತಹ ಒಂದು ಕಾಯದೆಯನ್ನು ತಂದು ಇಲ್ಲಿ ಪಾಸು ಮಾಡಬೇಕು ಎಂದರೆ ಜನ ಏನಂದಾರು? ಇದಕ್ಕಾಗಿ ಶ್ರೀ ನಾಗಪ್ಪನವರು ಅಮೆಂಡ್‌ಮೆಂಟನ್ನು ಇಲ್ಲಿ ತಂದಿರುವುದು ನಮ್ಮ ಪ್ರತಿಭಟನೆಯನ್ನು ಇದಕ್ಕೆ ವ್ಯಕ್ತಮಾಡುವುದಕ್ಕಾಗಿ, ಇದರ ಹಿನ್ನೆಲೆ ಏನು ಎನ್ನುವುದನ್ನು ಕಾಯದೆಯಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ. ನಿಜವಾಗಿಯೂ ಬಹಳ ಮುತ್ಸದ್ದಿತನದಿಂದ ಕಾಯದೆಯ ವಿಚಾರವನ್ನು ಹೇಳಿದ್ದಾರೆ. ಇದನ್ನು ಒಪ್ಪುವುದಕ್ಕಾಗುವುದಿಲ್ಲ. ಇದು ಸರಕಾರದ ಜಾಣತನವನ್ನು ಪ್ರದರ್ಶಿಸುವ ಒಂದು ಅವಕಾಶವಾಗಿದೆ. ನಿಮ್ಮಲ್ಲಿ ನಿಯಮಗಳನ್ನು ಅರಿತಿರುವವರೂ ಇದ್ದಾರೆ ಮತ್ತು ಅವರಿಗೆ ಅವರ ಕರ್ತವ್ಯಗಳೇನು ಎನ್ನುವುದೂ ಗೊತ್ತಿದೆ. ಇದು ಸರಿಯಾದ ವಿಧೇಯಕವಲ್ಲ ಎನ್ನುವುದು ಗೊತ್ತಿದೆ. ಹೀಗೆ ಗೈರಾಗಿರುವ ಕಾಯದೆಯನ್ನು ಇಲ್ಲಿ ತಂದು ಪಾಸು ಮಾಡಬೇಕು ಎಂದು ಹೇಳುವ ಮಂತ್ರಿಗಳಿಗೆ ಏನು ತಾನೇ ಹೇಳಬೇಕು? ಇದನ್ನು ಸ್ಪಷ್ಟವಾಗಿ ತಿಳಿಸಬೇಕು. ಕಾಯದೆಗಳನ್ನು ಸರಿಯಾಗಿ ತಿದ್ದುಪಡಿ ಮಾಡದೆ ಇಂದು ಐದು ಜನರನ್ನು ಸ್ಟೇಟು ಮಿನಿಸ್ಟರನ್ನಾಗಿ ಮಾಡುವುದು ಸರಿಯಲ್ಲ ಎಂದು ನಾವು ಹೇಳುತ್ತಿರುವುದು. ಇದಕ್ಕೆ ಬದಲಾಗಿ ಈ ಐದು ಜನರನ್ನೂ ಕ್ಯಾಬಿನೆಟ್

ಮಂತ್ರಿಗಳಾಗಿ ಮಾಡಬಹುದಾಗಿತ್ತು. ಮತ್ತು ಇವರಿಗೆ ಪಗಾರ ಹೆಚ್ಚು ಬೇಕಾದರೂ ಕೊಡಬಹುದಾಗಿತ್ತು. ಆದರೆ ನಮ್ಮ ಮುಖ್ಯಮಂತ್ರಿಗಳು ತರುಣರು ಮತ್ತು ದೊಡ್ಡ ಮನುಷ್ಯರು, ಹಾಗೂ ಮೇಧಾವಿಗಳು ಮತ್ತು ಜಾಣ್ಮೆಯುಳ್ಳವರು. ಇಂತಹವರು ಏಕೆ ಹೀಗೆ ಮಾಡಿದರು? ತಮ್ಮ ಒಂದು ಪ್ರತಿಷ್ಠೆಯನ್ನುಳಿಸಿಕೊಳ್ಳುವುದಕ್ಕಾಗಿ ಮಾಡದೆ ದೇಶದಲ್ಲಿ ಒಂದು ಸತ್ಸಂಪ್ರದಾಯವನ್ನು ಹಾಕಿ ಎಲ್ಲರಿಗೂ ಒಂದು ಮೇಲ್ಪಂಕ್ತಿಯಾಗಿರಬೇಕೆಂದು ಹೇಳುತ್ತೇನೆ. ಇವೊತ್ತಿನ ದಿನ ನಾನು ಕಳಕಳಿಯಿಂದ ಹೇಳುತ್ತಿದ್ದೇನೆ ಇದು ಸರಿಯಲ್ಲ ಎಂದು. ಇದರ ಜೊತೆಗೆ ಇನ್ನೂ ಮೂರು ನಾಲ್ಕು ಮಂದಿಗಳನ್ನು ಮಂತ್ರಿಗಳಾಗಿ ಮಾಡುತ್ತೇವೆಂದು ಹೇಳಿದ್ದರು. ಎಂದರೆ ಸುಮಾರು 30-45 ಜನರಿಂದ ಕೂಡಿದ ಒಂದು ದೊಡ್ಡ ಮಂತ್ರಿಮಂಡಲ ಮಾಡುವುದು ಸೂಕ್ತವಲ್ಲ. ಕಾಯದೆಗೆ ವಿರೋಧವಾಗಿ ಇವರನ್ನು ಮುಂದುವರಿಸುತ್ತಿರುವುದರಿಂದ ಇದು ಭ್ರಷ್ಟಾಚಾರವಾಗುವುದಿಲ್ಲವೇ? ಒಬ್ಬ ಆಫೀಸರು ಲಂಚ ತಿಂದರೆ ಅವನನ್ನು ಬಹು ದೊಡ್ಡದಾಗಿ ನಿಂದನೆ ಮಾಡುತ್ತೀರಿ? ಆದರೆ ಇದಕ್ಕಿಂತ ಬೇರೆ ಭ್ರಷ್ಟಾಚಾರ ಇನ್ನೊಂದು ಬೇಕೇ ಎಂದು ಕೇಳಬೇಕಾಗಿದೆ. ಇದರಿಂದ ನೀವು ನಿಮ್ಮ ಹೃದಯದೊಳಗೇನೇ ವಿಚಾರಮಾಡಿ ನೋಡಿ. ನಿಮ್ಮ ಆತ್ಮಕ್ಕೆ ವಂಚನೆ ಮಾಡಿದಂತೆ ಆಗುತ್ತದೆ. ಬೇರೆ ಯಾವುದಕ್ಕಿಂತಲೂ ಹೆಚ್ಚಿನ ಭ್ರಷ್ಟಾಚಾರ ಇದರಲ್ಲಿದೆ ಎನ್ನುವುದು ಸ್ಪಷ್ಟವಾಗಿ ಗೊತ್ತಾಗುತ್ತದೆ. ಯಾರ ಬಗ್ಗೆಯೂ ವೈಯಕ್ತಿಕವಾಗಿ ಟೀಕೆ ಮಾಡಬೇಕೆಂದು ಇಚ್ಛೆ ನನಗಿಲ್ಲ. ಇಲ್ಲಿ ನಾವು ನಮ್ಮ ನಮ್ಮ ಮನಸ್ಸಿಗೆ ಬಂದ ಹಾಗೆ ಕೆಲಸ ಮಾಡುವುದಕ್ಕಾಗುವುದಿಲ್ಲ. ಸರ್ಕಾರದವರಿಗೆ ಇಂಥಾ ಕೆಲಸಗಳನ್ನು ಮಾಡುವುದಕ್ಕೆ ಯಾವ ಕಾರ್ಯದರ್ಶಿಗಳು ಅಥವಾ ಯಾವ ಅಡ್ವೈಜರುಗಳು ಹೀಗೆಲ್ಲಾ ಉಪದೇಶ ಮಾಡುತ್ತಿದ್ದಾರೋ ನನಗದು ತಿಳಿಯುತ್ತಿಲ್ಲ. ಅಥವಾ ಇದನ್ನೆಲ್ಲಾ ಈ ಮಂತ್ರಿಗಳಾಗಿರತಕ್ಕವರೇ ತಮ್ಮ ಮಹೋನ್ನತ್ತತೆಯಿಂದ ಇಲ್ಲವೇ ತಮ್ಮ ಬುದ್ಧಿ ಭ್ರಮಣೆಯಿಂದೇನಾದರೂ ಹೀಗೆ ಆಗುತ್ತಿದೆಯೇ ಎಂಬುದನ್ನು ಅವರು ಇನ್ನೊಮ್ಮೆ ಆಲೋಚನೆ ಮಾಡಿ ತಿಳಿದುಕೊಳ್ಳಬೇಕೆಂದು ಹೇಳುತ್ತೇನೆ. ಆಳತಕ್ಕ ಪಕ್ಷದವರು ಮತ್ತು ನಾವೂ ಇಬ್ಬರೂ ಪ್ರಜೆಗಳಿಂದಲೇ ಆರಿಸಿ ಬಂದಿರತಕ್ಕವರಾಗಿದ್ದೇವೆ. ನಾವು ಈ ದಿವಸ ಬೊಕ್ಕಸದಲ್ಲಿರತಕ್ಕ ಹಣವನ್ನೇನು ಖರ್ಚು ಮಾಡುತ್ತಿದ್ದೇವೆ ಅದು ಸಾರ್ವಜನಿಕರ ದುಡ್ಡು. ಆ ಹಣವು ಪ್ರಜೆಗಳಿಗೆ ಸೇರಿದ್ದು. ಆ ಹಣವನ್ನು ಈ ದಿವಸ ಪ್ರಜೆಗಳಿಂದ ಆರಿಸಿಬಂದಂಥ ಸದಸ್ಯರೂ ಮತ್ತು ಮಂತ್ರಿಗಳೂ ಒಟ್ಟಾಗಿ ಸೇರಿ ರಾಜ್ಯದ ಆಗುಹೋಗುಗಳನ್ನು ಚರ್ಚೆ ಮಾಡಲು ಸೇರತಕ್ಕ ಈ ಶಾಸನ ಸಭೆಯನ್ನು ಒಂದು ಮ್ಯುಚ್ಯುಯಲ್ ಬೆನಿಫಿಟ್ ಕಂಪೆನಿಯನ್ನಾಗಿ ಮಾಡಿಕೊಂಡು ಇವರು ತಮ್ಮ ವಿಲಾಸಗಳಿಗೆ ಮನಸ್ಸು ಬಂದಂತೆ ಖರ್ಚು ಮಾಡುತ್ತಿದ್ದಾರೆ ಅನ್ನುವಂಥ ಹೆಸರು ಬರಬಾರದು. ಇದನ್ನು ಮೊದಲು ಜನರು ಒಪ್ಪಲಿ. ಅನಂತರ ಬೇಕಾದರೆ ಇದನ್ನು ಮಾಡೋಣ. ಅಲ್ಲಿಯತನಕ ತಡೆದರೆ ಆಕಾಶವೇನೂ ಕಳಚಿಬೀಳುವುದಿಲ್ಲ. ಆದ್ದರಿಂದ ಶ್ರೀಮಾನ್ ಕೆ. ಪುಟ್ಟಸ್ವಾಮಿಯವರು ನನ್ನ ಸೂಚನೆಯನ್ನು ವಿರೋಧ ಮಾಡದೆ ಇದನ್ನು ಸಾರ್ವಜನಿಕಾಭಿಪ್ರಾಯಕ್ಕೆ ಕಳುಹಿಸಬೇಕೆಂದೂ ದುಡುಕುವುದರಲ್ಲಿ ಅರ್ಥವಿಲ್ಲ ಎಂದೂ ಹೇಳಿ ನನಗೆ ಅಧ್ಯಕ್ಷರು ಕೊಟ್ಟಿದ್ದ 15 ನಿಮಿಷಕ್ಕೆ ಸರಿಯಾಗಿ ನನ್ನ ಮಾತನ್ನು ಮುಗಿಸಿದ್ದೇನೆ. ಒಂದೆರಡು ನಿಮಿಷಕ್ಕೆ ಸರಿಯಾಗಿ ನನ್ನ ಮಾತನ್ನು ಮುಗಿಸಿದ್ದೇನೆ. ಒಂದು ವೇಳೆ ನಾವೇನಾದರೂ ಒಂದೆರಡು ನಿಮಿಷ ಹೆಚ್ಚಿಗೆ ಬಳಸಿದ್ದರೆ ಕ್ಷಮಿಸಬೇಕೆಂದು ಕೇಳಿಕೊಂಡು ನನ್ನ ಮಾತುಗಳನ್ನು ಮುಗಿಸುತ್ತೇನೆ.

# ಬೆಟರ್‌ಮೆಂಟ್ ಲೆವಿ ವಿಧೇಯಕ, 1968ರ ಮೇಲಿನ ಚರ್ಚೆ

ಸ್ವಾಮಿ, ನಾನು ಈ ಬೆಟರ್‌ಮೆಂಟ್ ಲೆವಿ ಬಿಲ್ಲನ್ನು ಬಹಳವಾಗಿ ವಿರೋಧಿಸುತ್ತೇನೆ. ಸರ್ಕಾರದವರು ಈ ತಿದ್ದುಪಡಿಯನ್ನು ತಂದಿದ್ದಾರೆ ಎಂಬ ಬಗ್ಗೆ ಈಗಾಗಲೇ ನನ್ನ ಅನೇಕ ಮಾನ್ಯ ಮಿತ್ರರು ಅನೇಕ ವಿಷಯಗಳನ್ನು ತಿಳಿಸಿದ್ದಾರೆ. ಆದರೆ ಈ ದಿವಸ ನಾವು ಇಲ್ಲಿ ಪರಿಶೀಲನೆ ಮಾಡಬೇಕಾದುದ್ದು 500 ರೂಪಾಯಿ ತೆರಿಗೆಯನ್ನು ಕೊಡಬೇಕೇ ಅಥವಾ 300 ರೂಪಾಯಿಗಳ ತೆರಿಗೆಯನ್ನು ಕೊಡಬೇಕೇ ಎಂಬುದು ಅಷ್ಟು ಮುಖ್ಯದ ಪ್ರಶ್ನೆಯಲ್ಲ. ಇಲ್ಲಿ ಒಂದು ತತ್ವದ ಪ್ರಶ್ನೆಯನ್ನು ನಾವು ಎತ್ತಿಹಿಡಿಯಬೇಕಾಗಿದೆ. ಸರ್ಕಾರದವರು ಹೀಗೆ ಪ್ರತಿಯೊಂದಕ್ಕೂ ರೈತರಿಂದ ದುಡ್ಡನ್ನು ಸೆಳೆಯತಕ್ಕದ್ದು ಸರ್ವಥಾ ಸರಿಯಾದ್ದಲ್ಲ - ನ್ಯಾಯವೂ ಅದಲ್ಲ. ರೈತನ ಮೈಮೇಲಿರತಕ್ಕ ಒಂದೊಂದು ರೋಮಕ್ಕೂ ಸರ್ಕಾರದವರು ಟ್ಯಾಕ್ಸ್‌ನ್ನು ವಸೂಲ್ಮಾಡುತ್ತಿದ್ದಾರೆ. ಇನ್ನು ಸರ್ಕಾರದವರು ಈ ಟ್ಯಾಕ್ಸ್‌ನ್ನು ಹಾಕದೆ ಇರತಕ್ಕ ಯಾವ ಜನರ ಸಲುವಾಗಿ ಈ ಹಣವನ್ನು ಖರ್ಚು ಮಾಡುತ್ತಾರೆ ಎಂದು ನಾನು ಅವರನ್ನು ಕೇಳಬೇಕಾಗಿದೆ? ಆ ಬ್ರಿಟಿಷರಿದ್ದ ಕಾಲದಲ್ಲಿ ಸಹಿತ ಅವರು ಟ್ಯಾಕ್ಸ್‌ನ್ನು ಹಾಕದಂತೆ ಎಷ್ಟು ಕೆಲಸಗಳನ್ನು ಮಾಡಿಸಿದರು. ಹಿಂದಿನ ರಾಜಮಹಾರಾಜರುಗಳು ಜನರಿಂದ ಟ್ಯಾಕ್ಸ್‌ನ್ನು ವಸೂಲ್ಮಾಡದೆ ಅನೇಕ ಕೆರೆ ಕಟ್ಟೆಗಳನ್ನು ಕಟ್ಟಿದ್ದಾರೆ. ಅದನ್ನು ಈ ದಿವಸ ಆಡಳಿತ ನಡೆಸತಕ್ಕ ಜನರು ತಮ್ಮ ಲಕ್ಷ್ಯದಲ್ಲಿ ಇಟ್ಟುಕೊಳ್ಳಬೇಕು. ಒಂದಾವರ್ತಿ ಒಬ್ಬ ಹುಡುಗ ತನ್ನ ತಂದೆಯ ಹತ್ತಿರ ಹೋಗಿ-ಅಪ್ಪಾ, ನಾನು ಜಾತ್ರೆಗೆ ಹೋಗಬೇಕು ಅಂತ ಆಸೆಯಾಗಿದೆ ನೀ ಹೋಗೂ ಅಂದರೂ ನಾ ಹೋಗ್ತೇನೆ, ನೀ ಬ್ಯಾಡಾ ಅಂದ್ರೂನಾ ಹೋಗ್ತೇನೆ. ಇದಕ್ಕೆ ನೀ ಏನಂತಿ ಎಂದು ಕೇಳಿದನಂತೆ. ಈ ಒಂದು ಸಂದರ್ಭ ಕೂಡ ಹಾಗೇ ಇದೆ. ಸರ್ಕಾರದವರು ತಮ್ಮ ವಿವೇಕವನ್ನೇ ಕೈಬಿಟ್ಟು ನಮಗೆ ಪಾರ್ಟಿಯ ಬಲವಿದೆ ಎಂದೂ, ವಿರೋಧಪಕ್ಷದವರನ್ನು ನಾವು ಕೇಳುವಂತೆ ಕೇಳೋಣ - ಆದರೂ ಅವರು ಹೇಗೂ ಒಪ್ಪುವುದಿಲ್ಲ. ಆಗ ನಾವೂ ಹೇಗೂ ಇದನ್ನು ಪಾಸು ಮಾಡಿಸಿಕೊಳ್ಳಲು ಅವಕಾಶವಿದೆ ಎಂದು ಮಾಡುತ್ತಿರುವುದು ಸರ್ವಥಾ ಸರಿಯಾದ್ದಲ್ಲ. ಈ ಬಿಲ್ಲನ್ನು ಸರ್ಕಾರದವರು ದಯವಿಟ್ಟು ವಾಪಸ್ ತೆಗೆದುಕೊಳ್ಳಬೇಕೆಂದು ಹೇಳುತ್ತೇನೆ. ಸರ್ಕಾರದವರೇ ಒಪ್ಪಿರುವ ಪ್ರಕಾರ ನಮ್ಮ ರಾಜ್ಯದ ಅನೇಕ ಭಾಗದಲ್ಲಿ ಬಹು ಭಾಗದಲ್ಲಿ ಎಕರೆ ಒಂದಕ್ಕೆ ಎರಡು-ಮೂರು ರೂಪಾಯಿ ಕಂದಾಯವಿದೆ. ಅಂಥ ಭೂಮಿಯ ಕಿಮ್ಮತ್ತನ್ನು ನಿರ್ಧಾರ ಮಾಡುವಾಗ ಆ ಭೂಮಿಯ ಕಂದಾಯ 200 ಪಟ್ಟು ಹಾಕಿದರೆ ಅದಕ್ಕೆ ಬೆಲೆಯಾಗುತ್ತೆಂದು ತೀರ್ಮಾನ ಮಾಡಿದ್ದಾರೆ. ಅಂದಾಗ ಆ 200 ಅಥವಾ 400 ರೂಪಾಯಿಗಳ ಕಿಮ್ಮತ್ತಿನ ಭೂಮಿಗಳಿಗೆ ಸರ್ಕಾರದವರು 500 ರೂಪಾಯಿಗಳನ್ನು ಟ್ಯಾಕ್ಸ್ ಹಾಕಿದರೆ ಅವರೆಲ್ಲಿಂದ ತಂದು ಕೊಡಬೇಕು? ಸಾಲಮಾಡಿ ಕೊಡಲಿ ಅಂದರೆ ಅದಕ್ಕೂ ಸಹಿತ ಸರ್ಕಾರದವರು ಬ್ಯಾಂಕುಗಳಿಗೂ ಮತ್ತು ಸೊಸೈಟಿಗಳಿಗೂ ಜಮೀನಿನ ಬೆಲೆಯ ಶೇ 25, 30 ಅಥವಾ 40 ಜಾಸ್ತಿಯಾಗಿ ಯಾರಿಗೂ ಸಾಲ ಕೊಡಬಾರದು ಎಂದು ನಿರ್ಬಂಧ ಬೇರೆ ವಿಧಿಸಿದ್ದಾರೆ. ಆದ್ದರಿಂದ ಸಾಲ ಮಾಡಿ ಕೊಡುವುದಕ್ಕೂ ಸಾಧ್ಯವಿಲ್ಲ. ಇನ್ನು ಆ ಜಮೀನನ್ನು ಆ ರೈತ ಹರಾಜ್ ಹಾಕಿ ಸರ್ಕಾರಕ್ಕೆ ಟ್ಯಾಕ್ಸ್‌ನ್ನು ಕೊಡಬೇಕು. ಇಲ್ಲವೇ ಆತನು ತನ್ನ ಮನೇಲಿ ಏನಾದರೂ ಹಣವನ್ನು ಹೂತಿಟ್ಟಿದ್ದಾನೆಯೇ? ಅಂದರೆ ಅದೂ ಸಹಿತಾ ಇಲ್ಲ. ಹಾಗೆ ಅವನಲ್ಲಿ ರೊಕ್ಕ ಇದ್ದಿದ್ದರೆ ಸರ್ಕಾರಕ್ಕೆ ಪ್ರತಿಯೊಂದು ಬಾಬಿಗೂ ಒಂದು

ವಿಸನದಿ : 16-9-1968

ಟ್ರಾಕ್ಟರಿಗಾಗಲಿ, ಒಂದು ಪಂಪ್‌ಸೆಟ್‌ಗಾಗಲಿ ಏಕೆ ಕೈಚಾಚಬೇಕಾಗಿತ್ತು? ಅಷ್ಟೇ ಅಲ್ಲ ಸರ್ಕಾದವರು ಶೇ 25 ರಷ್ಟು ಹಣವನ್ನಾದರೂ ಮುಂಗಡವಾಗಿ ಕೊಡಬೇಕೆಂದಾಗ ಅದನ್ನೂ ಕೊಡಲಾರದೆ ಆ ಸಂದರ್ಭಗಳನ್ನು ಹಣವಂತರ ಪಾಲು ಮಾಡಿದ್ದಾರೆ. ಸರ್ಕಾರದವರು ಈ ದಿವಸ ಒಂದು ಹೊಸ ಕೆರೆಯನ್ನು ಕಟ್ಟಿದ್ದರೆ ಅದರ ಅಚ್ಚುಕಟ್ಟಿನಲ್ಲಿರತಕ್ಕ ಜಮೀನುಗಳ ಬೆಲೆ ಜಾಸ್ತಿ ಆಗಬಹುದು. ಆದರೆ ಅದರಿಂದ ದೇಶಾದ್ಯಂತವೂ ಭೂಮಿ ಬೆಲೆ ಏರುತ್ತದೆಂಬ ವಾದ ಸರಿಯಾದ್ದಲ್ಲ. ಈ ದಿವಸ ಬೆಂಗಳೂರು ನಗರಕ್ಕೆ ಬಹಳ ಹಣವನ್ನು ಖರ್ಚು ಮಾಡಿದ್ದೇವೆ, ಆದ್ದರಿಂದ ಬೆಂಗಳೂರಿನಲ್ಲಿ ಇರತಕ್ಕ ಆಸ್ತಿಗಳ ಬೆಲೆ ಜಾಸ್ತಿ ಆಯಿತು. ಅದರಲ್ಲಿ ಒಂದು ಹಿಸ್ಸೆಯನ್ನು ಸರ್ಕಾರಕ್ಕೆ ಕೊಡಿ ಎಂದರೆ ಅವರು ಕೊಡುತ್ತಾರೆಯೇ? ಅಥವಾ ಸರ್ಕಾರದವರು ಫ್ಯಾಮಿಲಿ ಪ್ಲಾನಿಂಗನ್ನು ತಂದ ದೆಶೆಯಿಂದ 4 ಮಕ್ಕಳಾಗತಕ್ಕ ಮನೆಯಲ್ಲಿ ಇಬ್ಬರೇ ಮಕ್ಕಳಾದರೂ. ಅದರಿಂದ ಆ ಮನೇಲಿ ಆಸ್ತಿಯನ್ನು 4 ವಿಭಾಗ ಮಾಡುವುದು ತಪ್ಪಿ ಎರಡು ಭಾಗ ಆಗುವುದರಿಂದ ಎರಡು ಭಾಗದ ಸ್ವತ್ತು ಉಳಿಯಿತು. ಆದ್ದರಿಂದ ಸರ್ಕಾರಕ್ಕೆ ಒಂದು ಹಿಸ್ಸೆಯನ್ನು ಕೊಡಬೇಕು ಎಂದರೆ ಸಾಧ್ಯವೇ? ಅಥವಾ ಹಾಗೆ ಕೇಳತಕ್ಕದ್ದು ನ್ಯಾಯವೇ? ಯಾವತ್ತು ಈ ಟ್ಯಾಕ್ಸನ್ನು 500 ರಿಂದ 300ಕ್ಕೆ ಇಳಿಸಲಾಯಿತೋ ಅದೇ ದಿವಸದಿಂದ 500 ರೂಪಾಯಿಗೆ ಏರಿಸಲಾಯಿತು ಎಂದು ತಿದ್ದುಪಡಿ ಮಾಡುವುದು ಶುದ್ಧ ಅನ್ಯಾಯ. ಒಂದು ವೇಳೆ ಸರ್ಕಾರದವರು 300 ರೂಪಾಯಿಗಳ ಪ್ರಕಾರ ಟ್ಯಾಕ್ಸ್ ವಸೂಲ್ಮಾಡಿದೆವು ಅದು ಸಾಲದೆ ಬಂದುದರಿಂದ ಈಗ ಇದನ್ನು 500ಕ್ಕೆ ಹೆಚ್ಚಿಸಿದ್ದೇವೆ ಎಂಬ ಭಾವವನ್ನೇನಾದರೂ ಅವರು ಸಭೆಯ ಮುಂದೆ ಇಟ್ಟಿದ್ದಾರೆಯೇ ಅಂದರೆ ಅದಿಲ್ಲ. 300 ರೂಪಾಯಿ ಏಕೆ ಮಾಡಿದಿರಿ? ಅದು ಗೊತ್ತಿಲ್ಲ. ನಮ್ಮ ಸ್ನೇಹಿತರಾದ ಕೃಷ್ಣನ್‌ರವರು ಬಹಳ ಚೆನ್ನಾಗಿ ಹೇಳಿದ್ದಾರೆ. ಚುನಾವಣೆ ಹತ್ತಿರ ಹತ್ತಿರ ಬಂದಾಗ, ಜನರ ಹತ್ತಿರ ಹೋಗುವಾಗ 500 ರೂಪಾಯಿ ಇದ್ದುದನ್ನು 300 ರೂಪಾಯಿ ಮಾಡಿದ್ದೇವೆ ಎಂದು ಹೇಳಿ ಅವರಲ್ಲಿ ವಿಶ್ವಾಸ ಹುಟ್ಟಿಸಿ ಚುನಾಯಿತರಾಗಿ ಬಂದು, ಅಧಿಕಾರಕ್ಕೆ ಬಂದ ಮೇಲೆ ಮೋಸಗಾರರಂತೆ ವರ್ತಿಸಿ ಇವತ್ತಿನ ದಿವಸ 500 ರೂಪಾಯಿ ಮಾಡುವುದಕ್ಕೆ ಹೊರಟಿರುವುದು ಸರ್ವಥಾ ಸರಿಯಾದ ಮಾರ್ಗವಲ್ಲ. ಈ ಸರ್ಕಾರಕ್ಕೆ ಎಷ್ಟು ಹಣ ಕೊಟ್ಟರೂ ಸಾಲದು, ನಿಮ್ಮ ಹಡಗಿನಲ್ಲಿ ತೂತು ಬಿದ್ದು ಹೋಗಿದೆ. ಅದನ್ನು ಯಾವುದರಿಂದಲೂ ಕೂಡ ಮುಚ್ಚಲಿಕ್ಕೆ ನಿಮ್ಮಿಂದ ಸಾಧ್ಯವಿಲ್ಲ. ಅಂತಹ ಪರಿಸ್ಥಿತಿಯಲ್ಲಿ ನೀವು ಇದ್ದೀರಿ. ಇದನ್ನೆಲ್ಲಾ ಯೋಚನೆ ಮಾಡಿ ಮುಳುಗುತ್ತಿರುವಂತಹ ನಿಮ್ಮ ಹಡಗನ್ನು ರಕ್ಷಣೆಮಾಡಿಕೊಳ್ಳಿ. ರೈತರನ್ನು ವಂಚಿತರನ್ನಾಗಿ ಮಾಡಬೇಡಿ, ಅವರನ್ನು ಈ ತೆರಿಗೆಯಿಂದ ಮುಕ್ತರನ್ನಾಗಿ ಮಾಡಿ ಎಂದು ಹೇಳಿ ಈ ಮಸೂದೆಯನ್ನು ಬಲವಾಗಿ ವಿರೋಧಿಸುತ್ತೇನೆ.

# ಸಹಕಾರಿ ಸಂಘಗಳ ಬಗ್ಗೆ ಚರ್ಚೆ

ನಮ್ಮ ನಮ್ಮ ಕ್ಷೇತ್ರಕ್ಕೆ ತೆರಳಿ ನಮ್ಮ ಕೆಲಸ ಕಾರ್ಯಗಳನ್ನು ಸುಸೂತ್ರವಾಗಿ ಕೈಗೊಳ್ಳುವಂತೆ ಅನುವು ಮಾಡಿಕೊಡಲು ನಾವು ಒಂದು ಘಟ್ಟಕ್ಕೆ ತಲುಪಿದ್ದೇವೆ. ಮುಂದಿನ ವ್ಯವಹಾರ ಮುಂದುವರಿಸದೆ ಈ ದಿನದ ವ್ಯವಹಾರವನ್ನು ಇಲ್ಲಿಗೆ ನಿಲ್ಲಿಸಲು ಈ ಕಲಾಪದ ಅಂತ್ಯಕ್ಕೆ ನಾವೀಗ ತಲುಪಿದ್ದೇವೆ. ಈ ಬಿಲ್ಲನ್ನು ಮುಂದಿನ ಅಧಿವೇಶನದ ವಿವೇಚನೆಗೆ ಬಿಡಲು ಯಾವುದೇ ತೊಂದರೆ ಇರಲಾರದು. ಕಾನೂನು ಕಟ್ಟಳೆ ಹೊರತು ಪಡಿಸಿದಂತೆ ಮಾನ್ಯ ಮಂತ್ರಿಗಳಾದ ಶ್ರೀ ಪುಟ್ಟಸ್ವಾಮಿಯವರು ಸಾರ್ವಜನಿಕರ ಹಿತಾಸಕ್ತಿಗೆ ಹಾಗೂ ಅವರ ಅನುಕೂಲಕ್ಕಾಗಿ ತಂದ ಈ ಶಾಸನದ ಬಗ್ಗೆ ತಮ್ಮ ಅಭಿಪ್ರಾಯ ನೀಡಲು ಹಾಗೂ ಅದನ್ನು ಜಾಯಿಂಟ್ ಸೆಲೆಕ್ಟ ಕಮಿಟಿಗೆ ಸೂಚಿಸಲು ಅನುವು ಮಾಡಿಕೊಡುವುದು ಒಳ್ಳೆಯದು. ಜಾಯಿಂಟ್ ಸೆಲೆಕ್ಟ ಕಮಿಟಿಯು ಇಲ್ಲಿ ಸೂಚಿಸಿದ ಸೂಚನೆಗಳು ಹಾಗೂ ಅಭಿಪ್ರಾಯಗಳ ಚರ್ಚೆಗಾಗಿ ಕೆಲಸ ಮಾಡುವ ಒಂದು ಮಧ್ಯವರ್ತಿಯಾಗಿದೆ. ಆದ್ದರಿಂದ ಮುಂದಿನ ಅಧಿವೇಶನದಲ್ಲಿ ಮಂಡಿಸಲು ಅನುಕೂಲವಾಗುವಂತೆ ಮುಂದಕ್ಕೆ ಹಾಕುವುದು ಒಳ್ಳೆಯದು.

ಸ್ವಾಮಿ, ಮಾನ್ಯ ಸಚಿವರಿಗೆ ಹೇಳುತ್ತೇನೆ. ಈಗ ನಾವು ಸಹಕಾರದ ವಿಷಯ ಹೆಚ್ಚಿಗೆ ಮಾತನಾಡದೆ ಇರುವುದರಿಂದ ಅದಕ್ಕೆ ನಾವು ಬೆಂಬಲ ಕೊಟ್ಟೆವು ಎಂತ ತಿಳಿದುಕೊಳ್ಳಬಾರದು. ಅದಕ್ಕೆ ನಮ್ಮ ಪೂರ್ತಿ ಬಲವಾದ ವಿರೋಧ ಇದೆ. ಆ ಇಲಾಖೆಯಿಂದ ಸಾಕಷ್ಟು ಸಹಾಯ ದೊರೆಯದೇ ಅಲ್ಲಿ ಭ್ರಷ್ಟಾಚಾರ ಇದೆ. ನಮಗೆ ಕಾಲಾವಕಾಶ ಇಲ್ಲದ್ದುದರಿಂದ ಅದರ ವಿಷಯ ಮಾತನಾಡದೆ ಹಾಗೆಯೇ ಬಿಟ್ಟಿದ್ದೇನೆ. ಈ ವಿಚಾರವಾಗಿ ಮಾನ್ಯ ಸಚಿವರು ಉತ್ತರ ಕೊಡಲಿ.

---

ವಿಸನದಿ : 1?-9-1968

# ಬೆಂಗಳೂರಿನಲ್ಲಿ ಕಾಂಗ್ರೆಸ್ ವಸ್ತು ಪ್ರದರ್ಶನಕ್ಕೆ ಜಮೀನು ನೀಡಿದ ಬಗ್ಗೆ ಚರ್ಚೆ

ಅಧಿಕಾರದಲ್ಲಿರುವ ಪಕ್ಷವು ಆ ಆಸ್ತಿಯ ಲಾಭವನ್ನು ಬಳಸಿದೆ ಮತ್ತು ಈ ಸಭೆಯು ಸರಕಾರದ ನಿಖರ ಅಭಿಪ್ರಾಯವನ್ನು ಕಾತುರತೆಯಿಂದ ವೀಕ್ಷಿಸುತ್ತದೆ. ಅದೇ ಸರಕಾರ ಹೆಚ್ಚಿನ ಬೆಲೆಗೆ ರಾಮಪ್ರಿಯ ಕಟ್ಟಡದ ಸ್ವಾಧೀನತೆಗೆ ಪ್ರಯತ್ನಿಸುತ್ತಿದೆ. ಸರಕಾರದ ಈ ಕಾರ್ಯದಕ್ಷತೆಯನ್ನು ವೀಕ್ಷಿಸುವಾಗ ಅತೀ ಹೆಚ್ಚಿನ ಬೆಲೆಗೆ ಆಸ್ತಿಯನ್ನು ಸಂಸ್ಥೆಯಿಂದ ಅದು ಕೊಂಡುಕೊಳ್ಳುವುದರ ಬಗ್ಗೆ ಆಶ್ಚರ್ಯವಿಲ್ಲ. ಆದ್ದರಿಂದ ಈ ಸಭೆಯ ನಾಯಕರು ಹಾಗೂ ವಿರೋಧ ಪಕ್ಷದ ನಾಯಕರು ಇಂತಹ ತಪ್ಪು ಆಗದಂತೆ ಎಚ್ಚರವಹಿಸಬೇಕೆಂದು ನಮ್ಮ ಆಕಾಂಕ್ಷೆ. ಸರಕಾರ ಇದರ ಬಗ್ಗೆ ಮುಂದೆ ಬರಲು ಒತ್ತಾಯಿಸುವುದೊಂದೇ ನಮ್ಮ ಮುಂದಿನ ಮಾರ್ಗ. ನಾನು ಸಭಾಪತಿಯವರಲ್ಲಿ ಕಳಕಳಿಯಿಂದ ವಿನಂತಿಸುವುದೇನೆಂದರೆ ಸದಸ್ಯರಿಗೆ ಸರಿಯಾದ ರಕ್ಷಣೆ ನೀಡಿ ಅನ್ಯಾಯಕ್ಕೆ ತಡೆಯೊಡ್ಡಿ ಸರಿಯಾದ ವ್ಯವಸ್ಥೆ ಆಗುವಂತೆ ಮಾಡಲು ಕೋರುತ್ತೇನೆ. ಸಭೆಯ ನಾಯಕರು ಸರಕಾರವು ಗುತ್ತಿಗೆಯ ಆಧಾರದ ಮೇಲೆ ನೀಡಲು ತೀರ್ಮಾನಿಸಿದೆ ಎಂದು ತಿಳಿಸಿದ್ದಾರೆ. ಈ ವ್ಯವಸ್ಥೆಯಿಂದ ಆ ಸಂಸ್ಥೆ ಲಾಭ ಪಡೆಯಬಹುದು. ಇದರಿಂದ ಸಾರ್ವಜನಿಕರ ಹಣ ಪೋಲಾಗುವುದು ಅಷ್ಟೆ. 50,000/- ರೂಪಾಯಿ ಜನತಾ ಪಾರ್ಟಿಯ ಕೇಳಿಕೆ, ಆದರೆ ಸಭೆಯ ನಾಯಕರು ಇದನ್ನು ತನ್ನ ಪಾರ್ಟಿಗೆ ಗುತ್ತಿಗೆಯ ಅಧಾರದಂತೆ ನೀಡಲು ಇಚ್ಛಿಸಿದ್ದಾರೆ. ಇದನ್ನೆಲ್ಲಾ ಕಂಡಾಗ ನಮ್ಮ ರಕ್ತ ಕುದಿಯುತ್ತದೆ. ಸರಿಯಾದ ಕ್ರಮದಿಂದ ಆಗದೆ ಇರುವ ವಿಷಯಗಳ ಬಗ್ಗೆ ಅನ್ಯಾಯ ರೀತಿಯಲ್ಲಿ ಇದನ್ನು ಅನುಸರಿಸಲು ನಾವು ಮಾನಸಿಕವಾಗಿ ಸಿದ್ದರಿಲ್ಲ. ನಾವು ಸಭಾಪತಿಯವರೊಂದಿಗೆ ಗೌರವಯುತವಾಗಿ ಸಹಕರಿಸಲು ಸಿದ್ದರಿದ್ದೇವೆ. ಆದರೆ ನಮ್ಮ ಅನಿಸಿಕೆಗಳನ್ನು ತಾವು ಅರ್ಥೈಸಿಕೊಳ್ಳಬೇಕು. ಸ್ವಾಮಿ, ನಾವು ಮಾನ್ಯ ಸದಸ್ಯರಾದ ಎಚ್.ಎನ್. ನಂಜೇಗೌಡರ ಮಾತನ್ನು ಒಪ್ಪುತ್ತೇನೆ. ಮಾನ್ಯ ಮಂತ್ರಿಗಳಾದ ಶ್ರೀ ಪುಟ್ಟಸ್ವಾಮಿಯವರು ಸತ್ಯವನ್ನೇ ಹೇಳಿರಬಹುದು ಮಾನ್ಯ ಮುಖ್ಯ ಮಂತ್ರಿಗಳು ಸತ್ಯವನ್ನು ಹೇಳದೆ ಇರಬಹುದು. ಈ ಬಗ್ಗೆ ಕ್ಯಾಬಿನೆಟ್ ತೀರ್ಮಾನ ತೆಗೆದುಕೊಂಡಿದೆ ಎಂದು ಮಾನ್ಯ ಮಂತ್ರಿಗಳಾದ ಶ್ರೀ ರಾಚಯ್ಯನವರು ಹೇಳಿದ್ದಾರೆ. ಮಾನ್ಯ ಮುಖ್ಯಮಂತ್ರಿಗಳು ಹೇಳಿದ್ದು ಶ್ರೀಯುತ ರಾಚಯ್ಯನವರು ಹೇಳಿದುದರಲ್ಲಿ ವ್ಯತ್ಯಾಸವಾದದನ್ನು ಶ್ರೀ ಪುಟ್ಟಸ್ವಾಮಿಯವರು ಸ್ಪಷ್ಟೀಕರಿಸಿದ್ದಾರೆ. ಮೂವರು ಮಂತ್ರಿಗಳ ಮಾತನ್ನು ಈಗ ಕೇಳುವಾಗ ಮಾನ್ಯ ಮುಖ್ಯ ಮಂತ್ರಿಗಳು ಹಾಗೂ ಶ್ರೀ ರಾಚಯ್ಯನವರು ಏನನ್ನೋ ಮುಚ್ಚಿಟ್ಟಿರುವಂತೆ ಕಾಣುತ್ತದೆ. ಶ್ರೀಮಾನ್ಯ ಪುಟ್ಟಸ್ವಾಮಿಯವರು ಹೇಳಿದ್ದು ಸರಿಯಾಗಿರಬೇಕು. ನಾವು ಇದರಿಂದ ಗಲಿಬಿಲಿಗೊಂಡಿದ್ದೇವೆ. ಆದ್ದರಿಂದ ನಾವು ಸಭಾಪತಿಗಳನ್ನು ಕೇಳಿಕೊಳ್ಳುವುದೇನೆಂದರೆ ತಾವು ಮಾನ್ಯ ಮುಖ್ಯ ಮಂತ್ರಿಯವರಿಗೆ ಇದಕ್ಕೆ ಸಂಬಂಧಿಸಿದ ಎಲ್ಲಾ ದಾಖಲೆಗಳನ್ನು ಸಭೆಯ ಮುಂದಿಡಲು ಆದೇಶಿಸಬೇಕೆಂದು. ಈ ಸ್ಥಳ ಕಾಂಗ್ರೆಸಿಗೆ ನೀಡಿದೆ ಮತ್ತು ಕಾಂಗ್ರೆಸ್ಸು ಒಂದು ನೊಂದೀಕರಣಗೊಂಡ ಸಂಸ್ಥೆಯಲ್ಲ. ಆದಕ್ಕೆ ನ್ಯಾಯಯುತವಾದ ಅಸ್ತಿತ್ವವೂ ಇಲ್ಲ. ಅದು ರಾಜಕೀಯ ಪಕ್ಷವಾಗಿರಬಹುದು ಆದರೆ ಅದಕ್ಕೆ ಕಾನೂನಿನ ಚೌಕಟ್ಟಿನಲ್ಲಿ ಆಸ್ತಿ ಪಡೆವ ಹಕ್ಕಿಲ್ಲ. ಇದೆಲ್ಲ ಗಲಿಬಿಲಿಗೊಳ್ಳುವಂತಾದ್ದು.

ವಿಸನದಿ : 26-2-1968

ಎಲ್ಲ ದಾಖಲೆಗಳು ನಮ್ಮ ಮುಂದೆ ಮಂಡಿಸಲ್ಪಟ್ಟಾಗ ನಮ್ಮ ಅಭಿಪ್ರಾಯ ತಿಳಿಸಬಹುದು. ಅಂತಿಮ ಅಭಿಪ್ರಾಯಕ್ಕೆ ಬಂದು ಸರಕಾರಕ್ಕೆ ತಿಳಿಸಬಹುದು. ಇದರ ಬಗ್ಗೆ ಸರಕಾರದ ಮೇಲೆ ಗುಮಾನಿ ಬಂದರೆ ಆ ಆಧಾರದ ಮೇಲೆ ಸರಕಾರವನ್ನು ಅನೂರ್ಜಿತಗೊಳಿಸಬಹುದು. ಇದು ಮತ್ತೊಂದು ರಾಮಪ್ರಿಯ ಕಟ್ಟಡ ವ್ಯವಹಾರ. ಆದ್ದರಿಂದ ಪ್ರತಿಯೊಂದು ವಿವರ ಸಭೆಯ ಮುಂದಿಡತಕ್ಕದ್ದು.

ಸ್ವಾಮಿ, ಆಡಳಿತ ಪಕ್ಷದವರು ಇಲ್ಲಿ ವಿರೋಧ ಪಕ್ಷದವರು ಆತಂಕ ಮಾಡುತ್ತಿದ್ದಾರೆ ಎನ್ನುವ ಮಾತನ್ನು ಹೇಳುತ್ತಿದ್ದಾರೆ. ಇದರಲ್ಲಿ ಆತಂಕ ಎಂದು ತಿಳಿಯಬಾರದು. ಅಧಿಕಾರದಲ್ಲಿರುವ ಜನ ಜನತೆಗೆ ವಿರೋಧವಾಗಿ ಇಷ್ಟೊಂದು ಹಣದ ದುರುಪಯೋಗ ಮಾಡುತ್ತಿರುವಾಗ ಅವರು ಆಡಳಿತವನ್ನು ನಡೆಸುತ್ತಿರುವುದು ಸರಿಯಾಗಿದೆಯೇ ಎಂದು ನಾವು ಕೇಳಲೇಬೇಕಾಗುತ್ತದೆ. ಇಂದು ಇರುವ ಡೆಮಾಕ್ರಟಿಕ್ ಸೆಟ್ ಅಪ್‌ನಲ್ಲಿ ಇದನ್ನು ನಾವು ಕೇಳಬೇಕಾಗುತ್ತದೆ. ಇವೊತ್ತು ಶ್ರೀಮಾನ್ ವಾಟಾಳ್ ನಾಗರಾಜ್‌ರವರು ವ್ಯಕ್ತಮಾಡಿದಂತಹ ವಿಚಾರ ಒಬ್ಬ ವ್ಯಕ್ತಿಗಳಿಗೆ ಸಂಬಂಧಪಟ್ಟಿದ್ದಲ್ಲ. ಇದು ಇಡೀ ವಿರೋಧ ಪಕ್ಷದ ಸದಸ್ಯರಿಗೆ ಹಾಗೂ ದೇಶದ ಜನರಿಗೆ ಸಂಬಂಧಿಸಿದ ಪ್ರಶ್ನೆ ಎನ್ನುವುದನ್ನು ಎಲ್ಲರೂ ಇಲ್ಲಿ ಅರ್ಥಮಾಡಿಕೊಳ್ಳಬೇಕು. ಇದರ ಬಗ್ಗೆ ಈ ರೀತಿ ಇಲ್ಲಿ ಹೇಳುತ್ತಿರುವುದನ್ನು ನೋಡಿ ನನಗೆ ತುಂಬಾ ವ್ಯಸನವಾಗುತ್ತದೆ. ಇವೊತ್ತಿನ ಕಾರ್ಯಕಲಾಪಗಳು ನಡೆಯಲು ಅಡ್ಡಿಯಾಗಿದ್ದರೆ ಅದು ಪ್ರಾಮುಖ್ಯವಾಗಿ ಮಂತ್ರಿಗಳು ಹಾಗೂ ಅವರ ಅಧಿಕಾರ ವರ್ಗದವರಿಂದ ಇಷ್ಟೊಂದು ಮಹತ್ವವಾದ ವಿಚಾರಗಳನ್ನು ಇಲ್ಲಿ ಪ್ರತಿಪಾದನೆ ಮಾಡುತ್ತಿದ್ದರೂ ಇದರ ಗಂಭೀರತೆಯನ್ನು ಲಕ್ಷಕ್ಕೇ ತೆಗೆದುಕೊಳ್ಳದೇ ಇದರ ಕಾಗದಪತ್ರಗಳೇನು ಎನ್ನುವುದನ್ನು ಇದುವರೆಗೂ ಹಾಜರುಪಡಿಸಲಿಲ್ಲ. ಲಕ್ಷ ರೂಪಾಯಿಗಳಿಗಿಂತ ಮೇಲ್ಪಟ್ಟು ಬೆಲೆಬಾಳುವ ಪ್ರದೇಶವನ್ನು ಕಾಂಗ್ರೆಸ್ಸು ಪಕ್ಷದವರು ನಡೆಸುವ ವಸ್ತು ಪ್ರದರ್ಶನಕ್ಕಾಗಿ ಕೊಡಬೇಕೆಂದು ಹೇಳುವುದು ಲಂಚಗುಳಿತನಕ್ಕೆ ಅವಕಾಶ ಮಾಡಿ ಕೊಡುವುದಿಲ್ಲವೇ? ಇದರ ಬಗ್ಗೆ ನಾವು ಅಡ್ಡಿ ಮಾಡುತ್ತೇವೆ ಎಂದು ಹೇಳುವುದು ತಪ್ಪು ಭಾವನೆಗಳನ್ನು ಮೂಡಿಸುವುದಕ್ಕಾಗಿ ಇಂತಹ ನಡವಳಿಕೆಗಳನ್ನು ಪ್ರಾಮಾಣಿಕವಾಗಿ ವಿರೋಧ ಮಾಡುತ್ತಿರುವ ನಮ್ಮ ಪಕ್ಷದವರನ್ನು ಆತಂಕ ಮಾಡುತ್ತಾರೆ ಎಂದು ಹೇಳುವುದು ಸರಿಯಲ್ಲ. ಇಂತಹ ಕ್ಲಿಷ್ಟ ವಿಚಾರಗಳನ್ನು ಪ್ರತಿಪಾದನೆ ಮಾಡುತ್ತಿರುವಾಗ ಇದರ ಬಗ್ಗೆ ಆತಂಕ ವ್ಯಕ್ತ ಮಾಡುತ್ತಾರೆ ಎಂದು ಶ್ರೀಮಾನ್ ದೇವರಾಜ ಅರಸ್‌ರವರು ಏಕೆ ಹೇಳುತ್ತಾರೆ ಎನ್ನುವುದನ್ನು ಅವರೇ ಹೇಳಲಿ ಮುಂದೆ ನಾವು ಮಾತನಾಡುವುದಿಲ್ಲ.

# 1969-70ನೇ ಸಾಲಿನ ಆಯವ್ಯಯದ ಮೇಲಿನ ಸಾಮಾನ್ಯ ಚರ್ಚೆ

ಸನ್ಮಾನ್ಯ ಸಭಾಪತಿಗಳೇ, ಮಾನ್ಯ ಅರ್ಥ ಸಚಿವರು ಮಂಡಿಸಿರುವ ಈ ಆಯವ್ಯಯ ಪಟ್ಟಿಯನ್ನು ವಿರೋಧಿಸುತ್ತ ನಾನು ಕೆಲವು ಮಾತುಗಳನ್ನು ಹೇಳಬಯಸುತ್ತೇನೆ. ಮಾನ್ಯ ಸಚಿವರು ಒಳ್ಳೆಯ ಸಮರ್ಥ ಆಡಳಿತಗಾರರಾಗಿರುವುದರಿಂದ ವಸ್ತು ಸ್ಥಿತಿಯನ್ನು ಇದ್ದಕ್ಕಿದ್ದ ಸ್ವರೂಪದಲ್ಲಿ ಜನತೆಯ ಎದುರಿಗೆ, ಈ ಸಭೆಯ ಎದುರಿಗೆ ಇಡಲಾರದೆ ತೂತು ಬಿದ್ದ ಹಡಗನ್ನು ಸಹ ಒಳ್ಳೆಯ ಪ್ರತಿಭಾನ್ವಿತವಾಗಿ ನಡೆಸತಕ್ಕ ರೀತಿಯಲ್ಲಿ ಬುದ್ಧಿವಂತಿಕೆ ಮಾಡಿ ಈ ಬಜೆಟನ್ನು ಮಂಡಿಸಿದ್ದಾರೆ. ಬಜೆಟ್ಟಿನಲ್ಲಿ ಅಲ್ಲಲ್ಲಿ ಉಳಿತಾಯವನ್ನು ತೋರಿಸಿರುವುದರ ಕಾರಣವನ್ನು ನೋಡಿದರೆ, ಅವರ ಭಾಷಣದ ವೈಖರಿ ಮತ್ತು ಬಜೆಟ್ಟನ್ನು ನೋಡಿದರೆ ಹೋದ ಸಲ ಬಜೆಟ್ಟನಲ್ಲಿ ಒದಗಿಸಿದ್ದ ಹಣವನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಖರ್ಚು ಮಾಡಲಾರದೆ ಉಳಿಸಿಕೊಂಡು ಆ ಉಳಿದ ಹಣವನ್ನು ಉಳಿತಾಯದ ಬಜೆಟ್ ಎನ್ನುವ ರೀತಿಯಲ್ಲಿ ತೋರಿಸುವ ಮುತ್ಸದ್ದಿತನವನ್ನು ಬಿಟ್ಟರೆ ಈ ಬಜೆಟ್ ದೇಶಕ್ಕೆ ಹೊಸ ಕಲ್ಯಾಣ ತರಲಿಲ್ಲ. ಹೊಸ ರೂಪರೇಷೆಗಳು ಇದರಲ್ಲಿಲ್ಲ. ಜನತೆಗೆ ಸಮರ್ಪಕವಾದ ರೀತಿಯಲ್ಲಿ ಇದನ್ನು ತರಲಿಲ್ಲ ಎನ್ನುವ ಮಾತನ್ನು ಬಹಳ ವ್ಯಸನದಿಂದ ಹೇಳಬೇಕಾಗಿದೆ. ಒಕ್ಕಲುತನ ಬಹಳ ಪ್ರಾಧಾನ್ಯವಾಗಿ ನೋಡಬೇಕಾದಂಥ ನಾಡಿನಲ್ಲಿ ಒಕ್ಕಲುತನಕ್ಕಾಗಿ ಹೇರಳವಾದ ಹಣವನ್ನು ವ್ಯಯ ಮಾಡುತ್ತಿದ್ದೇವೆಂದು ಸರ್ಕಾರ ಹೇಳಿಕೊಳ್ಳುತ್ತಿದೆ. ಅನೇಕ ಯೋಜನೆಗಳನ್ನು ಒಕ್ಕಲಿಗರ ಕಲ್ಯಾಣಕ್ಕಾಗಿ ಮಾಡುತ್ತೇವೆಂದು ಹೇಳುತ್ತಿದೆ ನಿಜ. ಒಕ್ಕಲುತನದ ಆಡಳಿತಗಾರರಲ್ಲಿ ತಜ್ಞರು ಮೈಸೂರು ದೇಶದಲ್ಲಿದ್ದಷ್ಟು ಉಳಿದ ಕಡೆ ಇರಲಾರರು. ಆಡಳಿತಗಾರರಲ್ಲಿ ಇರತಕ್ಕ ಕರ್ತವ್ಯ ಶಕ್ತಿ ಮೈಸೂರು ದೇಶದಲ್ಲಿ ಹೆಚ್ಚಾಗಿದೆ ಎನ್ನುವ ಮಾತನ್ನು ಕೇಂದ್ರದವರೂ ಒಪ್ಪಿಕೊಳ್ಳುತ್ತಾರೆ. ಆದರೆ ಒಕ್ಕಲುತನದ ಇಲಾಖೆಯ ಡೈರೆಕ್ಟರವರ ರೀತಿನೀತಿಗಳನ್ನು ನೋಡಿದರೆ ನಿಜವಾಗಿಯೂ ನಮ್ಮ ಒಕ್ಕಲುತನ ಯಾವ ಮಟ್ಟಕ್ಕೆ ಬಂದಿದೆ ಎಂದು ನಾವು ಈವೊತ್ತಿನ ದಿವಸ ವಿವೇಚನೆ ಮಾಡಬೇಕಾಗಿದೆ. ಸ್ವಾಮಿ, ಒಕ್ಕಲತನಕ್ಕೆ ಗೊಬ್ಬರ ಕೊಡುತ್ತೇವೆ, ರೈತರಿಗೆ ಸಾಲದ ರೂಪದಲ್ಲಿ ಹಣ ಕೊಡುತ್ತೇವೆ ಎಂದು ಹೇಳುತ್ತಾರೆ, ಕೆಲವು ಸಂಸ್ಥೆಗಳಿಗೆ ಗೊಬ್ಬರ ಕೊಟ್ಟು ಅವುಗಳ ಮೂಲಕ ಹಂಚುತ್ತೇವೆ ಎಂದು ಹೇಳುತ್ತಾರೆ. ಆದರೆ ಅದು ಸರಿಯಾಗಿ ಹಂಚಿಕೆಯಾಗುತ್ತಿಲ್ಲ, ಯಾವ ಭೂಮಿಗೆ ಯಾವ ಗೊಬ್ಬರ ಎಷ್ಟು ಹಾಕಬೇಕು ಎಂಬ ವಿಚಾರದಲ್ಲಿ ಸಂಶೋಧನೆ ಮಾಡಿ ತಿಳಿಸಿಲ್ಲ. ಹೋದ ಸಲ ಬಜೆಟ್ ಭಾಷಣದಲ್ಲಿ ಸಂಶೋಧನೆ ನಡೆಸುವುದಾಗಿ ಹೇಳಿದ್ದರು. ಆದರೆ ದುರ್ದೈವದಿಂದ ಇದುವರೆಗೆ ಆ ರೀತಿ ಮಾಡಿಲ್ಲ. ಅದಕ್ಕೆ ಬೇಕಾದ ಸಾಯಿಲ್ ಟೆಸ್ಟಿಂಗ್ ಲ್ಯಾಬೊರೇಟರಿ ಮಾಡಿಲ್ಲ. ರೈತರಿಗೆ ಚೆನ್ನಾಗಿ ಬೆಳೆಯಬೇಕೆಂಬ ಉತ್ಸಾಹವಿದ್ದರೂ ಕೂಡ ಅವರಿಗೆ ಭರವಸೆ ಕೊಟ್ಟಿರುವ ರೀತಿಯಲ್ಲಿ ಯಾವ ಜಮೀನಿಗೆ ಯಾವ ಗೊಬ್ಬರವನ್ನು ಎಷ್ಟು ಹಾಕಬೇಕೆಂಬುದನ್ನು ಸಂಶೋಧನೆ ನಡೆಸಿ ಅವರಿಗೆ ಅನುಕೂಲವಾಗುವಂತೆ ತಿಳಿಸಿರುವುದಿಲ್ಲ. ಇದರಿಂದ ಗೊಬ್ಬರ ಹಾಕಿದರೂ ವ್ಯರ್ಥವಾಗುತ್ತದೆ. ಪಂಪು ಸೆಟ್ಟುಗಳಿಗೆ ಹಣ ಕೊಡುತ್ತೇವೆ. ಅಭಿವೃದ್ಧಿ ಬ್ಯಾಂಕುಗಳ ಮೂಲಕ ಕೊಡುತ್ತೇವೆ ಎಂದು ಹೇಳುವಾಗ ಇಂದು ಗೋವ, ಮಹಾರಾಷ್ಟ್ರ, ಕೇರಳ ಮುಂತಾದ ರಾಜ್ಯಗಳಿಗೆ ವಿದ್ಯುತ್ತನ್ನು ಒದಗಿಸುತ್ತಿದ್ದಾರೆ, ಅದು ಸರಿಯಲ್ಲ. ನಮ್ಮಲ್ಲಿರುವ ಪಂಪುಗಳಿಗೆ ಕೊಡಲು ಸಾಧ್ಯವಾಗದ ಪರಿಸ್ಥಿತಿ ಬರುವ ಸಂದರ್ಭವಿದೆ. ಶರಾವತಿಯ

---

ವಿಸನದಿ : 3-3-1969

ಯೋಜನೆಯಲ್ಲೇನೋ ವಿದ್ಯುತ್ ಬಹಳವಾಗಿ ಉತ್ಪತ್ತಿಯಾಗುತ್ತಿದೆ. ಆದರೆ ಅಲ್ಲಿ ವಿದ್ಯುತ್ತನ್ನು ವಿತರಣೆ ಮಾಡುವುದಕ್ಕೆ ಹಣವಿಲ್ಲ. ಹಣ ಸಂಪಾದನೆ ಮಾಡಲು ನಮ್ಮಲ್ಲಿರುವ ವಿದ್ಯುತ್ತನ್ನು ಇತರರಿಗೆ ಕೊಡುವುದು ಬುದ್ಧಿವಂತಿಕೆಯಲ್ಲ. ಅದರಿಂದ ಖರ್ಚು ಬರುತ್ತದೆ. ಮುಂದಿನ ವರ್ಷ ಹೆಚ್ಚು ವಿದ್ಯುತ್ ಉತ್ಪತ್ತಿಯಾಗುತ್ತದೆ ಎಂದು ಈಗ ಹೊರಗಿನವರಿಗೆ ಕೊಡುವುದು ಸರಿಯಲ್ಲ. ಇಂದು ಪಂಪುಸೆಟ್ಟುಗಳನ್ನು ಕೊಡುತ್ತೇವೆಂದು ಹೇಳುವುದು ಕನ್ನಡಿಯ ಗಂಟಾಗಿದೆ. ಒಕ್ಕಲತನಕ್ಕೆ ಪಂಪುಸೆಟ್ಟು ಕೊಡದಿದ್ದರೆ, ಟ್ರಾಕ್ಟರುಗಳು, ಸಹಾಯಧನ ಮುಂತಾದ್ದನ್ನು ಕೊಟ್ಟರೂ ಕೂಡ ಉಪಯೋಗವಾಗುವುದಿಲ್ಲ. ಇದನ್ನು ಗಮನಿಸಬೇಕು. ಇಂದು ರಾಜ್ಯದಲ್ಲಿ ಹೇರಳವಾಗಿ ಗೊಬ್ಬರ ಇದ್ದರೂ ಅದು ಖರ್ಚಾಗಿಲ್ಲ. ಅಂಕಿಅಂಶ ನೋಡಿದರೆ ಇಂಡಸ್ಟ್ರಿಯಲ್ ಇಲಾಖೆಯಲ್ಲಿ ಬಹಳ ಗೊಬ್ಬರ ಉಳಿಯುತ್ತಿದೆ. ಇದರ ಹಿನ್ನೆಲೆಯೇನು? ಅನೇಕರು ಸಾಕಷ್ಟು ಗೊಬ್ಬರ ಹಾಕುತ್ತಿಲ್ಲ. ಶೇಕಡಾ 4-5 ಜನರು ಗೊಬ್ಬರ ಹಾಕುತ್ತಿದ್ದಾರೆ. ಶೇಕಡಾ 90 ಮಂದಿಗೆ ಗೊಬ್ಬರವಿಲ್ಲದೆ ಹಾಗೇ ವ್ಯವಸಾಯ ಮಾಡುತ್ತಿದ್ದಾರೆ, ಅವರಿಗೆ ಕೊಳ್ಳಲು ಹಣವಿಲ್ಲ. ಅವರಿಗೆ ಸಹಕಾರ ಸಂಘಗಳ ಮೂಲಕ ರೊಕ್ಕ ಕೊಡುತ್ತೇವೆ ಎಂದು ಹೇಳುತ್ತಾರೆ. ಆದರೆ ಸಹಕಾರ ಸಂಘಗಳಲ್ಲಿ ಸದ್ವಿನಿಯೋಗವಾಗುತ್ತಿಲ್ಲ. ಇದನ್ನು ಸಹಕಾರ ಇಲಾಖೆಯ ವಿಚಾರ ಮಾತನಾಡುವಾಗ ಮತ್ತು ಇತರ ಸಂದರ್ಭಗಳಲ್ಲಿ ಹೇಳುತ್ತೇನೆ. ಮತ್ತು ಪೆಸ್ಟಿಸೈಡ್ಸ್ ಉಪಯೋಗ ಸರಿಯಾಗಿ ಆಗುತ್ತಿಲ್ಲ. ಸರಿಯಾಗಿ ದೊರೆಯುವುದಿಲ್ಲ. ದೊರೆಯುವಾಗ ರೊಕ್ಕವಿರುವುದಿಲ್ಲ. ಬೇಕಾದಾಗ ಕೊಡದೆ ಸ್ವೇಚ್ಛೆಯಿಂದ ಕೆಲಸ ಮಾಡುತ್ತಿದ್ದಾರೆ, ಜವಾಬ್ದಾರಿಯುತರಾಗಿ ಕೆಲಸ ಮಾಡಬೇಕೆಂದು ಒತ್ತಾಯ ಮಾಡಿದರೂ ಪ್ರಯೋಜನವಾಗಿಲ್ಲ. ಇಂದು ಏರ್ ಸ್ಪ್ರೇ ಮಾಡುತ್ತಾರೆ. ಅದಕ್ಕೆ ಬೇಕಾದ ಸ್ಪ್ರೇಯರ್ಸ್ ಮುಂತಾದ್ದನ್ನು ಹಂಚುವಾಗ ಸರಿಯಾಗಿ ಹಂಚುತ್ತಿಲ್ಲ, ಕೇಂದ್ರ ಸರಕಾರದಿಂದ ಈ ಸಂಬಂಧವಾಗಿ ಹೇರಳವಾಗಿ ಹಣ ದೊರೆಯುತ್ತದೆ. ಸಿಬ್ಬಂದಿ ನೇಮಕ ಮಾಡಿ ಎಂದು ಹೋದ ಸಲ ಹೇಳಿದರೂ ಗಮನಕೊಡಲಿಲ್ಲ. ಹಾಗೆ ಮಾಡಿದ್ದರೆ ಪ್ಲೇನ್‌ನಲ್ಲಿ ಏರ್ ಸ್ಪ್ರೇ ಮಾಡುವುದಕ್ಕೆ ಅವಕಾಶ ದೊರೆಯುತ್ತಿತ್ತು. ದುರ್ದೈವದಿಂದ ಅದಕ್ಕೆ ತಕ್ಕ ಯೋಜನೆ ಮಾಡಲಿಲ್ಲ. ಆದ್ದರಿಂದ ಕೇಂದ್ರ ಸರಕಾರದಿಂದ ನಮ್ಮ ಜನರಿಗೆ ಮುಟ್ಟಬೇಕಾದ ಲಾಭ ಮುಟ್ಟಲು ಸಾಧ್ಯವಾಗಲಿಲ್ಲ. ಕೇಂದ್ರ ಸರಕಾರವು ನಮಗೆ ಆ ವಿಚಾರದಲ್ಲಿ ಸಹಾಯ ಮಾಡುವುದನ್ನು ಸಂಪೂರ್ಣವಾಗಿ ಕೈಬಿಡಲಾಯಿತು. ಈ ರೀತಿ ಸರಕಾರ ತಪ್ಪು ಮಾಡುತ್ತಿದೆ. ಒಟ್ಟಿನಲ್ಲಿ ಈ ದಿವಸ ಒಕ್ಕಲುತನದ ವಿಚಾರಕ್ಕೆ ಸಾಕಷ್ಟು ಮಹತ್ವ ಕೊಟ್ಟಿಲ್ಲ. ಈ ಖಾತೆಯಲ್ಲಿರುವ ಅಧಿಕಾರಿಗಳು ಒಕ್ಕಲತನದವರೊಂದಿಗೆ ಸಾಕಷ್ಟು ಸಂಪರ್ಕ ಬೆಳೆಸಿಲ್ಲ. ಟಿ.ಡಿ. ಬೋರ್ಡ್ ಈ ವಿಚಾರದಲ್ಲಿ ಸರಿಯಾದ ಗಮನಕೊಡದೆ ಕೇವಲ ಚುನಾವಣೆ ಬಗ್ಗೆ ಕಾಂಗ್ರೆಸ್ ಉಮೇದುವಾರರು ಗೆಲ್ಲಲು ಅದಕ್ಕೆ ಬೇಕಾದ ಕಾರ್ಯಗಳಿಗೆ ಗಮನ ಕೊಟ್ಟಿದೆ. ಇದರಿಂದ ಒಕ್ಕಲುತನಕ್ಕೆ ಸೌಕರ್ಯ ದೊರೆತಿಲ್ಲ.

ಇನ್ನು ಔದ್ಯೋಗೀಕರಣದ ಬಗ್ಗೆ ಹೇಳುವುದಾದರೆ ನಾನು ಬರುತ್ತಾ ಇದ್ದಾಗ ನನ್ನ ಗಾಡಿಯಲ್ಲಿದ್ದ ಒಬ್ಬ ಪಾರ್ಲಿಮೆಂಟ್ ಸದಸ್ಯರು ಹೇಳುತ್ತಾ ಇದ್ದರು. ಮೈಸೂರು ರಾಜ್ಯದಲ್ಲಿ ಕೇಂದ್ರದಿಂದ, ರಾಜ್ಯದಿಂದ ಮತ್ತು ವೈಯಕ್ತಿಕವಾಗಿ ಬಂಡವಾಳಗಾರರಿಂದ ಹಾಕತಕ್ಕ ಮೊತ್ತ ಕೇವಲ 63 ಲಕ್ಷ ರೂಪಾಯಿಗಳು ಮಾತ್ರ ಎಂದು. ಸುತ್ತು ಮುತ್ತಲಿನ ಹೈದ್ರಾಬಾದು ಮತ್ತು ಇತರ ಪ್ರದೇಶಗಳಲ್ಲಿ 95 ಕೋಟಿ ರೂಪಾಯಿಗಳು ಅಷ್ಟೇ ಅಲ್ಲ 113 ಕೋಟಿ ರೂಪಾಯಿಗಳಿಗಿಂತಲೂ ಮೀರಿದೆ.

ಇಷ್ಟು ಮಾತ್ರ ನಿಜ. ಇಂಡಸ್ಟ್ರಿಯಲೈಸೇಷನ್‌ನಲ್ಲಿ ಮೈಸೂರು ಬಹಳವಾಗಿ ಮುಂದುವರಿದಿದೆ ಎಂದರೂ ಕೂಡ, ಮೈಸೂರು ಮಹಾರಾಜರ ಕಾಲದಲ್ಲಿ ಅಲ್ಲೊಂದು ಇಲ್ಲೊಂದು ಕಾರ್ಖಾನೆ ಆದದ್ದನ್ನು ಬಂದು ಮಾಡುವುದರಲ್ಲಿ ಇವತ್ತು ಸರ್ಕಾರದವರು ಮುತುವರ್ಜಿಯನ್ನು ಹೊಂದಿ ಕೀರ್ತಿ ಪಡೆದಿದ್ದಾರೆಯೇ ಹೊರತು ಹೊಸದಾಗಿ ಪ್ರಾರಂಭ ಮಾಡುವಂತಹ ಕಾರ್ಯದಲ್ಲಿ ಕೀರ್ತಿಯನ್ನು ಪಡೆದಿಲ್ಲ. ಫೌಂಡೇಷನ್ ಹಾಕುವುದಕ್ಕಾಗಿ ಉದ್ಘಾಟನೆ ಮಾಡಿದ್ದು ನಿಜ. ಯಾತರ ಸಲುವಾಗಿ? ಮಂತ್ರಿಗಳಿಗೆ ಏನಾದರೂ ಒಂದು ಕಾರ್ಯಕ್ರಮ ಕೊಡಬೇಕೆನ್ನುವುದರ ಸಲುವಾಗಿ ಇದನ್ನೆಲ್ಲಾ ಮಾಡುತ್ತಾರೆ. ಅದೇ ಪ್ರಕಾರ ಟ್ರಾವಲರ್ಸ್ ಬಂಗಲೆ ಕಟ್ಟಬೇಕು ಅಂತ ಹೇಳಿ ಒಂದು ಕಲ್ಲು ಅವರ ಕೈಯಿಂದ ಹಾಕಿಸಿರಿ ಫೌಂಡೇಷನ್ ಸ್ಟೋನ್ ಮಾನ್ಯ ಮಂತ್ರಿಗಳಿಂದ ಹಾಕಲಾಯಿತು ಎಂದು ಹೇಳಿಕೊಳ್ಳುವ ಸಲುವಾಗಿ ಈ ರೀತಿ ಎಲ್ಲಾ ಮಾಡುತ್ತ ಇದ್ದಾರೆ. ಇದು ನಿಜವಾಗಿಯೂ ಸರಿಯಾದ ಮಾರ್ಗವಲ್ಲ.

ಔದ್ಯೋಗೀಕರಣಕ್ಕೆ ಬೇಕಾಗುವಂತಹ ಸೌಕರ್ಯ ನಮ್ಮ ಮೈಸೂರು ದೇಶದಲ್ಲಿ ಬೇಕಾದಷ್ಟು ಇದ್ದರೂ ಕೂಡ, ನೈಸರ್ಗಿಕ ಸಂಪತ್ತು ಯಥೇಚ್ಛವಾಗಿದ್ದರೂ ಸಹ ಅದಕ್ಕೆ ಅವಕಾಶಗಳನ್ನು ಕೊಡುತ್ತಾ ಇಲ್ಲ ಎಂಬ ಅಭಿಪ್ರಾಯ ನಮ್ಮ ಮೈಸೂರು ರಾಜ್ಯದಲ್ಲಿ ಇದೆ. ನಾನು ಯಾವ ವ್ಯಕ್ತಿಯ ಸಂಬಂಧಿ ಆಗಲಿ ಹೇಳುತ್ತಾ ಇಲ್ಲ, ಜಾತಿ ವಿಷಯ ತರಬಾರದು ಅಂತ ಅನ್ನುತ್ತೀರಿ. ನೀವು ಅನುಸರಿಸುತ್ತಾ ಇರತಕ್ಕ ವಿಧಾನದಿಂದ ಯಾರಿಗೂ ಕೂಡ ಅನುಕೂಲವಾಗುತ್ತಾ ಇಲ್ಲ, ಹೀಗಾದರೆ ನಮ್ಮ ರಾಜ್ಯದ ಇಂಡಸ್ಟ್ರಿಯಲ್ ಡೆವಲಪ್‌ಮೆಂಟ್ ಯಾವ ರೀತಿ ಆಗುತ್ತದೆ? ಮೈಸೂರು ರಾಜ್ಯದಲ್ಲಿ 4-5 ಸ್ಪಿನ್ನಿಂಗ್ ಮಿಲ್‌ಗಳು ಪ್ರಾರಂಭವಾಗಿ, 3 ಮಿಲ್‌ಗಳಿಗೆ ಪ್ರಾರಂಭದಲ್ಲಿಯೇ ಅಡಚಣೆಗಳು ಬಂದವು. ಇನ್ನು ಒಂದು ಮಿಲ್ಲನ್ನು ಮುಚ್ಚದಂತೆ ಸ್ಟೇ ತಂದಿದ್ದಾರೆ. ಈ ರೀತಿ ಕೋಟಿಗಟ್ಟಲೆ ರೂಪಾಯಿ ಹಣ ಕೊಟ್ಟು ಪಬ್ಲಿಕ್ ಅಕೌಂಟ್ಸ್ ಕಮಿಟಿಯವರು ಕೊಡಬೇಡಿ ಎಂದರೂ ಸಹ 20 ಲಕ್ಷ ರೂಪಾಯಿಗಳನ್ನು ಕೊಟ್ಟು ಇವತ್ತು ಒಂದು ಮಿಲ್ ಲಿಕ್ವಿಡೇಷನ್‌ಗೆ ಪ್ರಪೋಸಲ್ ಬರುತ್ತಾ ಇದೆ. ಈಗ ಸೆಷನ್ ನಡೆಯುತ್ತಾ ಇದೆ ತಡಿಯಿರಿ, ಟೀಕೆಗೆ ಗುರಿಯಾಗುತ್ತೀರ ಅಂತ ಹೇಳುವಂತಹ ವೈಖರಿಯನ್ನು ನೋಡಿದರೆ ನಿಜವಾಗಿಯೂ ಕೂಡ ವ್ಯಸನವಾಗುತ್ತದೆ.

ಖಾಸಗೀ ಮಿಲ್ಲುಗಳು ಬಹಳ ಪ್ರಗತಿಪರವಾಗಿ ನಡೆಯುತ್ತಿವೆ. ದಾವಣಗೆರೆಯಂಥ ಒಂದು ಸಣ್ಣ ಟೌನಿನಲ್ಲಿ 4-5 ಮಿಲ್ಲುಗಳು ಬಹಳ ಲಾಭದಾಯಕ ರೀತಿಯಲ್ಲಿ ನಡೆಯುತ್ತಿವೆಯೆಂದಾಗ ಗದಗ್‌ನಲ್ಲಿ ಅಂಥಾ ಒಳ್ಳೆ ಹತ್ತಿ-ಗದಗ್ ಕಾಟನ್ ಅಂದರೆ ಅದು ಅತ್ಯಂತ ಮಹತ್ವವುಳ್ಳದ್ದು, ಅಂಥ ಹತ್ತಿಯನ್ನು ಮುಂಬೈನವರು ತೆಗೆದುಕೊಂಡು ಹೋಗಿ ಅದರಲ್ಲಿ ಬಟ್ಟೆಗಳನ್ನು ಮಾಡಿ ಮತ್ತೆ ನಮಗೇ ಇಲ್ಲಿಗೆ ರವಾನೆ ಮಾಡುತ್ತಿದ್ದಾರೆ. ಅಂದರೆ ಮೈಸೂರಿನವರಾದ ನಮಗೆ ಇಲ್ಲಿ ಆ ಹತ್ತಿ ಗಿರಿಣಿಗಳನ್ನು ನಡೆಸುವುದಕ್ಕಾಗುತ್ತಿಲ್ಲ ಎಂದರೇನು ಅರ್ಥ? ಆ ಮುಂಬೈನಲ್ಲಿರತಕ್ಕ ಸ್ಪಿನ್ನಿಂಗ್ ಮಿಲ್ಲುಗಳಿಗೇ ಒಂದು ವಿಧವಾದ ಹವಾಮಾನವಿದ್ದರೆ ಇಲ್ಲಿ ಅದಕ್ಕೆ ಬೇರೊಂದು ಹವಾಮಾನ ಬೇಕೇನು? ಇಲ್ಲಿ ಹವಾಮಾನವಿದ್ದರೂ ಜನರಲ್ಲಿ ಅಂಥ ಗುಣವಿಲ್ಲ. ಗುಣದಲ್ಲಿ ಬದಲಿಯಿದ್ದಾರೆ. ಆದ್ದರಿಂದ ಸರ್ಕಾರದವರು ಈ ವಿಚಾರದಲ್ಲಿ ಒಂದು ನಿರ್ದಿಷ್ಟ ತೀರ್ಮಾನ ತೆಗೆದುಕೊಳ್ಳಬೇಕೆಂದು ನಾನು ಮನವಿ ಮಾಡಿಕೊಳ್ಳುತ್ತೇನೆ.

ಇನ್ನು ವಿದ್ಯುಚ್ಛಕ್ತಿಯ ವಿಚಾರಕ್ಕೆ ಬಂದರೆ - ಸರ್ಕಾರದವರು ಈಗ ಗೋವಾಕ್ಕೆ ಇಲ್ಲಿಂದ ವಿದ್ಯುಚ್ಛಕ್ತಿಯನ್ನು ಕೊಡುವುದಕ್ಕೆ ಒಪ್ಪಿದ್ದಾರೆ. ಆದರೆ ನಾನು ಯಾವತ್ತೂ ರಚನಾತ್ಮಕ ಟೀಕೆಯನ್ನು ಮಾಡತಕ್ಕವನೇ ವಿನಾ ವಿರೋಧಕ್ಕಾಗಿ ಭಾಷಣ ಮಾಡತಕ್ಕವನಲ್ಲ. ಇಲ್ಲಿ ನಾನು ಮಾತನಾಡತಕ್ಕ ಕಾಲದಲ್ಲಿ ಒಂದು ನೀತಿ, ನಿಯಮ, ಪ್ರಾಮಾಣಿಕತೆಗಳಿಗೆ ಕಟ್ಟುಬಿದ್ದು ಮಾತನಾಡತಕ್ಕವನು. ನಾನು ಈ ವಿದ್ಯುಚ್ಛಕ್ತಿಯ ವಿಚಾರದಲ್ಲಿ ಹೇಳತಕ್ಕದ್ದೇನೆಂದರೆ ಮೈಸೂರು ರಾಜ್ಯದಲ್ಲಿರತಕ್ಕ ಬೆಳೆಗಾರರಿಗೆ ಇದರಿಂದ ಏನೇನೂ ಅನುಕೂಲವಾಗಿಲ್ಲ. ಕೆಲವು, ಕಡೆ ಖಾಸಗೀ ಜನರಿಗೆ ವಿದ್ಯುಚ್ಛಕ್ತಿಯನ್ನು ತಯಾರಿಸುವುದಕ್ಕೆ ಅವಕಾಶ ಕೊಟ್ಟಿದ್ದಾರೆ. ಹಾಗಿರುವಾಗ ಅದನ್ನು ಏಕೆ ಇದುವರೆಗೂ ಇನ್ನೂ ರಾಷ್ಟ್ರೀಕರಣ ಮಾಡಲಿಲ್ಲ ಎಂದು ಕೇಳುತ್ತೇನೆ? ಆ ಖಾಸಗೀ ಕಂಪೆನಿಯವರು ಅಧ್ಯಕ್ಷರ ಸಹನೆಗೂ ಮೀರಿದಂಥ ಅನ್ಯಾಯ ಅಪರಾಧಗಳನ್ನು ಮಾಡಿದ್ದರೂ ಏಕೆ ಅವರ ಬಗ್ಗೆ ಕ್ರಮಕೈಗೊಳ್ಳಲಿಲ್ಲಾ? ಅದೇ ರೀತಿ ವಿದ್ಯುಚ್ಛಕ್ತಿಯನ್ನು ತಯಾರಿಸುತ್ತಿದ್ದ ಮಂದಿ ರಾಮದುರ್ಗ, ಧಾರವಾಡ ಇಂಥಾ ಕಡೆಗಳಲ್ಲಿದ್ದವರಿಂದ ಅದನ್ನು ತಪ್ಪಿಸಲಿಲ್ಲವೇ? ಅದೇ ರೀತಿ ಸರ್ಕಾರದವರು ಈ ಒಂದು ಖಾಸಗೀ ಕಂಪೆನಿಯವರ ಮೇಲೂ ಆಕ್ಷನ್ ತೆಗೆದುಕೊಂಡಿದ್ದರೆ ಸುಮಾರು 20-30 ಖಟ್ಲೆಗಳನ್ನು ಇದುವರೆಗೆ ಹಾಕಬಹುದಿತ್ತು. ಅವರು ಸರಿಯಾಗಿ ಯಾವ ಲೆಕ್ಕಗಳನ್ನು ಕೂಡ ಇಟ್ಟಿಲ್ಲ. ಅವರು ಸರ್ಕಾರದವರ ಎಲ್ಲಾ ನಿಯಮಗಳನ್ನೂ ಉಲ್ಲಂಘನೆ ಮಾಡಿದ್ದಾರೆ. ಸರ್ಕಾರದವರು ಅವರ ಬಗ್ಗೆ ಏಕೆ ಕ್ರಮಗೊಳ್ಳುತ್ತಿಲ್ಲ ಎಂದರೆ ಅವರು ಸರ್ಕಾರದವರಿಗೆ ಚುನಾವಣೆಯ ಕಾಲದಲ್ಲಿ ಕೇಳಿದಷ್ಟು ಕೈ ಬಿಚ್ಚಿ ಹಣವನ್ನು ಕೊಡುತ್ತಾರೆ. ಆದುದರಿಂದ ಅವರನ್ನು ಹೇಳದೆ ಕೇಳದೆ ಹಾಗೆ ಕೈ ಬಿಟ್ಟಿದ್ದಾರೆ. ಅಥವಾ ವಿರೋಧಪಕ್ಷದವರು ಈ ವಿಚಾರದಲ್ಲಿ ಎಷ್ಟು ಮಾತುನಾಡುತ್ತಾರೋ ಮಾತನಾಡಲಿ, ನೋಡೋಣ ಅಂತ ಅವರ ಬಗ್ಗೆ ಕ್ರಮಕೈಗೊಳ್ಳದೆ ಬಿಟ್ಟಿದ್ದಾರೋ ಅದು ಗೊತ್ತಾಗುತ್ತಿಲ್ಲ. ನಮ್ಮ ಕಡೆ ಜನರು ಕಡಿಮೆ ಇದ್ದಾರೆ. ಇವರೇನು ಮಾತನಾಡಿದರೂ ಸರ್ಕಾರವನ್ನು ಜಗ್ಗಿಸುವದಕ್ಕಾಗುವುದಿಲ್ಲ ಎಂಬ ಭಾವನೆ ಇವರಲ್ಲಿದ್ದರೆ ಬಹಳ ತಪ್ಪು. ಕಾಲ ಬೇಗ ಬದಲಾವಣೆಯಾಗುತ್ತದೆ. ಅತ್ತಕಡೆ ತಮ್ಮ ಕಡೆ ಇರತಕ್ಕ ಜನ ನಾಳೆ ಇತ್ತಕಡೆ ಬರಬಹುದು; ಅಂಥ ದಿನಗಳು ಬೇಗ ಬರಲಿವೆ. ಇಲ್ಲಿ ನೀವು ಆ ಗಾಂಧಿ ಭಕ್ತರೆಂದು ಹೇಳಿಕೊಂಡು ಮಾಡುತ್ತಿರುವ ಕೆಲಸಗಳನ್ನೆಲ್ಲಾ ಮೇಲೆ ಆ ಗಾಂಧೀಜಿ ಕುಳಿತು ನೋಡುತ್ತಿದ್ದಾರೆ. ಅವರು ಬಹುಶಃ ಈಗ ನೀವೆಲ್ಲರೂ ಅವರ ಹೆಸರನ್ನು ಹೇಳಿಕೊಂಡು ಮಾಡುತ್ತಿರುವ ಕಾರ್ಯಗಳನ್ನು ನೋಡಿ ಆ ಗಾಂಧಿ ಹೆದರಿ ಈ ಮಂದಿ ನಮ್ಮವರು ಹೌದೋ ಅಲ್ಲೋ ಅಂಥ ಭಯಪಟ್ಟು ಓಡುತ್ತಿರಬೇಕು; ಹಾಗೆ ಓಡಲಿಕ್ಕೆ ಹತ್ತಿದ್ದಾರೆ.

ಸ್ವಾಮಿ, ಇನ್ನು ರೆಗ್ಯುಲೇಟೆಡ್ ಮಾರ್ಕೆಟ್ ಅಂತ ಮಾಡಿದರು. ಆ ಕಾನೂನು ಈಗ ಅಮಲಿನಲ್ಲಿದೆ. ಆದರೆ ಅದನ್ನು ತಂದ ಎಂ.ಆರ್. ಪಾಟೀಲರೂ ಈಗ ಮಂತ್ರಿಗಳಾಗಿಲ್ಲ. ಅದಕ್ಕೆ ಸಂಬಂಧಪಟ್ಟ ಸದಸ್ಯರೂ ಈಗಿಲ್ಲ. ಅದು ನಮ್ಮ ಒಂದು ಡೆಮೊಕ್ರೆಟಿಕ್ ಸೆಟಪ್ಪಿಗೆ ಶುಶ್ರೂಷೆ ಮಾಡಿದಂತಾಗುತ್ತದೆ. ಅದರಿಂದ ಬಹಳ ಅನುಕೂಲವಿದೆ, ಎಂದು ಹೇಳಿ ಅದನ್ನು ಆ ದಿವಸ ಒಪ್ಪಿಕೊಳ್ಳಬೇಕೆಂದು ಹೇಳಿದರು. ಅವರ ಮಾತಿನಲ್ಲಿ ವಿಶ್ವಾಸವಿಟ್ಟು ನಾವೂ ಅದನ್ನು ಆ ದಿವಸ ಒಪ್ಪಿಕೊಂಡೆವು. ಇದುವರೆಗೆ ಅಲ್ಲಿ ಚುನಾವಣೆಯನ್ನು ಮಾಡಲಿಲ್ಲ. ಇವತ್ತು ಚುನಾವಣೆ ಮಾಡುತ್ತೇವೆಂದು ಒಂದೆರಡು ವರ್ಷಗಳಿಂದ ಡೆಪ್ಯುಟಿ ಕಮಿಷನರ್ ಮತದಾರರ ಪಟ್ಟಿಯನ್ನು ಮಾಡಬೇಕೆಂದು ಹೇಳುತ್ತಿದ್ದಾರೆ ಎಸನ್‌ಸಿಯೇಷನ್ ಆಫ್ ಲಾ ಹೈಕೋರ್ಟಿನ ಮುಂದೆ ಹೋಗಿ

ಅವರು ಒಂದು ಆರ್ಡರನ್ನು ಮಾಡಿದ್ದಾಗ್ಯೂ, ಅದನ್ನು ಸರ್ಕಾರದವರು ಮೀರಿ ನಡೆಯುತ್ತಿದ್ದಾರೆ ಕಾಯಿದೆ ತಿದ್ದುವ ಬುದ್ಧಿ ನಿಮಗೆ ಬರುತ್ತಿಲ್ಲವಲ್ಲ ಎಂಬ ಮಾನ್ಯ ಶ್ರೀ ನಾಗಪ್ಪನವರು ಬಹಳ ಸೂಕ್ತ ರೀತಿಯಲ್ಲಿ ಹೇಳಿದ್ದಾರೆ.

ನಾನು ಪರ್ಸನಲ್ಲಾಗಿ ಯಾವುದೂ ಹೇಳಲಿಲ್ಲ. ಲಾ ಎನನ್ಸಿಯೇಟ್ ಮಾಡುವಾಗ ನಾಮಿನೇಷನ್ ಫಸ್ಟ್ ಕಮಿಟಿಯಲ್ಲಿದೆಯೆಂದು ಮಾಡಿದ್ದಾರೆ. ಆ ಮೇಲೆ ಚುನಾವಣೆಯಾಗಿ ಬಂದಂಥ ಹೊಸ ಕಮಿಟಿಯಲ್ಲಿ ಆ ರೀತಿ ನಾಮಿನೇಟ್ ಮಾಡುವುದಕ್ಕೆ ಆಗುವುದಿಲ್ಲ. ಹಳೆಯ ಕಮಿಟಿಯಲ್ಲಿ ಆ ರೀತಿ ಮಾಡಲು ಸಾಧ್ಯವಿದೆ ಆದರೆ ಕಮಿಟಿಗಳು ಇಲ್ಲದೆಯೇ ನಾಮಕರಣ ಮಾಡಬೇಕೆಂದು ಇವರು ಅರ್ಥಮಾಡುತ್ತಿದ್ದಾರೆ. ಅಂತಹವರು ಈ ಕಡೆಗೆ ಬಹಳಮಂದಿ ಇದ್ದಾರೆ. ಅವರೆಲ್ಲರಿಗೂ ನಾನು ಅಪೀಲು ಮಾಡುತ್ತಿದ್ದೇನೆ. ಇದನ್ನು ಪಕ್ಷದ ದೃಷ್ಟಿಯಿಂದ ನೋಡಬೇಡಿ. ಅಧಿಕಾರ ಇದೆಯೆಂದು ನಮ್ಮವರೇ ನಾಮಕರಣ ಮಾಡುವುದಕ್ಕೆ ಸಮರ್ಥರಾಗಿದ್ದಾರೆಂಬ ಹೇಸಿಗೆ ಬುದ್ಧಿ ಇವರಿಗಿದೆ. ನಾವು ಗಂಭೀರ ರೀತಿಯಿಂದ ಗೆದ್ದು ಬರುತ್ತೇವೆ. ಹಿತ್ತಲು ಬಾಗಲಿನಿಂದ ಬರುವುದಕ್ಕೆ ಏಕೆ ಪ್ರಯತ್ನ ಮಾಡುತ್ತೀರಿ? ನೀವು ಕಾಯಿದೆ ತೆಗೆದುಕೊಂಡು ಬನ್ನಿ. ನಾವು ಅದಕ್ಕೆ ವಿರೋಧ ಮಾಡುವುದಿಲ್ಲ. ಚುನಾವಣೆಯಲ್ಲಿ ನೀವು ಜಯಶೀಲರಾಗದೆ ವಿರೋಧಪಕ್ಷದವರು ಜಯಶೀಲರಾದರೆಂದರೆ, ನೀವು ತಲೆಬಾಗಿ.

ಇನ್ನು ಅನಿಮಲ್ ಹಸ್ಬೆಂಡರಿ ವಿಷಯ. ಈ ಇಲಾಖೆಯ ಮುತ್ಸದ್ದಿತನದಿಂದ ಅನಿಮಲ್ ಹಸ್ಬೆಂಡರಿ ಇಲಾಖೆಗೆ ಕ್ಯಾಬಿನೆಟ್ ಮಿನಿಸ್ಟರ್ ಇರಬಾರದೆಂದು ಮಾಡಿದ್ದಾರೋ ಏನೋ ಗೊತ್ತಿಲ್ಲ. ಇವರ ಇಲಾಖೆಗೆ ಕೋಟ್ಯಾಂತರ ರೂಪಾಯಿಗಳನ್ನು ಕೊಟ್ಟು ಸರ್ಕಾರಕ್ಕೆ ಪೋಲಾಗಿದೆ. ಅದನ್ನು ಸರ್ಕಾರದವರು ಬಹಳ ಸೂಕ್ಷ್ಮ ರೀತಿಯಿಂದ ಪರಿಶೀಲನೆ ಮಾಡಬೇಕು. ಕೇವಲ ಮಂತ್ರಿಗಳಾಗುವುದು ಟೂರ್ ಮತ್ತು ಡೆಪ್ಯುಟಿ ಕಮಿಷನರ್ ಮಕ್ಕಳನ್ನು ಕಾರ್ ಅಥವಾ ಜೀಪ್‌ನಲ್ಲಿ ಕುಳ್ಳಿರಿಸಿಕೊಂಡು ಸಿಕ್ಕಾಪಟ್ಟೆಯಾಗಿ ಸಂಚಾರ ಮಾಡುವುದಕ್ಕಲ್ಲ. ಇದರಿಂದ ಮಂತ್ರಿತ್ವಕ್ಕೆ ಒಳ್ಳೆಯದಾಗುವುದಿಲ್ಲ.

ಇನ್ನೊಂದು ವಿಷಯ ಮಂಗಳೂರಿನಲ್ಲಿ ಬಸವೇಶ್ವರ ವಿದ್ಯಾವರ್ಧಕ ಸಂಘದವರು ಒಂದು ಡೈರಿಯನ್ನು ಪ್ರಾರಂಭ ಮಾಡಿದ್ದಾರೆ. ಅದರ ಉದ್ಘಾಟನೆಯನ್ನು ಸಹ ಮಾಡಿದ್ದಾರೆ. ಅದು ಯಾವ ರೀತಿಯಲ್ಲಿಯೂ ಇನ್ನೂ ಅಭಿವೃದ್ಧಿಯಾಗಲಿಲ್ಲ. ಆ ಸಮಾರಂಭಕ್ಕೆ ಕಾಂಗ್ರೆಸ್ ಮಂತ್ರಿಗಳೂ ಮತ್ತು ಮಾನ್ಯ ಮುಖ್ಯಮಂತ್ರಿಗಳೂ ಎಲ್ಲರೂ ಬಂದಿದ್ದರು. ಆದರೆ ಮಾರನೆಯ ದಿವಸವೇ ಆ ಡೈರಿ ಕದ ಹಾಕಿದೆ. ಡೈರಿ ವಿಷಯ ಬೇರೆ. ಹೊಸದಾಗಿ ಯಾರ್ಯಾರು ಡೈರಿ ಪ್ರಾರಂಭಮಾಡುತ್ತಾರೋ ಅಂತಹವರಿಗೆ ಕೇಂದ್ರ ಸರ್ಕಾರದವರು ಹರಿಯಾಣದಿಂದ ಬೇಕಾದಷ್ಟು ದನಗಳನ್ನು ತರಿಸಿ ಡೈರಿಗಳನ್ನು ಅಭಿವೃದ್ಧಿ ಮಾಡಬೇಕು ಎಂದು ಹೇಳಿದ್ದಾರೆ. ಅಂದಮೇಲೆ ನೀವು ಅಲ್ಲಿಂದ ಎಷ್ಟು ದನಗಳನ್ನು ತರಿಸಿ ಇಲ್ಲಿರತಕ್ಕ ಡೈರಿಯನ್ನು ಅಭಿವೃದ್ಧಿ ಮಾಡಿದ್ದೀರಿ? ಮದ್ರಾಸ್ ಮತ್ತು ಆಂಧ್ರ ರಾಜ್ಯಗಳಲ್ಲಿ ಇದರ ಬಗ್ಗೆ ಹೆಚ್ಚಿನ ಸೌಕರ್ಯವಿದೆ. ಮೈಸೂರು ದೇಶದಲ್ಲಿ ಆ ಸೌಕರ್ಯವಿಲ್ಲ. ಬೇರೆ ಕಡೆಗಳಿಂದ ಅವು ಇಲ್ಲಿಗೆ ಬರುವುದಿಲ್ಲ. ನೀವು ಡೈರೆಕ್ಟಾಗಿ ಅಲ್ಲಿ ಹೋಗಿ ಕೇಳಿದರೆ ಕೊಡುತ್ತಾರೆಂದು ಮಂತ್ರಿಗಳು ಹೇಳುತ್ತಾರೆ. ನಮ್ಮ ಹಣೆಯಬರಹ ಇಂತಹ ಮಂತ್ರಿಗಳು ಇದ್ದಾರೆ. ಆ ದೃಷ್ಟಿಯಿಂದ ಮುಖ್ಯಮಂತ್ರಿಯವರಿಗೆ ನೇರವಾಗಿ ಈ ಪ್ರಶ್ನೆಯನ್ನು ಹಾಕುತ್ತಿದ್ದೇನೆ. ಈ ಮಂತ್ರಿ ಪದವಿಯನ್ನು

ಒಬ್ಬ ಕ್ಯಾಬಿನೆಟ್ ರ್‍ಯಾಂಕಿನವರಿಗೆ, ಒಬ್ಬ ಒಳ್ಳೆಯ ಮನುಷ್ಯನಿಗೆ ನಮ್ಮ ಗೋರ್ಪಡೆಯಂತವರಿಗೆ ಒಪ್ಪಿಸಿದರೆ ಒಳ್ಳೆಯದು ಎಂದು ಹೇಳುತ್ತೇನೆ.

ಇನ್ನೊಂದು ಮಾತು ಆಡಳಿತದ ವಿಚಾರದಲ್ಲಿ ಹೇಳುವುದಾದರೆ, ಮಾನ್ಯ ಮುಖ್ಯಮಂತ್ರಿಯವರು ಹೇಳಿದರು. ನೀವು ವಿರೋಧ ಪಕ್ಷದ ಸದಸ್ಯರು ಜವಾಬ್ದಾರಿ ಅರಿತು ಮಾತನಾಡಿದರೆ, ಅದನ್ನು ನಾನು ಶಿರಸಾವಹಿಸಿ ಮಾಡುತ್ತೇನೆಂದು. ನಾನು ಹೇಳುವುದಾದರೆ, ಆಗಾಗ್ಯೆ ಗೊಂದಲಮಯವಾಗಿ ಹೇಳದೆ, ನನಗೆ ಸಮಯ ಬಂದಾಗ, ಕಾನೂನು ಬದ್ಧವಾಗಿ ಹೇಳುವ ಹಕ್ಕು ಪಡೆದಿದ್ದೇನೆ. ಅವರ ಎದುರಿಗೆ ಕೊಡುವಂತಹ ಅನೇಕ ಸಲಹೆಗಳಿವೆ. ಆದರೆ ಕೊಟ್ಟಂತಹ ಅನೇಕ ಸಲಹೆಗಳಿಗೆ ಇನ್ನೂ ಉತ್ತರ ಬಂದಿಲ್ಲ. ಮುಟ್ಟಿದೆ ಎಂದು ಮಾತ್ರ ಕೊಟ್ಟಿದ್ದಾರೆ. ಶ್ರೀ ಶಂಕರರಾಯರ ಮೇಲೆ 21 ಪಾಯಿಂಟ್ ಮೇಲೆ ಆರೋಪಣೆ ಹೊರಿಸಿದ್ದನ್ನು ಮೂರು ದಿವಸದೊಳಗೆ ವಿಚಾರಣೆ ಮಾಡುತ್ತೇನೆ ಎಂದು, ಏನು ಮಾಡಿದರೋ? ಆದ್ದರಿಂದ ಈ ವಿಷಯದಲ್ಲಿ ಮುತುವರ್ಜಿ ವಹಿಸಿ ಮಾನ್ಯ ಮುಖ್ಯಮಂತ್ರಿಯರು ಕ್ರಮ ತೆಗೆದುಕೊಳ್ಳಬೇಕೆಂದು ಹೇಳಿಕೊಳ್ಳುತ್ತೇನೆ.

ಇನ್ನು ಸಹಕಾರದ ವಿಚಾರ, ಇವತ್ತು ಇಡೀ ಹಿಂದೂಸ್ಥಾನದಲ್ಲೇ ಈ ಸಹಕಾರ ಪ್ರಾಮುಖ್ಯತೆಯನ್ನು ಪಡೆದಿದೆ. ಅದರಲ್ಲೂ ಮೈಸೂರು ಹೆಚ್ಚು ಪ್ರಾಮುಖ್ಯತೆಯನ್ನು ಪಡೆದಿದೆ. ಅದರಲ್ಲೂ ಬಾಂಬೆ ಕರ್ನಾಟಕದಲ್ಲಿದ್ದಂತಹ ಶ್ರೀ ನಾಡಗೌಡರು ಈ ಇಲಾಖೆಯನ್ನು ವಹಿಸಿಕೊಂಡ ಮೇಲೆ ಇನ್ನೂ ಹೆಚ್ಚಿನ ಪ್ರಾಧಾನ್ಯತೆ ದೊರೆತಿವೆ. ಇವತ್ತಿನ ದಿವಸ ಈ ಸಹಕಾರಿ ತತ್ವವನ್ನು ಧಿಕ್ಕರಿಸಿ ಶ್ರೀ ನಾಡಗೌಡರು ನಡೆಯುತ್ತಿದ್ದಾರೆ. ಇವರು ಡೆವಲಪ್‌ಮೆಂಟ್ ಮಂತ್ರಿಯಾಗಿದ್ದಾರೆ ಸಹಕಾರ ಮಂತ್ರಿಯಾಗಿದ್ದಾರಲ್ಲದೆ ಬಸವೇಶ್ವರ ವಿದ್ಯಾವರ್ಧಕ ಸಂಸ್ಥೆಯ ಅಡ್ಮಿನಿಸ್ಟ್ರೇಟರೂ ಆಗಿದ್ದಾರೆ. ಅದಲ್ಲದೆ ಬಾಗಲಕೋಟೆಯ ಎ.ಪಿ.ಎಂ.ಸಿ. ದಾವಣಗೆರೆ, ಹುಬ್ಬಳ್ಳಿಯಲ್ಲಿರುವ ಎ.ಪಿ.ಎಂ.ಸಿ. ಇದಕ್ಕೆಲ್ಲಾ ಕೂಡ ಹಣ ಕೊಡುವುದಕ್ಕೆ ಠರಾವು ಮಾಡುವುದು ಎಲ್ಲಾ ಇವರ ಕೆಲಸವಾಗಿದೆ. ಹಣ ಕೇಳುವುದೂ ಇವರೇ, ಮಂಜೂರು ಮಾಡುವುದು ಇವರೇ, ಇದಕ್ಕೆ ಕಾಯಿದೆಯೂ ಇಲ್ಲ, ಏನೂ ಇಲ್ಲ. ಇವರು ಅದಕ್ಕೆ ಇದಕ್ಕೆ ಎಲ್ಲಾ ಮಂಜೂರು ಮಾಡುವುದು, ಕೊಡುವುದು. ಏಕೆಂದರೆ, ಇವರು ಹೇಳುವಂತಹ ಕೇಳುವಂತಹ ರಿಜಿಸ್ಟ್ರಾರ್ ಒಳ್ಳೆಯ ಜನ ಸಿಕ್ಕಿದ್ದಾರೆ. ಇವರ ಗುರುಗಳು ಅವರು, ಅವರ ಗುರುಗಳು ಇವರು. ಶ್ರೀಮಾನ್ ನಾಡಗೌಡರು ಮುಖ್ಯಮಂತ್ರಿಯವರ ಸ್ನೇಹಿತರು. ಅವರು ನನಗೂ ಸ್ನೇಹಿತರು. ಅವರು ಅಧಿಕಾರವನ್ನು ಇಂಥ ಸಂಸ್ಥೆಗಳಿಗಾಗಿ ಉಪಯೋಗಿಸುತ್ತಿದ್ದಾರೆ. ಈ ದೃಷ್ಟಿಯಿಂದ ಹೇಳುತ್ತಿದ್ದೇನೆ. ಈಗಲಾದರೂ ಆಲೋಚನೆ ಮಾಡಿ, ಬಿ.ಎ.ಎ. ಸಂಸ್ಥೆಗೆ ಎಷ್ಟು ಹಣ ಇವರು ವಸೂಲು ಮಾಡಿದ್ದಾರೆ? ಇವರು ಪಕ್ಷಪಾತವಿಲ್ಲವೆಂದು ಹೇಳುತ್ತಿದ್ದಾರೆ. ನಾನು ಇವರನ್ನು ಟೆಸ್ಟ್ ಮಾಡುವುದಕ್ಕೋಸ್ಕರ, ನಾನು ಮಾಡಿದಂತಹ ಗದಗಿನ ಎ.ಪಿ.ಎಂ.ಸಿ. ಸಂಸ್ಥೆಗೆ, ಬಾಕಿಯವರಿಗೆ ಕೊಟ್ಟಂತೆ ಸಹಾಯ ಧನ ಕೊಡಿ, ಎಂದು ಕೇಳಿದರೆ, ಅದಕ್ಕೆ ಹಣ ಕೊಡುವುದಕ್ಕಾಗುವುದಿಲ್ಲ, ನನಗೆ ಕೊಡುವುದಕ್ಕೆ ಪ್ರೊವಿಜನ್ ಇಲ್ಲವೆಂದು ಹೇಳಿದರು. ಅವರಿಗೆ ಕಾನೂನಿನ ಪ್ರೊವಿಜನ್ ಇದೆ, ನನಗೆ ಮಾತ್ರ ಕೊಡುವುದಕ್ಕೆ ಪ್ರೊವಿಜನ್ ಇಲ್ಲವೆಂದು ಹೇಳುವುದು ಇದು ಯಾವ ನ್ಯಾಯ, ಸ್ವಾಮಿ?

ಬಾಗಲಕೋಟೆ ಬಸವೇಶ್ವರ ವಿದ್ಯಾವರ್ಧಕ ಸಂಸ್ಥೆಗೆ ಹಣ ಸಹಾಯ ಮಾಡಿ ಬೇರೆ ಸಂಸ್ಥೆಗೆ ಏತಕ್ಕೆ ಮಾಡಲಿಲ್ಲ? ಈ ರೀತಿಯಾಗಿ ಸಹಕಾರ ಮಂತ್ರಿಗಳಾದ ಶ್ರೀಮಾನ್ ಪಿ.ಎಂ. ನಾಡಗೌಡರು ಮಾಡಿರತಕ್ಕ ಪ್ರವಾದಗಳು ಬಹಳ ಇವೆ. ಸಮಯದ ಅಭಾವ ಇರುವುದರಿಂದ ಬಾಕಿ ವಿಷಯಗಳನ್ನು ಹೇಳುವುದಕ್ಕೆ ಅವಕಾಶವಿಲ್ಲದಂತಾಗಿದೆ. ಒಂದೇ ಮಾತಿನಲ್ಲಿ ಹೇಳುವುದಾದರೆ ಶ್ರೀಮಾನ್ ವೀರೇಂದ್ರ ಪಾಟೀಲರು ಇನ್ನೂ ತರುಣರು. ಅವರು ಈ ಮಂತ್ರಿಗಳ ಅಥವಾ ಯಾರದೇ ಮಾತನ್ನು ಕೇಳಬಾರದು. ಅವರ ವಿಚಾರದಲ್ಲಿ ಈಗ ಏನು ಒಂದು ಒಳ್ಳೆಯ ಭಾವನೆ ಇದೆ ಅದಕ್ಕೆ ಕಳಂಕ ತರುವಂತಹ ಕಾರ್ಯ ಆಗಬಾರದು. ನಮ್ಮ ಭಾಗದಲ್ಲಿ ಆಗಬೇಕಾಗಿರತಕ್ಕ ಕೆಲಸ ಕಾರ್ಯಗಳ ಬಗ್ಗೆ ಮಾನ್ಯ ಮುಖ್ಯ ಮಂತ್ರಿಗಳು ಏನು ಆಶ್ವಾಸನೆಯನ್ನು ಕೊಟ್ಟಿದ್ದಾರೆಯೋ ಅದರ ಬಗ್ಗೆ ಆದಷ್ಟು ಬೇಗ ಆರ್ಡರ್ ಮಾಡಿ ಆ ಕೆಲಸಗಳನ್ನು ಮಾಡಿಕೊಡಬೇಕು. ಶ್ರೀಮಾನ್ ವೀರೇಂದ್ರಪಾಟೀಲರು ನುಡಿದಂತೆ ನಡೆಯುತ್ತಾರೆ ಎನ್ನುವ ಮಾತನ್ನು ಉಳಿಸಿಕೊಳ್ಳಬೇಕೆಂದು ನಾನು ವಿನಂತಿ ಮಾಡಿಕೊಳ್ಳುತ್ತೇನೆ.

ಪೊಲೀಸರ ಬಗ್ಗೆ ಹೇಳಬೇಕಾಗಿದ್ದರೆ ಮೊನ್ನೆ ಒಬ್ಬ ಹರಿಜನರು ಮರಣ ಹೊಂದಿದ ವಿಷಯದಲ್ಲಿ ಅನೇಕ ಸ್ನೇಹಿತರು ಪ್ರಶ್ನೆಗಳನ್ನು ಹಾಕಿದ್ದಾರೆ. ಅಷ್ಟೇ ಅಲ್ಲ. ಒಂದು ಸಣ್ಣ ಮಾತನ್ನು ನನ್ನ ಮಿತ್ರರಾದ ತರುಣ ಒಳಾಡಳಿತ ಉಪಮಂತ್ರಿಗಳ ಗಮನಕ್ಕೆ ತರುತ್ತೇನೆ. ಪೊಲೀಸಿನವರಲ್ಲಿ ಹೊಡೆಯುವಂಥಾ ಹವ್ಯಾಸ ಬಹಳ ಜಾಸ್ತಿಯಾಗಿದೆ. ಇವೊತ್ತಿನ ದಿವಸ ದೊಡ್ಡವರು ಯಾರು ಏನೇ ತಪ್ಪು ಮಾಡಿದರೂ ಅದು ಲೆಕ್ಕಕ್ಕೆ ಬರುವುದಿಲ್ಲ. ಆದರೆ ನಿರಪರಾಧಿಗಳು ಶಿಕ್ಷೆಗೆ ಗುರಿಯಾಗುತ್ತಾರೆ. ಪೊಲೀಸ್‌ನವರು ಅಧಿಕಾರದ ದರ್ಪದಿಂದ ನಿರಪರಾಧಿಗಳಾದಂತಹ ಸಜ್ಜನರನ್ನು ಹಿಂಸೆ ಮಾಡುವುದಕ್ಕೆ ಪ್ರಯತ್ನ ಮಾಡುತ್ತಿದ್ದಾರೆ ಇದು ಸರಿಯಲ್ಲ. ಪೊಲೀಸಿನವರು ಉಪಯೋಗಮಾಡುವ ಆಕ್ಟ್ ಏನೋ ಒಳ್ಳೆಯದಿದೆ. ಆದರೆ ಕಾನೂನು ಮೀರಿದ ವರ್ತನೆಯನ್ನು ನಿರಪರಾಧಿಗಳ ಮೇಲೆ ತೋರಿಸಬಾರದು. ಇಂಥ ಕೆಲವು ಆಡಳಿತದಲ್ಲಿ ಅಭಾವ ಇರುವಂತಹ ವಿಷಯಗಳನ್ನು ಮಾನ್ಯ ಮಂತ್ರಿಗಳು ಸರ್ಕ್ಯುಲರ್ ಮೂಲಕ ಪೊಲೀಸಿನವರಿಗೆ ತಿಳಿಸಬೇಕು ಎಂದು ಹೇಳಿ ಈ ಇಲಾಖೆಯ ಬಗ್ಗೆ ಡಿಮ್ಯಾಂಡ್ ಚರ್ಚೆಗೆ ಬಂದಾಗ ವಿವರಣೆಯನ್ನು ಹೇಳುತ್ತೇನೆ. ಇಷ್ಟು ಹೇಳಿ ನಾನು ನನ್ನ ಮಾತನ್ನು ಮುಗಿಸುತ್ತೇನೆ.

# ಸಹಕಾರ ಸಂಘಗಳ ಷೇರುಗಳ ಸಾಲದ ಬಗ್ಗೆ

(ಅರ್ಧ ಘಂಟೆ ಕಾಲದ ಚರ್ಚೆ)

ಮಾನ್ಯ ಸಭಾಪತಿಗಳೇ ರೂಲ್ 49ರ ಪ್ರಕಾರ 495ನೇ ಚುಕ್ಕೆ ಗುರುತಿನ ಪ್ರಶ್ನೆಯ ಬಗ್ಗೆ ಚರ್ಚೆ ಪ್ರಾರಂಭ ಮಾಡುವುದಕ್ಕೆ ಒಂದು ರೀತಿಯಿಂದ ಸಂತೋಷವಾದರೆ ಇನ್ನೊಂದು ರೀತಿಯಿಂದ ವ್ಯಸನವಾಗುತ್ತದೆ. ನಾನು ಆ ದಿವಸ ಪ್ರಶ್ನೆಗಳನ್ನು ಕೇಳುವಾಗ ಇನ್ನೊಂದು ಎರಡು ನಿಮಿಷದವರೆಗೆ ಮಾನ್ಯ ಸಹಕಾರ ಸಚಿವರು ಸಮರ್ಪಕವಾದ ಉತ್ತರವನ್ನು ಕೊಟ್ಟಿದ್ದರೆ ನಾನು ಈ ದಿವಸ ಅರ್ಧ ಗಂಟೆಕಾಲ ಚರ್ಚೆ ಮಾಡುವ ಸಂದರ್ಭ ಬರುತ್ತಿರಲಿಲ್ಲ. ಅದು ಏನೇ ಇರಲಿ, ರಾಜ್ಯದ ಹಿತದೃಷ್ಟಿಯಿಂದ, ಸಹಕಾರ ಚಳುವಳಿಯ ಹಿತದೃಷ್ಟಿಯಿಂದ ಸರ್ಕಾರದ ಪರವಾಗಿ ಷೇರು ಹಣವನ್ನು ತೊಡಗಿಸಿರುವ ಸಂಸ್ಥೆಗಳ ಬಗ್ಗೆ ವಿವೇಚನೆ ಮಾಡುವುದು ಉಚಿತ ಎಂದು ಈ ಚರ್ಚೆಗೆ ಅವಕಾಶವನ್ನು ಕೇಳಿದ್ದೆ. ಅವತ್ತಿನದಿವಸ ಮಾನ್ಯ ಮಂತ್ರಿಗಳು ಉತ್ತರ ಕೊಡುವಾಗ ಮಾನ್ಯ ಸದಸ್ಯರಿಗೆ ಉತ್ತರ ಓದುವುದಕ್ಕೆ ಬರುತ್ತದೋ ಇಲ್ಲವೋ ಎಂದು ಕೇಳಿದರು. ನಾನು ಇಂಗ್ಲೀಷ್‌ನಲ್ಲಿ ಅಷ್ಟೊಂದು ಪಾರಂಗತನಾಗಿಲ್ಲ ಕನ್ನಡದಲ್ಲಿ ಪ್ರಿಂಟ್ ಆಗಿರುವ ಉತ್ತರವನ್ನು ಓದಿದ್ದೇನೆ. ನನ್ನ ಮೊದಲನೆಯ ಪ್ರಶ್ನೆ ಎಂದರೆ:

"ಸಹಕಾರ ಸಂಸ್ಥೆಗಳು ತೆಗೆದುಕೊಂಡಿರುವ ಹಿಂದಿರುಗಿಸುವ ಷೇರು ಹಣ ಹಾಗೂ ಸಾಲಗಳನ್ನು ವಾಪಸ್ಸು ಮಾಡುವುದನ್ನು ಸರ್ಕಾರದವರು ಪ್ರೋತ್ಸಾಹಿಸುವರೇ..." ಎರಡನೆಯ ಪ್ರಶ್ನೆ ಎಂದರೆ:

"ಹಾಗಿದ್ದಲ್ಲಿ ಈ ಬಗ್ಗೆ ಸರ್ಕಾರದವರು ಕೈಕೊಂಡಿರುವ ಕ್ರಮವೇನು" ಎಂಬುದಾಗಿ, ಈ ರೀತಿ ಕೇಳಿದ್ದಕ್ಕೆ ಮಾನ್ಯ ಸಚಿವರು (ಅ) ಮತ್ತು (ಆ) ಪ್ರಶ್ನೆಗಳಿಗೆ ಉತ್ತರ ಕೊಡುತ್ತಾ ಈ ರೀತಿ ಹೇಳಿದ್ದಾರೆ. "ಹೌದು ಸಾಮಾನ್ಯವಾಗಿ ಷೇರು ಹಣವನ್ನು ಹಿಂದಿರುಗಿಸಬೇಕಾಗಿ ಬಂದಂತೆಲ್ಲಾ ವಾಪಸ್ಸು ಮಾಡಲಾಗುವುದು" ಎಂದು ಹೇಳಿದ್ದಾರೆ. ಹಣವನ್ನು ಹಿಂದಿರುಗಿಸುವವರು ಯಾರು? ವಾಪಸ್ ಮಾಡುವವರು ಯಾರು? ಸರ್ಕಾರದವರು ಅಲ್ಲ, ವಾಪಸ್ ಮಾಡುವವರು ಸೊಸೈಟಿಯವರು. ಇವತ್ತಿನ ದಿವಸ ಮಾನ್ಯ ಸಹಕಾರ ಸಚಿವರು ಅನೇಕ ಶಿಕ್ಷಣ ಸಂಸ್ಥೆಗಳಲ್ಲಿ ಅಧ್ಯಕ್ಷರಾಗಿ ಕೆಲಸ ಮಾಡಿದ್ದಾರೆ. ಯುನಿವರ್ಸಿಟಿಯಲ್ಲಿ ಬಹಳ ದಿವಸ ಇದ್ದವರು; ಒಳ್ಳೆಯ ಧುರೀಣರು ಮತ್ತು ಒಳ್ಳೆಯ ಅನುಭವ ಉಳ್ಳವರಾಗಿದ್ದಾರೆ. ಆದರೆ ನಾನು ಮೂರ್ಖನಾಗಿದ್ದೇನೆ. ನನ್ನ ದಾರ್ಢ್ಯವನ್ನು ತೋರಿಸುವುದಕ್ಕೆ ಹೋಗುವುದಿಲ್ಲ. ನನ್ನ ಪ್ರಶ್ನೆಗಳಿಗೆ ಉತ್ತರ ಕೊಟ್ಟಿರುವುದನ್ನು ನೋಡಿದಾಗ ಅದರ ಹಿನ್ನೆಲೆಯಲ್ಲಿ ಏನು ಇರಬಹುದು ಎಂಬುದು ತೋರುತ್ತದೆ. ಯಾವ ರೀತಿ ಉತ್ತರವನ್ನು ಮುಚ್ಚಿ ಇಟ್ಟಿದ್ದಾರೆ ಎಂಬುದರ ಅರಿವಾಗುತ್ತದೆ. ಸಹಕಾರ ಸಂಸ್ಥೆಗಳು ತೆಗೆದುಕೊಂಡಿರುವ ಹಿಂದಿರುಗಿಸುವ ಷೇರು ಹಣ ಹಾಗೂ ಸಾಲಗಳನ್ನು ವಾಪಸ್ಸು ಮಾಡುವ ಬಗ್ಗೆ ಸರ್ಕಾರದವರು ಯಾವ ರೀತಿ ಪ್ರೋತ್ಸಾಹ ಕೊಟ್ಟಿದ್ದಾರೆ ಎಂದು ಕೇಳಿದ್ದಕ್ಕೆ ಈ ರೀತಿಯ ಹಾರಿಕೆಯ ಉತ್ತರವನ್ನು ಕೊಟ್ಟಿದ್ದಾರೆ. ಸದಸ್ಯರು ತಮ್ಮ ಹಕ್ಕಿನ ಪ್ರಕಾರ ಕೆಲವು ಸಮಸ್ಯೆಗಳ ಬಗ್ಗೆ ಪ್ರಶ್ನೆಗಳನ್ನು ಕೇಳಿದಾಗ ಮಂತ್ರಿಗಳು ಈ ರೀತಿ ಹಾರಿಕೆಯ ಉತ್ತರ ಕೊಟ್ಟು ತಮ್ಮ ಹೊಣೆಗಾರಿಕೆಯನ್ನು

---

ವಿಸನದಿ : 12-3-1969

ತಪ್ಪಿಸಿಕೊಳ್ಳುತ್ತಿರುವುದನ್ನು ನೋಡಿದರೆ ಮುಂದೆ ಅವರೇ ತಮ್ಮ ಹೊಣೆಗೇಡಿತನಕ್ಕೆ ತಲೆಬಾಗಬೇಕಾಗುತ್ತದೆ. ಅವರ ಹೃದಯದಲ್ಲಿ ಕಲ್ಮಶ ಎಂಬುದು ತುಂಬಿದೆ. ಉತ್ತರವನ್ನು ಬಚ್ಚಿಡುವುದು ಅಧಿಕಾರವನ್ನು ದುರುಪಯೋಗ ಮಾಡಿಕೊಂಡಂತಾಗುತ್ತದೆ. ಯಾರು ನಿಮಗೆ ಬೇಡದವರು ಸಹಕಾರ ಸಂಘಗಳನ್ನು ನಡೆಸುತ್ತಿದ್ದಾರೋ ಅವರು ಎಷ್ಟೇ ಚೆನ್ನಾಗಿ ನಡೆಸಿಕೊಂಡು ಹೋಗುತ್ತಿದ್ದರೂ ಕೂಡ ನಿಮ್ಮ ಅಧಿಕಾರಿಗಳ ಮುಖಾಂತರ ಆ ಸಹಕಾರ ಸಂಘಗಳನ್ನು ನಾಶಪಡಿಸುವುದಕ್ಕೆ ಪ್ರಯತ್ನ ಮಾಡುತ್ತಿದ್ದೀರಿ. ಅದೇ ನಿಮಗೆ ಬೇಕಾದವರನ್ನು ಕೆಲವು ಸಹಕಾರ ಸಂಘಗಳಲ್ಲಿ ಇಟ್ಟು ಅವರಿಗೆ ಅನುಕೂಲಪಡಿಸಬೇಕೆಂದು ಸರ್ಕಾರದಿಂದ ಅಂತಹ ಸಹಕಾರ ಸಂಘಗಳಿಗೆ ಲಕ್ಷಾಂತರ ರೂಪಾಯಿಗಳನ್ನು ಕೊಡಿಸಿ ಅವರು ದುರ್ವಿನಿಯೋಗ ಮಾಡಿಕೊಳ್ಳುವುದಕ್ಕೆ ಅವಕಾಶ ಮಾಡಿಕೊಡುತ್ತಿರುವುದು ಸರಿಯೇ ಎಂದು ನಾನು ಕೇಳಬೇಕಾಗಿದೆ. ಸಹಕಾರ ಸಂಸ್ಥೆಗಳು ತೆಗೆದುಕೊಂಡಿರುವ ಹಿಂದಿರುಗಿಸುವ ಷೇರು ಹಣ ಹಾಗೂ ಸಾಲಗಳ ಬಗ್ಗೆ ಒಟ್ಟು ಎಷ್ಟು ಹಣ ವಾಪಸ್ ಬಂದಿದೆ ಎಂದು ಆ ದಿನ ಪ್ರಶ್ನೆ ಕೇಳಿದಾಗ ಒಂದು ಲಕ್ಷ ರೂಪಾಯಿಗಳು ವಾಪಸ್ ಬಂದಿದೆ ಎಂದು ಉತ್ತರ ಕೊಟ್ಟರು. ನಾನು ಸಹ ಒಂದು ಸಹಕಾರ ಸಂಘಕ್ಕೆ ಮೇನೇಜಿಂಗ್ ಡೈರೆಕ್ಟರ್ ಆಗಿರುವುದರಿಂದ ಸವಿನಯಪೂರ್ವಕವಾಗಿ ಸರ್ಕಾರದ ಗಮನಕ್ಕೆ ಒಂದು ವಿಚಾರವನ್ನು ತರಬೇಕೆಂದರೆ, ನಾನು ಡೈರೆಕ್ಟರ್ ಆಗಿರುವ ಒಂದೇ ಒಂದು ಸಂಘದಿಂದ 2 ಲಕ್ಷ 80 ಸಾವಿರ ರೂಪಾಯಿಗಳನ್ನು ವಾಪಸ್ ಮಾಡಲಾಗಿದೆ. ಈ ಹಣವನ್ನು ವಾಪಸ್ ಮಾಡುವಾಗ ಅಧಿಕಾರಿಗಳು ಕೆಲವು ಆತಂಕಗಳನ್ನು ಒಡ್ಡಿದರು. ಹಣ ತುಂಬಲಿಕ್ಕೆ ಹೋದಾಗ ಯಾವ ಹೆಡ್‌ಗೆ ತುಂಬಬೇಕೆಂದು ಅಧಿಕಾರಿಗಳನ್ನು ಕೇಳಿದಾಗ ಅವರು ಸರಿಯಾದ ಉತ್ತರವನ್ನು ಕೊಡಲಿಲ್ಲ. ಸರಿಯಾದ ಉತ್ತರವನ್ನು ಕೊಡಬಾರದೆಂದು ಮಾನ್ಯ ಸಹಕಾರ ಮಂತ್ರಿಯವರೇ ಫೋನ್ ಮೂಲಕ ಇಲ್ಲಿಯ ಅಧಿಕಾರಿಗಳಿಗೆ ತಿಳಿಸಿದ್ದರೆಂದು ತಿಳಿದುಬಂತು. ಆ ಕಾರಣದಿಂದ ಅಲ್ಲಿಯ ಅಧಿಕಾರಿಗಳು ನನ್ನಲ್ಲಿ ಸರಿಯಾಗಿ ಮಾತನಾಡದೆ ಯಾವ ಹೆಡ್‌ಗೆ ತುಂಬಬೇಕೆಂಬ ಬಗ್ಗೆ ಸರಿಯಾದ ಉತ್ತರ ಕೊಡಲಿಲ್ಲ. ಇದೇ ರೀತಿ ಅನೇಕ ಅಕ್ರಮ ಕಾರ್ಯಗಳು ಈ ಸೊಸೈಟಿಯ ಬಗ್ಗೆ ನಡೆದಿವೆ. ಈ ಸಹಕಾರ ಮಂತ್ರಿಗಳು ನಾನು ಆ ಸೊಸೈಟಿಯಲ್ಲಿರುವುದರಿಂದಲೇ ಈ ರೀತಿ ಮಾಡುತ್ತಿದ್ದಾರೆಂದು ಗೊತ್ತಾಗುತ್ತಿದೆ. ಮಂತ್ರಿಗಳೇ ಈ ರೀತಿ ವರ್ತನೆ ಮಾಡಿದರೆ ಹೇಗೆ ಎಂದು ಕೇಳುತ್ತೇನೆ. ಡೆಪ್ಯುಟಿ ರಿಜಿಸ್ಟ್ರಾರ್ ಅವರನ್ನು ಯಾವ ಹೆಡ್‌ಗೆ ತುಂಬಬೇಕೆಂದು ಕೇಳಿದಾಗ ಅವರೂ ಸಹ ಹೇಳಲಿಲ್ಲ. ನಾನು ಎಂ.ಎಲ್.ಎ. ಆಗಿದ್ದರೂ ಕೂಡ ನನ್ನ ಬಗ್ಗೆ ಅಲ್ಲಿಯ ಅಧಿಕಾರಿಗಳು ಈ ರೀತಿ ವರ್ತನೆ ಮಾಡಿದ್ದಾರೆ. ನನ್ನ ಹಣೆಯಬರಹವೇ ಇಷ್ಟಾದ ಮೇಲೆ ಸಾಮಾನ್ಯರ ಗತಿ ಏನು? ಸಾಮಾನ್ಯ ಜನರು ಮರ್ಯಾದೆಯಿಂದ ಸಹಕಾರಸಂಘಗಳನ್ನು ನಡೆಸುವುದಕ್ಕೆ ಸಾಧ್ಯವೇ ಎಂದು ಮಾನ್ಯ ಸಹಕಾರ ಸಚಿವರಾದ ನಾಡಗೌಡರನ್ನು ಕೇಳಬೇಕಾಗಿದೆ. ಅಲ್ಲಿಯ ಅಧಿಕಾರಿಗಳು ಯಾವ ಹೆಡ್‌ಗೆ ತುಂಬಬೇಕೆಂದು ಕೇಳಿದಾಗ ಅವರು ಹೇಳಲಿಲ್ಲ. ನಂತರ 2 ಲಕ್ಷ 80 ಸಾವಿರ ರೂಪಾಯಿಗಳ ನಗದು ಕ್ಯಾಷನ್ನು ಕೈಯಲ್ಲಿ ಹಿಡಿದುಕೊಂಡು ಬೆಂಗಳೂರಿಗೆ ಬಂದು ಇಲ್ಲಿಯ ಸಬ್‌ಟ್ರೆಜರಿಯಲ್ಲಿ ತುಂಬಿದೆ. ನಾನು ಆ ಸೊಸೈಟಿಯ ಮೇನೇಜಿಂಗ್ ಡೈರೆಕ್ಟರ್ ಆಗಿದ್ದಕ್ಕೆ ಈ ರೀತಿ ತೊಂದರೆಯಾಯಿತು. ಇಲ್ಲದಿದ್ದರೆ ಆಗುತ್ತಿರಲಿಲ್ಲ. ಇದರಲ್ಲಿ ಶ್ರೀಮಾನ್ ನಾಡಗೌಡರ ಕೈವಾಡ ಇದೆ ಎಂದು ಭಾಸವಾಗುತ್ತದೆ. ಇಲ್ಲಿ ಕೆ.ಹೆಚ್. ಪಾಟೀಲರು ಮ್ಯಾನೇಜಿಂಗ್ ಡೈರೆಕ್ಟರು ಆಗಿದ್ದಾರೆ. ಇದರಿಂದ

ಮಾನ್ಯ ಶ್ರೀ ನಾಡಗೌಡರು ಸಹಕಾರಿ ಇಲಾಖೆಯ ಅಧಿಕಾರಿಗಳಿಗೆ ಒಂದು ರೀತಿಯ ಆದೇಶ ಕೊಟ್ಟು 2 ಲಕ್ಷ 80 ಸಾವಿರ ರೂಪಾಯಿಗಳಷ್ಟು ಹಣವನ್ನು ಟ್ರೆಜರಿಗೆ ತುಂಬಲು ಬಂದಾಗ ಅದಕ್ಕೆ ಅವಕಾಶ ಕೊಡಬಾರದು ಎಂದು ಹೇಳಿದರು. ಇದರ ಬಗ್ಗೆ ನಾನು ಪ್ರಶ್ನೆ ಕೇಳಿದರೆ ಇಲ್ಲಿ ಸರಿಯಾದ ಉತ್ತರವನ್ನೂ ಕೊಡಲಿಲ್ಲ. ಅಂದು ಇಲ್ಲಿ ನನ್ನ ಪ್ರಶ್ನೆಯ ಸಮಯ ಮುಗಿದಿದ್ದರಿಂದ ನಾನು ಇಂತಹ ಚರ್ಚೆ ಮಾಡಬೇಕಾದ ಪ್ರಸಂಗ ಬಂತು. ನಾನು ಅಂದು ಕೂಡ ಗದಗ್ ಕೋ ಆಪರೇಟೀವ್ ಸೊಸೈಟಿ ಬಗ್ಗೆ ಇಲ್ಲಿಂದ ವಾಪಸ್ಸು ಕೊಡುವ ಹಣ ಸುಮಾರು ಎರಡು ಲಕ್ಷ ಎಂಭತ್ತು ಸಾವಿರವನ್ನು ಖಜಾನೆಯಲ್ಲಿ ತುಂಬಲು ಪರ್ಮಿಷನ್ ಕೇಳಿದರೆ ಸಹಕಾರ ಇಲಾಖೆಯ ಅಧಿಕಾರಿಗಳು ಅಲ್ಲಿ ಇದ್ದರು. ಜಾಯಿಂಟ್ ರಿಜಿಸ್ಟ್ರಾರ್ ಕೂಡ ಇದಕ್ಕೆ ಅವಕಾಶ ಕೊಡಲಿಲ್ಲ. ನಾನು ಇಷ್ಟು ರೊಕ್ಕವನ್ನು ಬೆಂಗಳೂರಿಗೆ ತಂದು ರಿಜಿಸ್ಟ್ರಾರ್‌ರವರ ಪರ್ಮಿಷನ್ ತೆಗೆದುಕೊಂಡು ತುಂಬಬೇಕಾಯಿತು. ರಿಜಿಸ್ಟ್ರಾರ್ ಅವರಿಗೆ ಶ್ರೀಮಾನ್ ನಾಡಗೌಡರು ಹೇಳಿದರೂ ಅವರು ಕಾಯದೆ ಪ್ರಕಾರ ನಮಗೆ ಅವಕಾಶ ಕೊಟ್ಟು ಇಷ್ಟು ರೊಕ್ಕವನ್ನು ತುಂಬಲು ಆದೇಶ ಕೊಟ್ಟು ಸಹಾಯ ಮಾಡಿದರು. ಮೈಸೂರು ರಾಜ್ಯದಲ್ಲಿ ಸಹಕಾರ ಖಾತೆ ಇದೆಯೇ ಇಲ್ಲವೇ ಎನ್ನುವ ಅನುಮಾನವೂ ನಮಗೆ ಬರುತ್ತಿದೆ. ಸರಕಾರ ಕ್ರಮಬದ್ಧವಾಗಿ ಯಾವ ಸಹಕಾರ ಸಂಘಗಳಲ್ಲೂ ಮೆಂಬರ್‌ಷಿಪ್ ಪಡೆದಿಲ್ಲ. ನಾನು ಷೇರು ಹಣವನ್ನು ವಾಪಸ್ಸು ಮಾಡಲು ಸಹಕಾರ ಖಾತೆಯ ಇಲಾಖೆಯ ಅಧಿಕಾರಿಗಳನ್ನು ಅಪ್ಪಣೆ ಕೇಳಿದಾಗ ಅದನ್ನು ನಿರಾಕರಿಸುಮಂತೆ ಮಾನ್ಯ ಶ್ರೀ ನಾಡಗೌಡರು ಸೂಚನೆ ಕೊಟ್ಟಿದ್ದಾರೆ ಎನ್ನುವುದು ತಿಳಿಯಿತು. ಇದಕ್ಕೆ ಕಾರಣ ವಿರೋಧ ಪಕ್ಷದ ಸದಸ್ಯರು ಒಂದು ಸೊಸೈಟಿಯಲ್ಲಿ ಮ್ಯಾನೇಜಿಂಗ್ ಡೈರೆಕ್ಟರ್ ಇದ್ದಾರೆ. ಇವರಿರುವ ಕಡೆ ಕೆಲಸಗಳು ಚೆನ್ನಾಗಿ ನಡೆಯುತ್ತಿದ್ದರೂ ಏನಾದರೂ ಅಡ್ಡಿ ತಡೆಗಳನ್ನು ತಂದುಕಷ್ಟಕ್ಕೆ ಸಿಕ್ಕಿಸಬೇಕು ಎನ್ನುವ ಉದ್ದೇಶದಿಂದ ಇವರು ಇಷ್ಟೆಲ್ಲಾ ತೊಂದರೆಗಳನ್ನು ನಮಗೆ ಕೊಡುತ್ತಿದ್ದಾರೆ ಎನ್ನುವುದು ಇದರಿಂದ ಸ್ಪಷ್ಟವಾಗಿ ಗೊತ್ತಾಗುತ್ತದೆ. ಸರಕಾರ ಯಾವ ಸಂಘಕ್ಕೂ ಮೆಂಬರಾಗಿಲ್ಲ ಗದಗ್ ಸಹಕಾರ ಸಂಘದವರು ಸರಕಾರ ಕೊಟ್ಟಿದ್ದ ಷೇರು ಹಣವನ್ನು ವಾಪಸ್ಸು ಮಾಡುತ್ತಿದ್ದಾರೆ, ಇದನ್ನು ಕಟ್ಟಲು ಅನುಮತಿ ಬೇಡಿದರೆ ಇಲ್ಲಿನ ಸಹಕಾರಿ ಅಧಿಕಾರಿಗಳು ಅವಕಾಶ ಕೊಡಲಿಲ್ಲ. ನನಗೆ ಕೆ.ಹೆಚ್. ಪಾಟೀಲ್‌ರವರಿಗೆ ರಿಜಿಸ್ಟ್ರಾರ್‌ರವರು ಬರೆದ ಪತ್ರ ಈ ರೀತಿ ಇದೆ.

ಸರಕಾರದ ಶೇರುಗಳ ಮೊತ್ತದ ಬಿಡುಗಡೆಯಾಗಿ ರೂ. 1 ಲಕ್ಷಕ್ಕೂ ಅಧಿಕ ಶೇರು ಬಂಡವಾಳ ಪಡೆಯಲು ನೀವು ಪ್ರಯತ್ನಿಸುತ್ತಿರುವುದು ನನಗೆ ಸಂತಸ ತಂದಿದೆ. ನೀವು ಅಧಿಕ ಶೇರು ಬಂಡವಾಳ ಶೀಘ್ರ ವಸೂಲು ಮಾಡಿ ಸರಕಾರದ ಶೇರು ಬಂಡವಾಳದ ಹಿಂದಿರುಗಿಸುವಿಕೆಗಾಗಿ ಪ್ರಯತ್ನಿಸಬಹುದು.

26-12-1967ರಲ್ಲಿ ಬಂದ ಪತ್ರ ಇದು. ಆಗ ನಿಜಲಿಂಗಪ್ಪ ಮಂತ್ರಿಮಂಡಲದ ಸರಕಾರ ಇತ್ತು. ಹೀಗಿರುವಾಗ ನಮ್ಮ ಜನನಾಯಕರ ಮೇಲೆ ಹೈಕೋರ್ಟಿನಲ್ಲಿ ಒಂದು ಕೇಸು ಬಂತು. ಅದರಲ್ಲೂ ಕೂಡ ನಮಗೆ ಅನುಕೂಲವಾಗುತ್ತದೆ ಎಂದು ಡೆಪ್ಯುಟಿ ಕಮಿಷನರ ಕಡೆಗೆ ಸೂಚನೆ ಕೊಟ್ಟು ಏನಾದರೂ ಮಾಡಿ ನಮ್ಮನ್ನು ತಡೆಯಬೇಕೆಂದು ಅವರ ಮೂಲಕ ಒಂದು ರೀತಿಯಾದ ಧಮಕಿ ಕೊಡುವಂತೆ ಒಂದು ನೋಟಿಫಿಕೇಷನ್ ಹೊರಡಿಸಿದರು.

ಈ ನೋಟಿಫಿಕೇಶನ್ ಈ ಕೆಳಗಿನಂತಿದೆ.

"ಸಂಘದ ಶೇರು ಬಂಡವಾಳದ ಶುಲ್ಕದ ರೂಪದಲ್ಲಿ ಮತ್ತು ಸಾಲದ ರೂಪದಲ್ಲಿ ಎರಡು ಲಕ್ಷ ರೂಪಾಯಿಗಳಿಗಿಂತ ಕಡಿಮೆಯಾಗದಂತೆ ಗದಗ ಕಾಟನ್ ಕೋ ಓಪರೇಟಿವ್ ಸೇಲ್ಸ್ ಸೋಸಾಯಿಟಿ, ಧಾರವಾಡ ಇದಕ್ಕೆ ನೀಡಿದೆ.".

ನಾನು ಹೈಕೋರ್ಟಿನಲ್ಲಿ ಕೇಸು ದಾಖಲು ಮಾಡಿ ಇದರಲ್ಲಿ ಈ ವಿಚಾರವಾಗಿ ಒಂದು ಅಫಿಡಾವಿಟ್ ಕೂಡ ಕೊಟ್ಟು ಇಷ್ಟು ಹಣವನ್ನು ಕಾಯಿದೆ ಪ್ರಕಾರ ವಾಪಸ್ಸು ಮಾಡುತ್ತಿದ್ದರೂ ಇದಕ್ಕೆ ಅವಕಾಶ ಕೊಡುತ್ತಿಲ್ಲ ಎನ್ನುವುದನ್ನು ಅದರಲ್ಲಿ ತಿಳಿಸಿದ್ದೇನೆ. ಇಂತಹ ಒಂದು ಸೊಸೈಟಿಯಲ್ಲಿ ಮಾತ್ರ ಹೀಗೆ ಅವರೇ ಮುಂದೆಬಂದು ಹಿಂತಿರುಗಿಸಿ ಕೊಡುತ್ತಿರುವಾಗ ಇಲ್ಲಿನ ಅಧಿಕಾರಿಗಳು ಒಂದು ರೀತಿಯಾಗಿ ಜಬರ್ದಸ್ತಿನ ಧೋರಣೆಯಿಂದ ವರ್ತನೆ ಮಾಡುತ್ತಿದ್ದಾರೆ. ಈ ರೀತಿ ನಾವು ವಿರೋಧ ಪಕ್ಷದಲ್ಲಿದ್ದೇವೆ ಎಂದು ನೀವು ಕಾಡಲಿಕ್ಕೆ ಇರಬಹುದು. ಆದರೆ ನಮಗೆ ಪರಮಾತ್ಮನ ಅನುಗ್ರಹ ಇದೆ. ನಮ್ಮ ಮುಂದೆ ಶ್ರೀಮಾನ್ ನಾಡಗೌಡರ ಪ್ರಭಾವ ಬೆಳೆಯುವುದಿಲ್ಲ.

ನಮ್ಮ ಮಾನ್ಯ ಸ್ನೇಹಿತರು ಬಹಳ ಚೆನ್ನಾಗಿ ಹೇಳಿದರು. ಮೈಸೂರು ಸಹಕಾರ ಇಲಾಖೆಯ ಆಡಳಿತಕ್ಕೆ ಒಳಪಟ್ಟಿರುವುದು ಗದಗ್ ಸೊಸೈಟಿ ಎನ್ನುವುದನ್ನು ನಿಜವಾಗಿಯೂ ತಿಳಿದುಕೊಂಡಿದ್ದರೆ ಇಂತಹ ಪ್ರಶ್ನೆ ಅಪ್ರಸ್ತುತ ಎಂದು ಅವರೇ ತಿಳಿಯುತ್ತಿದ್ದರು. ಇಂತಹ ಒಂದು ಸೊಸೈಟಿಯಲ್ಲಿ ವಿರೋಧಪಕ್ಷದವರು ಇದ್ದಾರೆ ಇಲ್ಲಿ ಕೆಲಸಗಳು ಚೆನ್ನಾಗಿ ನಡೆಯುತ್ತಿವೆ ಎಂದು ಇದ್ದರೂ ಇದರ ಬಗ್ಗೆ ಯಾವ ರೀತಿಯ ನ್ಯಾಯವನ್ನು ಮಾಡುತ್ತಿಲ್ಲ ಎನ್ನುವುದನ್ನು ತೋರಿಸಲಿಕ್ಕಾಗಿ ಇಲ್ಲಿ ಹೇಳುತ್ತಿದ್ದೇನೆ. ಇಂತಹ ಒಂದು ಸಂದರ್ಭವನ್ನು ಒದಗಿಸಿಕೊಟ್ಟಿದ್ದಕ್ಕಾಗಿ ಅವರಿಗೂ ನನ್ನ ಧನ್ಯವಾದಗಳು.

ರಿಜಿಸ್ಟ್ರಾರಿಗೆ ಬರೆದ ನನ್ನ ಪತ್ರದ ಒಕ್ಕಣೆ ಇಂತಿದೆ.

> "ಸದಸ್ಯರಿಂದ ಅಧಿಕ ಶೇರು ಪಡಕೊಂಡ ಆಧಾರದಂತೆ ನಮ್ಮ ಸಂಘದ ಆರ್ಥಿಕ ಸುಬದ್ರತೆಯನ್ನು ಮನಗಂಡು ಸರಕಾರದ ಶೇರು ಭಂಡವಾಳವನ್ನು ಹಿಂದಿರುಗಿಸಲು ಅನುಮತಿ ನೀಡಿದ್ದು ನಮಗೆ ಸಂತಸ ತಂದಿದೆ".
>
> ನಮ್ಮ ಸಂಘವು ಈಗಾಗಲೇ ಶೇರು ವಸೂಲಿ ಮಾಡಬಹುದಿತ್ತು. ಜಾಯಿಂಟ್ ರಿಜಿಸ್ಟ್ರಾರ್, ಕೋ ಆಪರೇಟಿವ್ ಸೊಸೈಟಿ ಬೆಳಗಾವ್ ಮತ್ತು ಅಸಿಸ್ಟೆಂಟ್ ರಿಜಿಸ್ಟ್ರಾರ್ ಕೋ ಆಪರೇಟಿವ್ ಸೊಸೈಟಿ ಗದಗ ಬಗ್ಗೆ ನನ್ನ ಅನಿಸಿಕೆಗಳು ನಿಮಗೆ ಬೇಸರ ತಂದಿರುವ ಬಗ್ಗೆ ನೀವು ವಿಷಾದಪಡಿಸಿದ್ದೀರಿ ನಾನು ಶೀಘ್ರವಾಗಿ ಶೇರು ಬಂಡವಾಳ ಹಿಂದಿರುಗಿಸುವ ಬಗ್ಗೆ ಈ ಮೂಲಕ ತಿಳಿಯಪಡಿಸುತ್ತೇನೆ.

ಲೋಕಲ್ ಅಧಿಕಾರಿಗಳಿಗೆ ಕಾಯಿದೆ ಪ್ರಕಾರ ಷೇರು ಹಣವನ್ನು ವಾಪಸ್ಸು ತೆಗೆದುಕೊಳ್ಳುವುದಕ್ಕೆ ಅವಕಾಶ ಇದ್ದರೂ ಇಲ್ಲ ಎಂದು ಹೇಳುವುದು ಸರಿಯಲ್ಲ ಎನ್ನುವುದನ್ನು

ತೋರಿಸುವುದಕ್ಕಾಗಿ ಈ ಇಲಾಖೆಯ ಅಡ್ಮಿನಿಸ್ಟ್ರೇಷನ್ ಯಾವ ರೀತಿ ಕೆಲಸ ಮಾಡುತ್ತಿದೆ ಎನ್ನುವುದನ್ನು ಸರಕಾರಕ್ಕೆ ವಿವರವಾಗಿ ಹೇಳಲು ಇಂತಹ ಒಂದು ಅವಕಾಶವನ್ನು ಬೇಡಿ ಇಲ್ಲಿ ಹೇಳುತ್ತಿದ್ದೇನೆ. ಇದರ ಬಗ್ಗೆ ಮಾನ್ಯ ಮಂತ್ರಿಗಳಾದ ಶ್ರೀಮಾನ್ ನಾಡಗೌಡರು ಉತ್ತರವನ್ನು ಕೊಡುವಾಗ ಎಷ್ಟೆಟ್ಟು ಹಣ ಯಾವ ಯಾವ ಸಂಘಗಳಿಂದ ಕೊಟ್ಟಿದ್ದಾರೆ. ಸಂಘಗಳು ಅದನ್ನು ವಾಪಸ್ ಕೊಡುವುದಕ್ಕೆ ಯಾವ ರೀತಿಯಾದ ಉತ್ತೇಜನ ಕೊಡುತ್ತಿದ್ದೀರಿ ಎನ್ನುವುದನ್ನು ಕೇಳಿದಾಗ ಇದರ ಬಗ್ಗೆ ಒಂದು ರೀತಿಯಾದ ಸೌಜನ್ಯವನ್ನು ತೋರಿಸಿ ನ್ಯಾಯವಾದ ಉತ್ತರ ಕೊಟ್ಟಿದ್ದರೆ ನಿಮ್ಮನ್ನು ಪ್ರಶಂಸೆ ಮಾಡಬಹುದಿತ್ತು. ಆ ರೀತಿ ಉತ್ತರವನ್ನು ಕೊಡಲಿಲ್ಲ. ಮತ್ತು ಇವರಲ್ಲಿ ಅಂತಹ ಸೌಜನ್ಯತೆಯೂ ಇದೆ ಎನ್ನುವ ಆಸೆಕೂಡ ನಮಗೆ ಇಲ್ಲ. ಎರಡು ಲಕ್ಷ ಹೆಚ್ಚಾಗಿದೆ ಎಂದು ಇಲ್ಲಿನ ಕಮಿಟಿಯವರು ನಿರ್ಣಯ ಮಾಡಿ ಇದನ್ನು ಇಲ್ಲಿನ ಅಧ್ಯಕ್ಷರು ಸರಕಾರಕ್ಕೆ ಈ ರೊಕ್ಕವನ್ನು ತುಂಬಬೇಕು ಎಂದು ಬಂದರೆ ಅದಕ್ಕೆ ಅವಕಾಶ ಕೊಡದೇ ಇರುವುದು ಇದು ಯಾವ ಭಾಷೆಯಿಂದ ಕರೆಯಬೇಕೋ ನನಗೆ ಗೊತ್ತಾಗುತ್ತಿಲ್ಲ. ನಿಮ್ಮ ಹಣ ನನಗೆ ಬೇಡ ಅದನ್ನು ಇತರ ಯೋಜನೆಗಳಿಗೆ ನೀವು ಉಪಯೋಗಿಸಿಕೊಳ್ಳಬಹುದು ಎಂದು ಹೇಳುವಾಗ ನಿಮ್ಮ ಬುದ್ಧಿವಂತಿಕೆಯನ್ನು ಉಪಯೋಗಿಸಿ ಜನತೆಗೆ ಅನುಕೂಲ ಮಾಡಿಕೊಡಬೇಡವೇ? ನಿಮ್ಮ ಮೈಯಲ್ಲಿ ಬೇಕಾದ ಹಾಗೆ ಶಕ್ತಿ ಇದೆ, ನೀವು ಗಂಡನ್ನು ಹೆಣ್ಣು ಮಾಡಬಹುದು. ಹೆಣ್ಣನ್ನು ಗಂಡು ಮಾಡಬಹುದು ಮತ್ತು ಹೆಚ್ಚು ಮೇಧಾವಿಗಳು ಏನೂ ಬೇಕಾದರೂ ಮಾಡಬಹುದು ಎಂದು ಇಲ್ಲಿ ನಮ್ಮನ್ನು ಹೊಡೆಯುವುದಕ್ಕೆ ಏಕೆ ಹೋಗುತ್ತೀರಿ?

ಏನಾದರೂ ನೀವು ಮಾಡಬಲ್ಲಿರಿ, ಮಾಡುವಂಥ ಶಕ್ತಿ ಪಡೆದಿದ್ದೀರಿ, ಅಂತಹ ಹಕ್ಕನ್ನು ಪಡೆದಿದ್ದೀರಿ. ನಾನು ಒಂದು ಮಾತನ್ನು ಹೇಳುತ್ತೇನೆ. ಇವೊತ್ತು ರಾಜ್ಯದ ಹಣಕ್ಕೆ ರಕ್ಷಣೆ ಇರಬೇಕು. ಇವೊತ್ತು ಸಹಕಾರ ಚಳುವಳಿ ಅಗ್ರಸ್ಥಾನಕ್ಕೆ ಬಂದಿದೆ. ಈ ಸಹಕಾರಿ ಚಳುವಳಿ ಮೈಸೂರು ಸರ್ಕಾರದ 2 ಕೋಟಿ ಜನರಿಂದ ರಕ್ಷಣೆ ಪಡೆದಿದೆ. ಇದಕ್ಕಾಗಿ ಖರ್ಚು ಮಾಡತಕ್ಕಂಥ ಹಣ ನ್ಯಾಷನಲ್ ಡೆವಲಪ್‌ಮೆಂಟ್‌ನಿಂದ ಬಂಧಂಥ ಹಣ. ಆ ದುಡ್ಡನ್ನು ದುರುಪಯೋಗ ಮಾಡುವುದಕ್ಕೆ ನೀವು ಬಿಟ್ಟರೂ ಪರಮಾತ್ಮನು ನಿಮ್ಮನ್ನು ಬಿಡಲಾರ. ನಿಮಗೆ ವಿವೇಚನೆ ಇಲ್ಲ. ಸಹಕಾರ ಸಂಘದ ಸಚಿವರು ಕೊಟ್ಟ 2 ಲಕ್ಷ ರೂಪಾಯಿಯಿಂದ ಈ ಸೊಸೈಟಿಯನ್ನು, ನಡೆಸುವುದಕ್ಕೆ ಸಾಧ್ಯ ಇದೆಯೇ? ಅದನ್ನು ನಡೆಸುವುದಕ್ಕೆ ಸಾಧ್ಯವಿಲ್ಲ ಎಂದು ಹೇಳುತ್ತೇನೆ. ಇಲ್ಲಾ ಸೊಸೈಟಿಗಳು ಈ ರೀತಿ ತೆಗೆದುಕೊಂಡಿವೆಯೇ? ಒಬ್ಬೊಬ್ಬರಿಗೆ ಒಂದೊಂದು ತರಹ ಮಾಡುವುದು ಸರಿಯಲ್ಲ. ನಿಮ್ಮ ಹಿರಿಯರಾದ ಶ್ರೀಮಾನ್ ನಿಜಲಿಂಗಪ್ಪನವರು ಈ ರೀತಿ ಮಾಡಿದರೆ ಮುಂದಿನ ಮುಖ್ಯಮಂತ್ರಿ ಪದವಿ ಸಿಕ್ಕುತ್ತದೆ ಇಲ್ಲದಿದ್ದರೆ ಇಲ್ಲ ಎಂದು ನಿಮಗೆ ಆಶ್ವಾಸನೆ ಕೊಟ್ಟರೇ? ಅದು ಬಿಟ್ಟರೆ ನಿಮಗೆ ಇನ್ನು ಯಾವ ರೀತಿ ಅನುಭವ ಇದೆಯೋ ನನಗೆ ಗೊತ್ತಿಲ್ಲ ಮತ್ತು ನಿಮ್ಮಮನಸ್ಸಿನಲ್ಲಿ ಏನು ಇದೆಯೋ ಗೊತ್ತಿಲ್ಲ. ಕೆ.ಹೆಚ್. ಪಾಟೀಲರ ಯೋಚನೆ ಶ್ರೀಮಾನ್ ವೀರೇಂದ್ರ ಪಾಟೀಲರಿಗೆ ಬೇಡ. ಎಲ್ಲರಿಗೂ ಒಂದೇ ರೀತಿ ನ್ಯಾಯ ಇರಬೇಕು ಎಂದು ಹೇಳುತ್ತೇನೆ. ಎಲ್ಲರಿಗೂ ಒಂದು ಸಮರ್ಪಕವಾದ ಉತ್ತರ ಹೇಳಬೇಕು. ಈವೊತ್ತು ನನಗೆ ಕೆಲವು ಮಾಹಿತಿಗಳು ಬೇಕಾಗಿತ್ತು. ರಿಜಿಸ್ಟ್ರಾರ್ ಆಫೀಸಿಗೆ ಫೋನ್ ಮಾಡಿದೆ. ಜಾಯಿಂಟ್ ರಿಜಿಸ್ಟ್ರಾರ್ ಆಸ್ಟ್ರೇಲಿಯಾಕ್ಕೆ ಹೋಗಿದ್ದಾರೆ ಎಂದರು. ಅಲ್ಲಿಂದ ಇನ್ನೊಬ್ಬ ಡೈರೆಕ್ಟರನ್ನು ಕೇಳಿದೆ. ಅವರು ಅಮೇರಿಕಾಕ್ಕೆ ಹೋಗಿದ್ದರು ಎಂದರು.

ಒಟ್ಟಿನಲ್ಲಿ ಮಾಹಿತಿ ಸಿಕ್ಕಲಿಲ್ಲ. ಸಹಕಾರ ಸಂಘಗಳ ರಿಜಿಸ್ಟ್ರಾರ್ ನಮಗೆ ಯಾವ ಸಮಾಚಾರವೂ ಕೊಡಲಿಲ್ಲ. ಈ ದೃಷ್ಟಿಯಿಂದ ನಾನು ಹೇಳುತ್ತೇನೆ. ಈ ಸಹಕಾರ ಸಂಘಗಳ ರಿಜಿಸ್ಟ್ರಾರ್ ಆಫೀಸು ನಿಜವಾಗಿಯೂ ಯಾವ ಕೆಲಸವನ್ನು ಮಾಡುತ್ತಿಲ್ಲ ಎಂದು. ಯಾವ ಮಾಹಿತಿ ಕೇಳಿದರೂ ಸಿಕ್ಕದಂತೆ ಇದೆ. ಇದನ್ನು ಹಿಂದಿನ ಶ್ರೀಮಾನ್ ನಿಜಲಿಂಗಪ್ಪನವರು ಬಿಟ್ಟು ಹೋಗಿದ್ದಾರೆ. ಶ್ರೀಮಾನ್ ನಿಜಲಿಂಗಪ್ಪನವರು ಇಲ್ಲಿ ಇಲ್ಲದಿದ್ದರೂ ಅಧಿಕಾರಿಗಳೆಲ್ಲಾ ಅವರು ಮಾತು ಕೇಳುತ್ತಾರೆ ಅವರ ಕೈಯಲ್ಲಿದ್ದಾರೆ. ಮೈಸೂರು ರಾಜ್ಯದ ಸಹಕಾರ ಇಲಾಖೆಯವರು ಹೇಳಿದಕ್ಕೆಲ್ಲಾ ಶ್ರೀಮಾನ್ ನಿಜಲಿಂಗಪ್ಪನವರು ಅವಕಾಶ ಕೊಟ್ಟಿದ್ದರಿಂದ, ಆ ಇಲಾಖೆ ಈ ರೀತಿ ಬೆಳೆದುಬಂತು ಎಂದು ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ.

# ಪ್ರಜಾತಂತ್ರ ವ್ಯವಸ್ಥೆ ಬಗ್ಗೆ

ಸ್ವಾಮಿ, ಸ್ಪೀಕರ್‌ರವರೇ, ಇರತ್ತಿನ ದಿವಸ ವಾಟಾಳ್ ನಾಗರಾಜ್‌ರವರು ಎತ್ತಿದ ಪ್ರಿವಿಲೇಜ್ ವಿಷಯವಾಗಿಯಾಗಲಿ ಅಥವಾ ತಮ್ಮ ರೂಲಿಂಗ್ ವಿಷಯವಾಗಿಯಾಗಲಿ ನಾನು ಮಾತನಾಡುವುದಿಲ್ಲ. ಅದು ತಮಗೆ ಬಿಟ್ಟ ವಿಷಯ. ಒಂದು ಗಮನಾರ್ಹವಾದ ವಿಷಯವೇನೆಂದರೆ ಈ ಅಸೆಂಬ್ಲಿ ನಡೆದಾಗ 3 ಜನ ಸದಸ್ಯರನ್ನು ಆ ಸದಸ್ಯರು ಕಾನ್‌ಸಿಟ್ಯೂಷನಲ್ ಮೆಥೆಡ್ಸ್‌ನಿಂದ ತಮ್ಮ ಪ್ರತಿಭಟನೆಯನ್ನು ತೋರಿಸಲಿಕ್ಕೆ ಹೋದಾಗ ಅರೆಸ್ಟ್ ಮಾಡಿದರು ಎಂಬ ವರ್ತಮಾನ ಕೇಳಿದೆವು. ಅಂತಹ ಪರಿಸ್ಥಿತಿಯಲ್ಲಿ ಈ ಸಭೆಯ ಸದಸ್ಯರಾದ ನಾವು ಕಿವಿ, ಬಾಯಿ ಮುಚ್ಚಿಕೊಂಡು ಕುಳಿತಿರುವುದು ಸಾರ್ಥಕವಾಗಲಿಕ್ಕಿಲ್ಲ. ಅಲ್ಲಿ ಅಕ್ರಮವಾಗಿ ಗಲಾಟೆ ಮಾಡಿದರೆ ಅವರನ್ನು ಅರೆಸ್ಟ್ ಮಾಡದೇ ಬಿಟ್ಟಿದ್ದರೆ ಅನರ್ಥವುಂಟಾಗುತ್ತಾ ಇತ್ತು. ಯಾರಿಗಾದರೂ ಜೀವ ಹೋಗುತ್ತಾ ಇತ್ತು. ಆಸ್ತಿಗೆ ನಷ್ಟವುಂಟಾಗುತ್ತಾ ಇತ್ತು ಎಂಬ ಮಾತನ್ನು ಈ ಸಭೆಯ ಗಮನಕ್ಕೆ ತರಬೇಕಾಗುತ್ತಿತ್ತು. ಮತ್ತು ನಾವು ಅದನ್ನು ವಿಚಾರಮಾಡಲಿಕ್ಕೆ ಬರುತ್ತಾ ಇತ್ತು. ಇಲ್ಲಿ ನಡೆಯುತ್ತಾ ಇರುವ ಕೇವಲ ಕಾಂಗ್ರೆಸ್ ಎಕ್ಸಿಬಿಷನ್ನು ಯಾವ ರೀತಿಯಾಗಿ ನಡೆಯುತ್ತಾ ಇದೆ ಎಂಬ ಹಿನ್ನೆಲೆ ತಮಗೆ ಗೊತ್ತು, ಈ ಸಭೆಗೂ ತಮ್ಮ ಮುಖಾಂತರ ಗೊತ್ತಾಗಿದೆ. ಒಂದು ರಾಜ್ಯದ ಸ್ವತ್ತನ್ನು ತಪ್ಪಾಗಿ ವಿನಿಯೋಗಿಸಿ ಎಲ್ಲ ಸದಸ್ಯರೂ ಒಪ್ಪಿದಂತಹ ಒಂದು ನಿರ್ಣಯವನ್ನು ಮಾಡೋಣ ಎಂಬ ಮಾತನ್ನು ಈ ಸಭೆಯ ನಾಯಕರಾದ ವೀರೇಂದ್ರ ಪಾಟೀಲ್‌ರವರು ಒಪ್ಪಿ ವಿಚಾರ ಮಾಡುತ್ತೇನೆ ಅಂದಾಗಲೂ ಸಹ ಈ ಒಂದು ವರ್ಷಕ್ಕೆ ಮಾತ್ರ ಕೊಡುತ್ತೇವೆ ಎಂದು ಹೇಳಿದಾಗಲೂ ಅದನ್ನು ಪ್ರತಿಭಟಿಸಲು ಹೋದಾಗ, ಪ್ರತಿಭಟನೆ ಮಾಡುವ ವೇಳೆಗೆ ಗವರ್ನರ ಎದುರಿಗೇ ಅವರನ್ನು ಅರೆಸ್ಟ್ ಮಾಡಿದ ಮಾತು ಕೇಳಿ ಬಂತು. ಮಾನ್ಯ ಮಂತ್ರಿಗಳು ವೇಳೆಗೆ ಎಲ್ಲಕ್ಕಿಂತಲೂ ಹಿರಿದಾದ ಸ್ಥಾನವನ್ನು ಪಡಿದಿದ್ದಾರೆ. ಮಾನ್ಯ ಸದಸ್ಯರಿಂದ ಅಪರಾಧ ಎಸಗಲ್ಪಟ್ಟಿದ್ದರೆ ಅಥವಾ ಅವರು ಯಾವುದಾದರೂ ಒಂದು ಪ್ರತಿಭಟನೆಯನ್ನು ಮಾಡಿದ್ದರೆ ಅವರನ್ನು ಅರೆಸ್ಟ್ ಮಾಡಿಬಿಟ್ಟಿದ್ದೂ ಸಹ ಅವರನ್ನು ಬೇಲ್ ಮೇಲೆ ಕಾಣಲಿಲ್ಲ. ಆದ್ದರಿಂದ ಪೊಲೀಸ್‌ನವರು ಅವರನ್ನು ಹಿಡಿದದ್ದೇ ತಪ್ಪಾಗುತ್ತದೆ. ಆದ್ದರಿಂದ ಇದನ್ನು ವಿಚಾರಣೆ ಮಾಡಲಿಕ್ಕೆ ಈ ಸಭೆಗೆ ಅವಕಾಶ ಕೊಡಬೇಕೆಂದು ಹೇಳುತ್ತೇನೆ.

---

ವಿಸನದಿ : 13-3-1969

# ಮೈಸೂರು ಸಹಕಾರ ಸಂಘಗಳ ವಿಧೇಯಕ 1968ರ ಮೇಲಿನ ಚರ್ಚೆ

ಮೈಸೂರು ಕೋ ಆಪರೇಟಿವ್ ಸೊಸೈಟಿ 1968ನ್ನು ಗಣನೆಗೆ ತೆಗೆದುಕೊಳ್ಳಬೇಕು ಎಂಬುವುದು ನನ್ನ ಕಳಕಳಿಯ ಕೋರಿಕೆ.

ಮಾನ್ಯ ಸಭಾಪತಿಯವರೇ, ನಾನು ಮೈಸೂರು ಕೋ-ಆಪರೇಟೀವ್ ಅಮೆಂಡ್‌ಮೆಂಟ್ ಬಿಲ್ಲನ್ನು ಈ ಸಭೆಯ ಎದುರಿಗೆ ಮಂಡಿಸುತ್ತಾ, ಕೆಲವಾರು ಮಾತುಗಳನ್ನು ಹೇಳುವುದಕ್ಕೆ ಅಪೇಕ್ಷೆ ಪಡುತ್ತೇನೆ. ಈ ಸಭೆಯ ಎದುರಿಗೆ ಮೈಸೂರು ಕೋ-ಆಪರೇಟೀವ್ ಸೊಸೈಟೀಸ್ ಆ್ಯಕ್ಟ್ 1950ನೇ ಇಸವಿಯಲ್ಲಿ ಬಂದಾಗ ಯಾವ ಆಶ್ವಾಸನೆಗಳನ್ನು ಕೊಟ್ಟಿದ್ದರೂ, ಯಾವ ರೀತಿಯಿಂದ ಈ ಮಸೂದೆಯನ್ನು ಪಾಸ್ ಮಾಡಲಿಕ್ಕೆ ಈ ಸದನದ ಅಭಿಪ್ರಾಯವನ್ನು ಪಡೆಯಿತು ಎನ್ನುವ ಮಾತನ್ನು ನಾವು ಇಲ್ಲಿ ಸ್ಪಷ್ಟವಾಗಿ ವಿಚಾರಿಸುವುದು ಅತ್ಯಂತ ಅವಶ್ಯವಿದೆ. ಸರಕಾರದ ಅನಗತ್ಯ ಮಧ್ಯಸ್ಥಿಕೆಯಿಂದ ಸಹಕಾರಿ ಸಂಘಗಳಿಗೆ ಹಾನಿ ಆಗುವುದು ಎಂದು ಪಂಡಿತ್ ನೆಹರೂರವರು ಹೇಳಿದ ಒಂದು ಮಾತನ್ನು ಈ ಸಭೆಯ ಗಮನಕ್ಕೆ ತರಬಯಸುತ್ತೇನೆ. ಒಳ್ಳೆಯ ಸರಕಾರವು ಕಡಮೆ ಅವಧಿಯಲ್ಲಿ ಆಳ್ವಿಕೆ ನಡೆಸುತ್ತದೆ ಎಂದು ಮಹಾತ್ಮಗಾಂಧೀಯವರು ಹೇಳಿದ್ದಾರೆ. ಇಲ್ಲಿ 54ನ ಕಲಮಿನ ಬಗ್ಗೆ 17-4-59ರಲ್ಲಿ ಇದು ಈ ಸಭೆಯಲ್ಲಿ ಚರ್ಚೆಗೆ ಬಂದಾಗ ಒಂದು ವಿಶೇಷವಾದ ಮಾತನ್ನು ಮಂತ್ರಿಗಳು ಹೇಳಿದರು. ಅದೇನೆಂದರೆ:-

54ನೆಯ ಕಲಮಿನಲ್ಲಿ ಸಹ ಸರ್ಕಾರದವರು ಎರಡು ಲಕ್ಷ ರೂಪಾಯಿಗಳ ಸಹಾಯವನ್ನು ಯಾವುದಾದರೂ ಸೊಸೈಟಿಗೆ ಮಾಡಿದ ಸಂದರ್ಭದಲ್ಲಿ ಯಾವ ಯಾವ ಷರತ್ತುಗಳಿಗೆ ಅನುಗುಣವಾಗಿ ಆಡಳಿತದಲ್ಲಿ ಈ ಒಂದು ಪಾಲುಗಾರಿಕೆಯನ್ನು ವಹಿಸಬೇಕು ಎನ್ನತಕ್ಕಂಥ ವಿಚಾರ ತುಂಬ ಜಿಜ್ಞಾಸೆಗೆ ಒಳಗಾಗಿತ್ತು. ಆದರೆ ಈ ಕಲಮಿನಲ್ಲಿ ಎರಡು ಲಕ್ಷ ರೂಪಾಯಿಗಳಿಗೆ ಕಡಿಮೆ ಸರ್ಕಾರದವರು ಸಹಾಯವನ್ನು ಅಥವಾ ಸಾಲವನ್ನು ಕೊಟ್ಟ ಕಾಲದಲ್ಲಿಯೂ ಸಹ ಕೆಲವು ಷರತ್ತುಗಳನ್ನು ವಿಧಿಸಬಹುದು ಎಂದಿತ್ತು. ಅದನ್ನು ಪೂರ್ತಿ ತೆಗೆಯಲಾಗಿದೆ. ಎರಡು ಲಕ್ಷ ರೂಪಾಯಿಗಳಿಗಿಂತ ಕಡಿಮೆ ಇಲ್ಲದೆ ಸಾಲವನ್ನು ಕೊಟ್ಟಂಥ ಕಾಲದಲ್ಲಿ ಆಡಳಿತದಲ್ಲಿ ಎಷ್ಟು ಅಗತ್ಯ ಪಾಲುಗಾರಿಕೆ ಅಥವಾ ಸಂಬಂಧವಿರಬೇಕೋ ಅಷ್ಟು ಮಾತ್ರ ಉಳಿಸಿಕೊಳ್ಳಬೇಕೆಂದೆನ್ನುವಾಗ, ಎರಡು ಶಾಸನ ಸಭೆಗಳ ಗಮನಕ್ಕೆ ತರತಕ್ಕಂಥಾದ್ದು. ಶಾಸನ ಸಭೆಗಳಿಗೆ ಅದನ್ನು ತಂದಂಥ ಕಾಲದಲ್ಲಿ ಎಲ್ಲಿ ಎಲ್ಲಿ ಏನಾದರೂ ದುರಸ್ತಿ ಇತ್ಯಾದಿ ನೀಡಿದರೆ ಆ ದುರಸ್ತಿಗೆ ಒಳಪಟ್ಟು ಸರ್ಕಾರ ಅದರಲ್ಲಿ ಭಾಗವಹಿಸುತ್ತದೆ ಎನ್ನತಕ್ಕಂಥ ರೀತಿಯಲ್ಲಿ ವಿವರಿಸಿದೆ. ಅದು ಸಾಕಷ್ಟು ಸ್ಪಷ್ಟವಾಗಿ ಮತ್ತು ಸರ್ಕಾರದವರು ಕೊಡತಕ್ಕಂಥ ಸಹಾಯ, ಸಾಲವನ್ನು ಭದ್ರಪಡಿಸುವುದಕ್ಕೆ ಸಾಕಾಗಿದೆ ಮತ್ತು ಉಚಿತವಾದ ಪಾಲುಗಾರಿಕೆಯನ್ನು ಮಾತ್ರ ಸರ್ಕಾರದವರು ಇಟ್ಟುಕೊಳ್ಳುವುದಕ್ಕೆ ಮಿತಿಯನ್ನು ಸೂಚಿಸಿದೆ.

ಇಂಥ ಒಂದು ಆಶ್ವಾಸನೆಯನ್ನು ಈ ಸಭೆಗೆ ಕೊಟ್ಟಿದ್ದಾರೆ. ನಾನು ಇಲ್ಲಿ ಬಹಳ ಹೊತ್ತಿನವರೆಗೆ ಹೇಳಬೇಕಾದ ಪ್ರಮೇಯವೇನೂ ಇಲ್ಲ. ಮಾನ್ಯ ಸದಸ್ಯರುಗಳಾದ ಶ್ರೀ ಎಂ.ಆರ್. ಪಾಟೀಲ್, ಡಾಕ್ಟರ್ ನಾಗನಗೌಡ ಮತ್ತು ಇನ್ನೂ ಅನೇಕ ಮಹನೀಯರು ವಿಷದವಾಗಿ ಈ ಕಾಯಿದೆಯಲ್ಲಿ

ಅಡಕವಾಗಿರುವಂತಹ ಸಮಸ್ಯೆಗಳನ್ನು ಬಹಳ ಕಟುವಾಗಿ ಟೀಕಿಸಿ, ಕೊನೆಗೆ ದಿವಂಗತ ಮಾಲಿ ಮರಿಯಪ್ಪನವರು ಕೇಳಿರುವ ಧಾಟಿಯನ್ನೇ ಒಪ್ಪಿ ಮುಂದೆ ಬರುವ ಸರ್ಕಾರ ನೋಡುತ್ತದೆ ಎನ್ನುವ ದೃಷ್ಟಿಯೊಳಗೆ ಈ ಕಾಯಿದೆಯನ್ನು ಒಪ್ಪಿಕೊಂಡದ್ದಾಗಿದೆ. ಆದರೆ ಇವತ್ತಿನ ದಿವಸ ಅದಕ್ಕೆ ತದ್ವಿರುದ್ಧವಾಗಿ ಪರಿಸ್ಥಿತಿ ನಮ್ಮ ರಾಜ್ಯದಲ್ಲಿ ಬಂದಿರುವುದರಿಂದ ಅನಿವಾರ್ಯವಾಗಿ ಈಕಾಯಿದೆಗೆ ತಿದ್ದುಪಡಿ ಸೂಚಿಸುವಂತಹ ಪರಿಸ್ಥಿತಿ ಪ್ರಾಪ್ತವಾಗಿದೆ. ಒಂದು ಮಾತನ್ನು ತಮ್ಮ ಗಮನಕ್ಕೆ ತರುತ್ತೇನೆ. ಯಾವಾಗಲೂ ಅವಶ್ಯಕತೆ ಇಲ್ಲದಿದ್ದರೆ, ದುರದೃಷ್ಟವಾದ ಪ್ರಸಂಗ ಸರ್ಕಾರದ ಗಮನಕ್ಕೆ ಬರದಿದ್ದರೆ, ಈ ಕಾಯಿದೆಯನ್ನು ಅಮಲಿನಲ್ಲಿ ತರುವುದಕ್ಕೆ ಸರ್ಕಾರದವರು ಪ್ರಯತ್ನ ಪಡುತ್ತಾ ಇರಲಿಲ್ಲ. ಆದ್ದರಿಂದ ಈ ತಿದ್ದುಪಡಿ ರಚನಾತ್ಮಕ ಎನ್ನುವ ವಾದವನ್ನು ನನ್ನ ಸ್ನೇಹಿತರಾದಂತಹ ಶ್ರೀಮಾನ್ ಬಿ.ಎಲ್. ಗೌಡರು ಮಾಡಬಹುದೇನೋ ಎಂದು ನನಗನಿಸುತ್ತದೆ. ಒಂದು ಮಾತನ್ನು ಅವರ ಗಮನಕ್ಕೆ ತರುತ್ತೇನೆ. ಈ ರೀತಿ ನಡೆಯುವುದಾದರೆ, ನಿಮ್ಮ ಆಡಳಿತದಲ್ಲಿ ಈ ರೀತಿ ಕಾಯಿದೆಯನ್ನು ಉಪಯೋಗ ಮಾಡುವುದಾದರೆ ಸ್ಪಷ್ಟವಾಗಿ ಈ ಕಾಯಿದೆಯ ರೂಪರೇಷಗಳನ್ನು ಕೊಡುವುದು ಈ ಸದನದ ಕರ್ತವ್ಯ ಎನ್ನುವ ದೃಷ್ಟಿಯಲ್ಲಿ ಹೇಳುತ್ತಿದ್ದೇನೆ.

'ಸಹಕಾರಿ ಸಂಘಗಳಿಗೆ ಎರಡು ಲಕ್ಷ ರೂಪಾಯಿಗಳಿಗಿಂತ ಕಡಿಮೆ ಯಾಗದಂತೆ ಶೇರು ಬಂಡವಾಳಕ್ಕೆ ಹಾಗೂ ಸಾಲದ ರೂಪದಲ್ಲಿ ಸರಕಾರವು ನೆರವು ನೀಡುತ್ತದೆ. ಸಾರ್ವಜನಿಕರ ಹಿತಾಸಕ್ತಿಗಾಗಿ ಈ ರೀತಿಯ ಅನಿವಾರ್ಯತೆ ಇದೆ ಅಲ್ಲದೆ ಇದರಿಂದ ಸಹಕಾರಿ ಸಂಘಗಳ ಆಡಳಿತದ ಮೇಲೆ ಸರಕಾರದ ನಿಯಂತ್ರಣ ಸಾಧ್ಯ'. ಎಂದು ಸೆಕ್ಷನ್ 54ನ್ನು ಇನ್‌ವೋಕು ಮಾಡಿದ್ದಾರೆ. ಸೊಸೈಟಿಗಳ ಆಡಳಿತ ಸರ್ಕಾರದ ಆಡಳಿತಕ್ಕಿಂತ ಎಷ್ಟೋ ಉತ್ತಮವಾಗಿದೆ. ಆದರೂ ಸಂಘದವರ ಆಡಳಿತದಲ್ಲಿ ದೋಷವಿದೆ ಎಂದು ಹೇಳಿ ಈ ಕಾಯಿದೆಯನ್ನು ದುರುಪಯೋಗ ಮಾಡಿದ್ದಾರೆ. ಸೆಕ್ಷನ್ 54 ಏನು ಹೇಳುತ್ತಿದೆ ಎಂಬುದನ್ನು ನೋಡಿ. 'ಸರಕಾರವು 2 ಲಕ್ಷ ರೂಪಾಯಿಗೆ ಕಡಿಮೆಯಾಗದಂತೆ ಯಾವುದೇ ಸಹಕಾರಿ ಸಂಘಗಳಿಗೆ ನೆರವು ನೀಡುತ್ತದೆ. ಇದು ಸಾರ್ವಜನಿಕ ಹಿತಾಸಕ್ತಿಗಾಗಿ ಎಂದು ಅಧಿಸೂಚನೆ ಗಜೆಟಿನಲ್ಲಿ ಪ್ರಕಟಿಸಿ ಸಂಘಗಳ ವ್ಯವಹಾರದ ಮೇಲೆ ಹತೋಟಿ ಪಡೆದು ಆ ಮೂಲಕ ರಾಜ್ಯ ಹಿತಾಸಕ್ತಿಯನ್ನು ಸರಕಾರ ಕಾಪಾಡಬಹುದು.'

ಈ ಸೆಕ್ಷನ್ 54ನ್ನು ಉಪಯೋಗಿಸಿದರೆ, ಸೆಕ್ಷನ್ 29ಕ್ಕೆ ಹೋಗುವ ಅವಶ್ಯಕತೆ ಇರುವುದಿಲ್ಲ. 29ನೇ ಸೆಕ್ಷನ್ನಿನೊಳಗೂ ಸಹಿತ ಒಂದು ಸೊಸೈಟಿಯಲ್ಲಿ ದುರ್ವ್ಯವಹಾರ ನಡೆದದ್ದೇ ಆದರೆ, ಹಣದ ಪೋಲು ಆಗಿದ್ದರೆ, ಆಡಳಿತ ನಡೆಸುವುದಕ್ಕೆ ಅಸಮರ್ಥತೆಯಾಗಿದ್ದರೆ, ಅಂಥ ಕಾಲದಲ್ಲಿ ನೋಟೀಸು ಕೊಟ್ಟು ಸಾಲ ಕೊಟ್ಟ ಬ್ಯಾಂಕಿನ ಅಭಿಪ್ರಾಯ ತೆಗೆದುಕೊಂಡು ಅಫಿಲಿಯೇಟ್ ಆಗಿರುವ ಸಂಸ್ಥೆಗೂ ತಿಳಿಸಿ, ಕ್ರಮ ತೆಗೆದುಕೊಳ್ಳಬಹುದು ಎಂದು ಇದೆ. ಆ ಸೆಕ್ಷನಿನಲ್ಲಿ ಸೂಪರ್ ಸೀಡ್ ಮಾಡಬೇಕಾದರೆ ನೋಟೀಸ್ ಕೊಡಬೇಕಾಗುತ್ತದೆ, ನ್ಯಾಯ ಅನ್ಯಾಯಗಳನ್ನು ವಿಚಾರ ಮಾಡಬೇಕಾಗುತ್ತದೆ. ವಿಚಾರ ಮಾಡಿ, ನಿಮಗೆ ಬೇಕಾದ ಹಾಗೆ ಸಂಘಗಳನ್ನು ಹತ್ತಿಕ್ಕಲು ಬರುವುದಿಲ್ಲ, ನಿಮ್ಮ ಈ ರಾಕ್ಷಸೀ ಕೃತ್ಯವನ್ನು ಅನುಸರಿಸುವುದಕ್ಕಾಗುವುದಿಲ್ಲ, ಎನ್ನುವ ದೃಷ್ಟಿಯಿಂದ ಸೆಕ್ಷನ್ 29ರಲ್ಲಿ ಮಾಡತಕ್ಕಂಥ ಈ ಕೆಲಸವನ್ನು ಸೆಕ್ಷನ್ 54ರಲ್ಲಿ ಮಾಡಲಿಕ್ಕೆ ಹತ್ತಿದ್ದೀರಿ. ಇದನ್ನು ಕಂಡು

ನನಗೆ ಬಹಳ ವ್ಯಸನವಾಗುತ್ತದೆ. ದುರ್ದೈವದಿಂದ ಶ್ರೀಮಾನ್ ಮಾಲಿಮರಿಯಪ್ಪನವರು ಇವತ್ತಿನ ದಿವಸ ಇಲ್ಲ. ಆದರೂ ಕೂಡ ಅವರ ಆತ್ಮ ಈ ಅನ್ಯಾಯಗಳನ್ನು ನೋಡುತ್ತಿರುತ್ತದೆ. ಈ ಸಹಕಾರ ತತ್ವವನ್ನು ತಾವು ಈ ದಿವಸ ಬೇರೆ ರೀತಿಯ ಚಳುವಳಿಗೆ ಕೊಂಡೊಯ್ಯುತ್ತಿದ್ದೀರಿ. ಈ ರೀತಿಯಾದರೆ ಮುಂದೆ ದುರದೃಷ್ಟಕರ ಪರಿಸ್ಥಿತಿಗೆ ಹೋದೀತು ಜೋಕೆ ಎಂಬ ಮಾತನ್ನು ನಾನು ಮಾನ್ಯ ಮಂತ್ರಿಗಳಿಗೆ ಅಧ್ಯಕ್ಷರ ಮುಖಾಂತರ ನಿವೇದನೆ ಮಾಡಿಕೊಳ್ಳುತ್ತಿದ್ದೇನೆ. ಸೆಕ್ಷನ್ 54ರೊಳಗೆ ನಾನು ಮಾಡಿರುವ ಸಲಹೆ ಸೂಕ್ತವೇ ಎಂಬುದನ್ನು ಸರ್ಕಾರದವರು ವಿಚಾರ ಮಾಡಬೇಕು. ವಿರೋಧ ಪಕ್ಷದ ಸದಸ್ಯರು ಈ ಸಲಹೆ ಮಾಡುತ್ತಿರುವುದರಿಂದ ಅದನ್ನು ವಿರೋಧ ಮಾಡಬೇಕು ಎಂಬ ಭಾವನೆ ಬರುವುದು ಬೇಡ ಎಂದು ಕಳಕಳಿಯಿಂದ ಬಿನ್ನಹ ಮಾಡಿಕೊಳ್ಳುತ್ತಿದ್ದೇನೆ. ಈ ಸೆಕ್ಷನ್ 54ರೊಳಗೆ ಸೆಕ್ಷನ್ 53ರಲ್ಲಿ ನಮೂದಿಸಿದಂತೆ ಸರಕಾರದ ನೆರವು ಸಹಕಾರ ಸಂಘಗಳ ಕೇಳಿಕೆಯಂತೆ ರೂಪಾಯಿ 5 ಲಕ್ಷಗಳಿಗೆ ಕಡಿಮೆಯಾಗದಂತೆ ಕೊಡಬಹುದು. ಅದು ಸಮಾಧಾನಕರವಾಗಿದ್ದರೆ ಸಾರ್ವಜನಿಕ ಹಿತಾಸಕ್ತಿಗಾಗಿ ವ್ಯವಹಾರದ ಮೇಲೆ ವ್ಯವಸ್ಥಿತ ಹಿಡಿತ ಸಾಧಿಸಲು ರಾಜ್ಯದ ಏಳಿಗೆಗಾಗಿ ಸರಕಾರವು ಪ್ರಯತ್ನಿಸುತ್ತದೆ ಎಂದು ಆಡಳಿತ ಮಂಡಳಿಯು ಅಭಿಪ್ರಾಯ ಪಡಬಹುದು ಎನ್ನುವ ಮಾತನ್ನು ಹೇಳಿದ್ದೇನೆ. ಕಾಲ ಇದ್ದಕ್ಕಿದ್ದಂತೆ ಬದಲಾವಣೆಯಾಗುತ್ತಿದೆ. ಎರಡು ಲಕ್ಷ ರೂಪಾಯಿಗಳನ್ನು ಈಗ ಕೊಡುತ್ತಿರುವುದು ಸಾಕಾಗುವುದಿಲ್ಲ. ಆದ್ದರಿಂದ 5 ಲಕ್ಷ ರೂಪಾಯಿಗಳನ್ನು ಕೊಡಬೇಕೆಂದು ಸಲಹೆ ಮಾಡಿದ್ದೇನೆ. ಇದನ್ನು ಮಾನ್ಯ ಮಂತ್ರಿಗಳಾದ ಶ್ರೀ ಬಿ.ಎಲ್. ಗೌಡರು ಒಪ್ಪುತ್ತಾರೆಂದು ನಾನು ತಿಳಿಯುತ್ತೇನೆ. ಆದರೆ ಆಡಳಿತ ಮಂಡಳಿಯನ್ನು ಬಿಟ್ಟು ಎಂಬ ವಾಕ್ಯವನ್ನು ಏತಕ್ಕೆ ಸೇರಿಸಿದ್ದೇನೆ ಎಂಬುದನ್ನು ಮಾನ್ಯ ಮಂತ್ರಿಗಳು ಬೇರೆ ಅರ್ಥದಿಂದ ವಿವೇಚನೆ ಮಾಡಬಾರದು ಎಂದು ಕೇಳಿಕೊಳ್ಳುತ್ತೇನೆ. ಈಗ ಸರ್ಕಾರದವರು ಕೆಲವು ಸೊಸೈಟಿಗಳ ಬಗ್ಗೆ 29ನೇ ಕಲಮ್ ಪ್ರಕಾರ ಗಡುಸಾದ ಕ್ರಮಗಳನ್ನು ಕೈಗೊಳ್ಳುವುದಕ್ಕೆ ಅವಕಾಶವಿದ್ದರೂ ಕೂಡ 54ನೇ ಕಲಮ್ ಪ್ರಕಾರ ಕ್ರಮ ಕೈಗೊಳ್ಳುತ್ತಿದ್ದಾರೆ. ಇದು ಸರಿಯಲ್ಲ. ಸಹಕಾರಿ ತತ್ವದ ಹಿತದೃಷ್ಟಿಯಿಂದ ಸರ್ಕಾರದವರು ಎಷ್ಟು ಕ್ರಮ ಕೈಗೊಳ್ಳಬೇಕೋ ಅಷ್ಟು ಕೈಗೊಳ್ಳಬೇಕೇ ವಿನಃ ಅದಕ್ಕಿಂತ ಮುಂದೆಹೋಗಬಾರದು ಎಂದು ಗಂಭೀರವಾಗಿ ಹೇಳಬಯಸುತ್ತೇನೆ. ಕೆಲವು ಸೊಸೈಟಿಗಳು ಸರಿಯಾಗಿ ನಡೆಯದಿದ್ದರೂ ಕೂಡ ಅಂತಹ ಸೊಸೈಟಿಗಳಿಗೆ ಸ್ಟೇಟ್ ಏಡ್ ಕೊಡುತ್ತಿರುವುದು, ಶ್ರೀಮಾನ್ ಬಿ.ಎಲ್. ಗೌಡರಿಗೆ ಗೊತ್ತಿರಬಹುದು. ಕೇಂದ್ರ ಸರ್ಕಾರದಿಂದ ಈ ವಿಷಯದಲ್ಲಿ ಬರತಕ್ಕಂಥ ಹಣವನ್ನು ಸರ್ಕಾರದವರು ತಮಗೆ ಬೇಕಾದ ಸೊಸೈಟಿಗಳಿಗೆ ಮಾತ್ರ ಕೊಡುತ್ತಿದ್ದಾರೆ. ಯಾವ ಸೊಸೈಟಿಗಳಲ್ಲಿ ಹಣದ ದುರ್ವಿನಿಯೋಗವಾಗುತ್ತಿರುತ್ತದೋ ಅಂತಹ ಸೊಸೈಟಿಗಳಿಗೆ ಸ್ಟೇಟ್ ಏಡನ್ನು ಚಾಚೂ ತಪ್ಪದೆ ಸರ್ಕಾರದವರು ಕೊಡುತ್ತಿದ್ದಾರೆ. ಕೆಲವು ಸೊಸೈಟಿಗಳವರು ಬೇಡ ಎಂದು ಹೇಳಿದ್ದರೂ ಕೂಡ ಸ್ಟೇಟ್ ಏಡನ್ನು ಕೊಟ್ಟಿದ್ದಾರೆ. ಮಾಲಿಮರಿಯಪ್ಪನವರ ಕಾಲದಲ್ಲಿ ಈ ರೀತಿ ನಡೆಯುತ್ತಿರಲಿಲ್ಲ. ಎಲ್ಲಿ ಸೊಸೈಟಿಗಳಲ್ಲಿ ಹಣ ದುರ್ವಿವಿಯೋಗವಾಗಿದೆಯೋ ಅಲ್ಲಿ ಸರ್ಕಾರದ ಮೇನೇಜಿಂಗ್ ಡೈರೆಕ್ಟರನ್ನು ನೇಮಕ ಮಾಡುವ ಬದಲು ಯಾವ ಸೊಸೈಟಿಗಳು ಸ್ಟೇಟ್ ಏಡನ್ನು ತೆಗೆದುಕೊಳ್ಳದೆ ಬಹಳ ಚೆನ್ನಾಗಿ ಕೆಲಸ ಮಾಡುತ್ತಿದೆಯೋ ಅಂತಹ ಸೊಸೈಟಿಗಳಲ್ಲಿ ನಿವೃತ್ತರಾದಂಥ ಅಧಿಕಾರಿಗಳನ್ನು ಸಾವಿರಾರು ರೂಪಾಯಿಗಳ ಸಂಬಳದಮೇಲೆ ಮೇನೇಜಿಂಗ್ ಡೈರೆಕ್ಟರ್‌ಗಳನ್ನಾಗಿ ನೇಮಕ ಮಾಡುತ್ತಿದ್ದಾರೆ. ಈ ಬಿಳಿ ಆನೆಗಳನ್ನು ಸಾಕಲು ಪ್ರತಿತಿಂಗಳು ಸಹ ಮೂರು ನಾಲ್ಕು ಸಾವಿರ

ರೂಪಾಯಿಗಳ ಖರ್ಚು ಬರುತ್ತಿದೆ. ಯಾವ ಸೊಸೈಟಿಗಳಲ್ಲಿ ಪಗಾರ ಇಲ್ಲದ ಡೈರೆಕ್ಟರ್‌ಗಳು ಚೆನ್ನಾಗಿ ಕೆಲಸ ಮಾಡುತ್ತಿರುತ್ತಾರೋ ಅಂಥ ಸೊಸೈಟಿಗಳಿಗೆ ಸಂಬಳದ ಅಧಿಕಾರಿಗಳನ್ನು ಸರ್ಕಾರದವರು ಅನಾವಶ್ಯಕವಾಗಿ ಸೆಕ್ಷನ್ 54ನ್ನು ಉಪಯೋಗ ಮಾಡಿಕೊಂಡು ನೇಮಕ ಮಾಡುತ್ತಿದ್ದಾರೆ. ಇದು ನಿಮಗೇ ಮುಂದೆ ಗಂಡಾಂತರಕಾರಿಯಾಗಬಹುದು. ನಿಮಗೆ ಆ ಜಾಗ ಶಾಶ್ವತವಲ್ಲ ಒಂದಲ್ಲಾ ಒಂದು ದಿನ ನಿಮ್ಮ ಹಡಗೂ ಕೂಡ ಮುಳುಗಿ ಹೋಗಬಹುದು ಈ ಕಡೆಗೆ ಬಂದಾಗ ತಾವು ಮುಳುಗಬಹುದು. ಆದ್ದರಿಂದ ಈ ವಿಷಯದಲ್ಲಿ ತಾವು ವಿವೇಕದಿಂದ ಯೋಚನೆ ಮಾಡಿ ನೋಡುವುದು ಅವಶ್ಯಕ ಇದೆ. ಮಾಲಿಮರಿಯಪ್ಪನವರು ಏನು ಮಾತುಕೊಟ್ಟಿದ್ದರು ಅದನ್ನು ತಾವು ಉಳಿಸಿಕೊಳ್ಳುತ್ತಿಲ್ಲ. ಸೆಕ್ಷನ್ 54ನ್ನು ತಾವು ಉಪಯೋಗಿಸಿಕೊಂಡು ದುರ್ಲಾಭ ಪಡೆಯುತ್ತಿದ್ದೀರಿ. ಜನತೆಯ ಹಿತದೃಷ್ಟಿಯಿಂದ ಸಹಕಾರಿ ಚಳುವಳಿ ಚೆನ್ನಾಗಿ ನಡೆಯಬೇಕಾದರೆ ನಿಮ್ಮ ಹೊಲಸು ವ್ಯವಹಾರವನ್ನು ನಿಲ್ಲಿಸುವುದು ಒಳ್ಳೆಯದು. ಸಹಕಾರಿ ಚಳುವಳಿಯಲ್ಲಿ ರಾಜಕೀಯವಾದ ಚಳುವಳಿಯನ್ನು ಬೆರೆಸಿ ಪವಿತ್ರವಾದಂಥ ಸಹಕಾರಿ ಚಳುವಳಿಯನ್ನು ಹಾಳು ಮಾಡುವುದು ಸರಿಯಲ್ಲ. ಹಿಂದೆ ಮೈಸೂರು ರಾಜ್ಯದಲ್ಲಿ ಶ್ರೀ ಕೆ.ಎಚ್. ರಾಮಯ್ಯನವರು ಉತ್ತಮವಾದಂಥ ಸಹಕಾರಿ ಚಳುವಳಿಯನ್ನು ನಡೆಸಿದ್ದಾರೆ. ಅವರ ಕೀರ್ತಿ 1959ರಲ್ಲಿಯೇ ಈ ಸಹಕಾರಿ ಚಳುವಳಿಯಲ್ಲಿ ಪ್ರಾರಂಭವಾಗಿತ್ತು. ಸಹಕಾರಿ ಚಳುವಳಿಯ ಬಗ್ಗೆ ಶ್ರೀ ಬಿ.ಎಲ್. ಮೆಹತಾ ಅವರು ಏನು ಹೇಳಿದ್ದರೋ ಅದನ್ನು ತಾವು ಲಕ್ಷ್ಯಕ್ಕೆ ತೆಗೆದುಕೊಳ್ಳುತ್ತಿಲ್ಲ. ಇನ್ನೊಂದು ಮಾತನ್ನು ತಮಗೆ ಹೇಳಬೇಕೆಂದರೆ ಮಹಾತ್ಮಗಾಂಧಿಯವರನ್ನು ಗುಂಡಿಟ್ಟು ಕೊಂದ ನಾಥೂರಾಮ್ ಗೋಡ್ಸೆ ತಪ್ಪಿತಸ್ಥ ಎಂದು ಪ್ರಪಂಚಕ್ಕೆ ತೋರಿಸಿಕೊಡಲು ಸರ್ಕಾರದವರು ಕೋಟ್ಯಾಂತರ ರೂಪಾಯಿಗಳನ್ನು ಖರ್ಚು ಮಾಡಬೇಕಾಯಿತು. ಅವನ ಮೇಲಿನ ಸಿಟ್ಟಿನಿಂದ ಸರ್ಕಾರದವರು ಅವನ ಮೊಮ್ಮಕ್ಕಳಿಗೆ ಗುಂಡು ಹಾಕಲಿಲ್ಲ. ಆದರೆ ತಾವು ಏನೂ ತಪ್ಪಿಲ್ಲದ ಸೊಸೈಟಿಗಳ ಮೇಲೆ ತಮ್ಮ ಅಧಿಕಾರವನ್ನು ಅದೂ ನಿಯಮಕ್ಕೆ ವಿರುದ್ಧವಾಗಿ ಉಪಯೋಗ ಮಾಡುತ್ತಿದ್ದೀರಿ. 54ನೇ ಸೆಕ್ಷನ್ ಪ್ರಕಾರ ನೋಟೀಸ್ ಕೂಡ ಕೊಡದೆ ಕ್ರಮ ತೆಗೆದುಕೊಳ್ಳುತ್ತಿದ್ದೀರಿ. ಈ ರೀತಿ ಮಾಡುತ್ತಿರುವುದು ಸರಿಯಲ್ಲ. ವಿರೋಧಪಕ್ಷದ ಸದಸ್ಯರು ಈ ತಿದ್ದುಪಡಿಯನ್ನು ತಂದಿದ್ದಾರೆಂಬ ಕಾರಣದಿಂದ ಇದನ್ನು ತಳ್ಳಿಹಾಕದೆ ಈ ತಿದ್ದುಪಡಿಯನ್ನು ಮಾನ್ಯ ಉಪಸಚಿವರು ಒಪ್ಪುತ್ತಾರೆಂದು ನಾನು ನಂಬಿದ್ದೇನೆ ಮತ್ತು ಒಪ್ಪಬೇಕೆಂದು ವಿನಯಪೂರ್ವಕವಾಗಿ ವಿನಂತಿಸಿಕೊಳ್ಳುತ್ತೇನೆ.

ಇನ್ನು ಸರ್ಕಾರದವರು ಇವತ್ತಿನ ದಿವಸ ಸೆಕ್ಷನ್ 54ರ ಪ್ರಕಾರ ಕೆಲವು ಸೊಸೈಟಿಗಳನ್ನು ಮುಚ್ಚುವುದಕ್ಕೆ ಹೊರಟಿದ್ದಾರೆ. ಸರ್ಕಾರದಿಂದ ಹಣದ ಸಹಾಯ ಮಾಡಿದ್ದೇವೆಂಬ ಕಾರಣದಿಂದ ಅಲ್ಲಿ ತಮ್ಮ ಕಡೆಯ ಆಡಳಿತಾಧಿಕಾರಿಗಳನ್ನು ನೇಮಕ ಮಾಡುತ್ತಿದ್ದೀರಿ. ಧಾರವಾಡ ಡಿಸ್ಟ್ರಿಕ್ಟ್ ಕೋ-ಅಪರೇಟಿವ್ ಆಯಿಲ್ ಸೀಡ್ಸ್ ಪ್ರೊಸೆಸಿಂಗ್ ಸೊಸೈಟಿಗೆ ಸರ್ಕಾರದಿಂದ ಸಹಾಯಧನ ಕೊಡುವ ಬಗ್ಗೆ ನಮ್ಮ ಮೇನೇಂಜಿಂಗ್ ಡೈರೆಕ್ಟರ್ ಇದ್ದರೆ ಮಾತ್ರ ಕೊಡುತ್ತೇವೆಂದು ಸರ್ಕಾರದವರು ಹೇಳಿದರು. ಆ ಸೊಸೈಟಿಯವರು ಹಣಕ್ಕಾಗಿ ಸರ್ಕಾರದ ಮೊರೆ ಹೋಗಬೇಕಾಗಿರಲಿಲ್ಲ. ಅವರಲ್ಲಿ ಹಣ ಇತ್ತು. ಆದರೆ ಸರ್ಕಾರದಿಂದ ರಿಜಿಸ್ಟರ್ ಆದ ಸೊಸೈಟಿಯಾದ್ದರಿಂದ ಸರ್ಕಾರದ ಮಾತನ್ನು ಕೇಳಬೇಕಾಯಿತಲ್ಲದೆ ದುರದೃಷ್ಟದಿಂದ ಸರ್ಕಾರದ ಮೊರೆ ಹೋಗಬೇಕಾಯಿತು. ನನಗಿಂತ ಸಂಘ ಹೆಚ್ಚು ಎನ್ನುವ ಭಾವನೆ ಇಟ್ಟುಕೊಂಡು ವಾಲಂಟರಿಗಾಗಿ ಸೆಕ್ಷನ್ 54 ಪ್ರಕಾರ ಒಂದು ಠರಾವು

ಮಾಡಿಕೊಟ್ಟೆವು. ಇದರ ಮೇಲೆ ನೀವು ಜಗಿದಾಡಿ ಕೋರ್ಟಿಗೆ ಹೋಗಿ ಅಲ್ಲೂ ಕೂಡ ಮಸಿ ಹತ್ತಿಸಿಕೊಂಡು ಬಂದಿರಿ. ಇಲ್ಲಿರುವ ಸಂಘಗಳು ಸರಿಯಾಗಿ ಕೆಲಸ ಮಾಡುತ್ತಿಲ್ಲ ಎಂದು ಇಲ್ಲದ ಕಿರುಕುಳಗಳನ್ನು ಕೊಡುತ್ತಿದ್ದೀರಿ. ಇದರಲ್ಲಿ ವಾಲಿ ಎನ್ನುವವರನ್ನು ಮ್ಯಾನೇಜಿಂಗ್ ಡೈರೆಕ್ಟರಾಗಿ ಮಾಡಿದ್ದೀರಿ. ರಿಟೈರ್ಡ್ ಆಗಿರುವವರನ್ನು ನೇಮಿಸುವುದಿಲ್ಲ ಎಂದು ಸರಕಾರದ ನೀತಿಯಾಗಿದೆ ಎಂದು ಬರೀ ಬಾಯಲ್ಲಿ ಹೇಳುತ್ತಾರೆಯೇ ಹೊರತು ಕಾರ್ಯದಲ್ಲಿ ಮಾಡುತ್ತಿಲ್ಲ. ಇಲ್ಲಿ ಅಡ್ಮಿನಿಸ್ಟ್ರೇಷನ್ ಚೆನ್ನಾಗಿ ಮಾಡುತ್ತಾರೆ ಎಂದು ಹೆಚ್ಚು ಪಗಾರ ಕೊಟ್ಟು ವಾಲಿ ಎನ್ನುವವರನ್ನು ನೇಮಿಸಿದ್ದೀರಿ. ಇದರ ಬಗ್ಗೆ ಮುಂದೆ ಅವಕಾಶ ಸಿಕ್ಕಿದಾಗ ಹೇಳುತ್ತೇನೆ. ಈಗ ಇರುವ ಕಾಯಿದೆಯಲ್ಲಿ ಎಲ್ಲ ಅಧಿಕಾರವೂ ನಮಗೆ ಇರಲಿ ಎಂದು ಇದರಲ್ಲಿ ಡೆಪ್ಯುಟಿ ಕಮಿಷನರು, ಮಾನ್ಯ ಚೀಫ್ ಮಿನಿಸ್ಟರು ಹಾಗೂ ಕೋ-ಆಪರೇಟೀವ್ ಮಿನಿಸ್ಟರು ಎಲ್ಲರೂ ಕೂಡಿಕೊಂಡು ಇಲ್ಲಿ ಪರ್ಚೇಸಿಂಗು ಕಮಿಟಿಯವರೊಡನೆ ಎಲ್ಲ ವ್ಯವಹಾರಗಳನ್ನು ಮಾಡುತ್ತಿದ್ದಾರೆ ಮತ್ತು ಲಾಭ ಸಂಪಾದನೆ ಮಾಡುತ್ತಿದ್ದಾರೆ. ಇದರಲ್ಲಿ ಎಲ್ಲರಿಗೂ ಇಂತಿಷ್ಟು ಲಾಭ ಹಂಚಿಕೆಯಾಗಬೇಕು ಎಂದೂ ಇದೆ. ಈ ರೀತಿ ಸುಮಾರು ಹನ್ನೊಂದು ಸೊಸೈಟಿಗಳ ಆಡಳಿತವನ್ನು ರಿಜಿಸ್ಟ್ರಾರ್‌ರವರು ತಮ್ಮ ಕೈಯಲ್ಲಿ ಮಾಡುತ್ತಿರುವುದು ಇದೇನು ನೀತಿ ಸೆಕ್ಷನ್ 54ರಂತೆ ತೆಗೆದುಕೊಳ್ಳಬೇಕೆಂದು ಹೇಳುವುದು ಮಾನವೀಯ ದೃಷ್ಟಿಯಿಂದ ಮಾಡಿದಂತಾಗುತ್ತದೆಯೇ? ಇದರಂತೆ ನೀವುಕೋರ್ಟಿಗೆ ಹೋದರೆ ನಿಜವಾದ ತಕ್ಕಡಿ ಇಟ್ಟುಕೊಂಡು ತೂಗಿದಂತಾಗುತ್ತದೆಯೇ? ಇವೊತ್ತು ಕೇಂದ್ರದಲ್ಲಿ ಶ್ರೀಮತಿ ಇಂದಿರಾಗಾಂಧಿಯವರ ಸರಕಾರವಿಲ್ಲದೇ ಇದ್ದಿದ್ದರೆ, ಯಾವ ರೀತಿ ಆಗುತ್ತಿತ್ತು ನಿಮಗೇ ತಿಳಿಯುತ್ತಿತ್ತು. ಪಂಜಾಬಿನಲ್ಲಿ ಗಿಲ್‌ರವರನ್ನು ಜೈಲಿಗೆ ಹಾಕಿದಂತೆ ಇಲ್ಲೂ ಮುಂದಾಗಬಹುದು. ಇವೊತ್ತು ಕೆ.ಹೆಚ್. ಪಾಟೀಲ್‌ರವರು ಸಹಕಾರ ಕ್ಷೇತ್ರದಲ್ಲಿ ಚೆನ್ನಾಗಿ ದುಡಿದವರು, ವಿಷಯ ಚೆನ್ನಾಗಿ ತಿಳಿದವರು ಇದರಿಂದ ಇವರು ಸಹಕಾರ ಕ್ಷೇತ್ರದಲ್ಲಿ ಅಭಿವೃದ್ಧಿ ಮಾಡಲು ಅನೇಕ ಸುಧಾರಣೆಗಳನ್ನು ಮಾಡಿದ್ದಾರೆ, ಇವರನ್ನು ಏನಾದರೂ ಮಾಡಿ ಹೊಡೆದುಹಾಕಬೇಕು ಎನ್ನುವ ಒಂದು ಉದ್ದೇಶ ಇಟ್ಟುಕೊಂಡು ಸಹಕಾರ ಮಂತ್ರಿಗಳು ಮಾನ್ಯ ಉಪಗೃಹ ಸಚಿವರಾದ ಶ್ರೀಮಾನ್ ಮಾಣಿಕರಾವ್ ಪಾಟೀಲರವರ ಮೊರೆ ಹೊಕ್ಕಿದ್ದಾರೆ ಎಂದು ನನಗೂ ಗೊತ್ತಾಗಿದೆ. ಇದರ ಬಗ್ಗೆ ಇಲ್ಲಿ ಈಗ ಹೆಚ್ಚು ಹೇಳಲಿಕ್ಕೆ ಹೋಗುವುದಿಲ್ಲ. ಸಮಯ ಬಂದಾಗ ಪ್ರಸ್ತಾಪ ಮಾಡೋಣ. ನೀವು ನಡೆಯುವ ರೀತಿ ನೀತಿಗಳು ಹಾಗೂ ಪ್ರವೃತ್ತಿಗಳು ಎಲ್ಲರಿಗೂ ಅರಿವಾಗಲಿ ಎಂದು ಮತ್ತು ಎರಡು ಕೋಟಿ ಜನತೆಗೂ ಅರಿವುಂಟಾಗಲಿ ಎಂದು ಇಲ್ಲಿ ಸೆಕ್ಷನ್ 54ನ್ನು ತೆಗೆದುಕೊಂಡು ಬಂದು ಸರಕಾರವೇ ಸಂಘಗಳ ಆಡಳಿತ ವಹಿಸಿಕೊಳ್ಳುವುದು ಸರಿಯೇ ಎಂದು ಕೇಳುತ್ತೇನೆ. ನಾವು ನಡೆಸುತ್ತಿರುವ ಸಂಘಗಳನ್ನು ನಿಮ್ಮಕೈಯಲ್ಲಿ ತೆಗೆದುಕೊಳ್ಳಲು ಆಗುವುದಿಲ್ಲ ಎಂದು ಇಲ್ಲಿ ಸೆಕ್ಷನ್ 29ರ ಪ್ರಕಾರ ಸಸ್‌ಪೆಂಡು ಮಾಡಿದ್ದೀರಿ. ಸೆಕ್ಷನ್ 29ರ ಪ್ರಕಾರ ಎರಡು ವರ್ಷಗಳು ಮಾತ್ರ ಮಾಡಬಹುದು. ಆದರೆ ಮೂರನೇ ವರ್ಷ ಮಾಡಬೇಕಾದರೆ ಅಲ್ಲಿರುವ ಜನರಲ್ಲಿ ಕಮಿಟಿಯವರು ಒಪ್ಪಿದರೆ ಮಾಡಬಹುದು ಇಲ್ಲದಿದ್ದರೆ ಇಲ್ಲ. ಈ ಸಮಯಕ್ಕೆ ಇಲ್ಲಿ ನಾಯಕರಾಗಿದ್ದ ಶ್ರೀ ನಿಜಲಿಂಗಪ್ಪನವರು ಹೊರಬಂದರು ಮತ್ತು ವೀರೇಂದ್ರ ಪಾಟೀಲರವರು ಅಧಿಕಾರಕ್ಕೆ ಬಂದರು. ನಿಜಲಿಂಗಪ್ಪನವರ ರಾವಣ ರಾಜ್ಯದಲ್ಲಿ ಏನಾಗಿತ್ತು ಎನ್ನುವುದು ಎಲ್ಲರಿಗೂ ತಿಳಿದ ಅಂಶ. ಇವರ ಆಡಳಿತದಲ್ಲಿ ಯಾವ ಒಂದು ನೀತಿ ನಿಯಮಗಳೂ ಇರಲಿಲ್ಲ. ಹಿರಿಯಕ್ಕನ ಚಾಳಿ ಮನೆಮಂದಿಗೆಲ್ಲ ಎನ್ನುವ

ಗಾದೆಯಂತೆ ಹಿಂದೆ ಏನು ಅನ್ಯಾಯದ ನೀತಿ ನಿಯಮಗಳು ಇದ್ದವೋ ಅವನ್ನೇ ಈಗಲೂ ಮುಂದುವರೆಸಿಕೊಂಡು ಹೋಗಿದ್ದೀರಿ.

ಧಾರವಾಡದಲ್ಲಿ ಡಿಸ್ಟ್ರಿಕ್ಟ್ ಕೋ-ಆಪರೆಟೀವ್ ಸೊಸೈಟಿಯಲ್ಲಿ ಶ್ರೀ ಕೆ.ಹೆಚ್. ಪಾಟೀಲರು ಇದ್ದಾರೆ. ಇಲ್ಲಿನ ಸಂಸ್ಥೆಗಳು ಚೆನ್ನಾಗಿ ಕೆಲಸ ಮಾಡುತ್ತಿರುವುದರಿಂದ ಇದರ ಆಡಳಿತವನ್ನು ಸೆಕ್ಷನ್ 54ರ ಪ್ರಕಾರ ತೆಗೆದುಕೊಳ್ಳಲು ಆಗುವುದಿಲ್ಲ ಎನ್ನುವುದನ್ನು ಇದನ್ನು ನೋಡಿಕೊಂಡು ಬಂದ ಸಹಕಾರ ಕೋ-ಆಪರೇಟೀವ್ ಬ್ಯಾಂಕ್ ಅಧ್ಯಕ್ಷರು ಸರಕಾರಕ್ಕೆ ಪತ್ರ ಬರೆದಿದ್ದಾರೆ. ಸರಕಾರದವರಿಗೆ ವಿರೋಧ ಪಕ್ಷದ ಸದಸ್ಯರು ಮಾಡಿರುವಂತಹ ಸಹಕಾರ ಸಂಘಗಳು ಯಾವ ರೀತಿ ಕೆಲಸ ಮಾಡುತ್ತಿವೆ ಮತ್ತು ಎಂತಹ ಕರ್ತವ್ಯಶಾಲಿ ಜನಗಳಿದ್ದಾರೆ ಎನ್ನುವುದನ್ನು ತೋರಿಸಲು ಪತ್ರ ಬರೆದಿದ್ದೆವು. ಇಂದು ಎಲ್ಲ ಕಡೆಯಲ್ಲೂ ಸಹಕಾರ ಚಳುವಳಿಗೆ ಸಾಕಷ್ಟು ಉತ್ತೇಜನ ಕೊಡಬೇಕು ಎಂದು ಸಲಹೆ ಮಾಡಿದೆವು.

ಇದರಲ್ಲಿ ಕಾಂಗ್ರೆಸ್ ಹಾಗೂ ಇತರ ಪಕ್ಷಗಳು ಎಂದು ಇಲ್ಲ. ನಮ್ಮಲ್ಲಿ ರೆಡ್ಡಿ ಬ್ಯಾಂಕಿದೆ. ಇದರಲ್ಲಿ ಶ್ರೀ ಆರ್.ಎಂ. ಪಾಟೀಲ, ಟಿ.ಈಲ್. ಹುಬ್ಬಿ ಛೇರ್ಮನ್ನರಾಗಿದ್ದಾರೆ. ನಾನು ನಾನ್‌ಕಾಂಗ್ರೆಸ್ಸಿಗ ಎಂದು ಇದ್ದರೂ ಇಲ್ಲಿ ಕೆಲಸಗಳು ಚೆನ್ನಾಗಿ ನಡೆಯುತ್ತಿವೆ. ನಮ್ಮಲ್ಲಿ ಸಹಕಾರ ಚಳುವಳಿಯಲ್ಲಿ ರಾಜಕೀಯ ಪ್ರವೇಶವೇ ಇಲ್ಲ. ಆದರೆ ನಮ್ಮ ದುರ್ದೈವ, ಇಂತಹ ಪವಿತ್ರ ಸಂಸ್ಥೆಗಳಲ್ಲಿ ಸರಕಾರದ ಪ್ರವೇಶವಿಲ್ಲದಿದ್ದರೂ ಕೆಲವು ಸಂಸ್ಥೆಗಳಿಗೆ ಸರಕಾರದವರೇ ಮುಂದೆ ಬಂದು ಹೆಚ್ಚು ದುಡ್ಡು ಕೊಡುತ್ತೇವೆಂದು ಕೊಟ್ಟು ತಮ್ಮ ಕೀರ್ತಿ ಪತಾಕೆಯನ್ನು ಹೆಚ್ಚಿಸಿಕೊಳ್ಳಲು ಈ ರೀತಿ ಮಾಡುತ್ತಿದ್ದಾರೆ. ಗದಗ್ ಕಾಟನ್‌ಮಾರ್ಕೆಟಿಂಗ್ ಸೊಸೈಟಿಯೊಳಗೆ ಸೆಕ್ಷನ್ 54ರಂತೆ ಅಧಿಕಾರ ತೆಗೆದುಕೊಳ್ಳಲು ನಿಮಗೆ ಆಗಲಿಲ್ಲ. ಈ ಸೊಸೈಟಿಯ ಮೂಲಕ ಎಲ್ಲರಿಗೂ ಸರಿಯಾಗಿ ಮಾಲು ಹಂಚಿಕೆಯಾಗುತ್ತಿರುವುದನ್ನು ಇಲ್ಲಿನ ಡಿಸ್ಟ್ರಿಕ್ಟ್ ರಿಜಿಸ್ಟ್ರಾರ್‌ರವರು ನೋಡಿ ಮೊದಲು 13,000 ಚೀಲಗಳನ್ನು ಕಳುಹಿಸಿದ್ದರು ಮತ್ತೆ ಪುನಃ ಸರಿಯಾಗಿ ಜನತೆಗೆ ಹಂಚುತ್ತಾರೆ ಎಂದು 20 ಸಾವಿರ ಚೀಲಗಳನ್ನು ಕಳುಹಿಸಿದ್ದಾರೆ. ಸರಕಾರ ಬಿಟ್ಟರೂ ನಾವು ಜನರ ಪ್ರೀತಿಯನ್ನು ಬಿಡುವುದಿಲ್ಲ. ಎನ್ನುವ ಮಹತ್ವದ ದೃಷ್ಟಿಯಿಂದ ಇಂತಹ ಸಂಸ್ಥೆಗಳಲ್ಲಿ ಕೆಲಸ ಮಾಡಿಕೊಂಡು ಬರುತ್ತಿದ್ದೇವೆ. ನಿಮ್ಮಲ್ಲಿರುವ ರಿಜಿಸ್ಟ್ರಾರ್ ಕೂಡ ಸರಕಾರದ ಸೂಚನೆಯನ್ನು ಇಂತಹ ಸಂದರ್ಭಗಳಲ್ಲಿ ಒಪ್ಪಲು ಆಗುವುದಿಲ್ಲ ಎಂದು ಜನತೆಯ ಹಿತಕ್ಕಾಗಿ ಕೆಲಸ ಮಾಡುತ್ತಿದ್ದಾರೆ. ಹೀಗಿರುವಾಗ ಇಲ್ಲಿ ಸೆಕ್ಷನ್ 54ನ್ನು ಇನ್‌ವೋಕ್ ಮಾಡಬೇಕೆಂದು ನಿಮ್ಮ ಸಹಕಾರ ತತ್ವವನ್ನು ಬದಿಗೊತ್ತುವುದು ಅನ್ಯಾಯವಲ್ಲವೇ? ವಿರೋಧ ಪಕ್ಷಗಳವರು ಸಂಸ್ಥೆಗಳನ್ನು ಚೆನ್ನಾಗಿ ನಡೆಸುತ್ತಿದ್ದಾರೆ ಎಂದು ಸೆಂಟ್ರಲ್ ಬ್ಯಾಂಕಿನವರು ಹೇಳಿರುವ ಮಾತುಗಳನ್ನು ಕೋರ್ಟಿನಲ್ಲಿ ಹೇಳಿ ಅಲ್ಲಿಂದ ಹೈಕೋರ್ಟಿನವರೆಗೆ ಹೋದರೂ ನಿಮ್ಮವಾದವನ್ನು ಅವರು ಒಪ್ಪಲಿಕ್ಕೆ ಆಗಲಿಲ್ಲ. ಇರುವ ಕಾನೂನನ್ನು ನೀವು ಅದಲು ಬದಲುಮಾಡಲಿಕ್ಕೆ ಬರುವುದಿಲ್ಲ. ಹಾಗಿದ್ದರೂ ಇವೊತ್ತು ಕೆ.ಹೆಚ್. ಪಾಟೀಲರನ್ನು ಏನಾದರೂ ಮಾಡಿ ಹೊಡೆಯಬೇಕು ಎಂದರೂ ಆಗುವುದಿಲ್ಲ? ಇದನ್ನು ತಡೆಯುವ ಧೀರ ಶಕ್ತರು ನಮ್ಮಲ್ಲಿ ಯಾರೂ ಇಲ್ಲ ಎಂದು ತಿಳಿದುಕೊಂಡಿದ್ದಿರೇನು? ಕೋರ್ಟಿಗೆ ಹೋಗಿ ವಾದ ಮಾಡಿದರೋ ಅಲ್ಲೂ ಕೂಡ ಸರಿಯಾಗಿ ಸಮರ್ಥನೆ ಮಾಡಲಿಕ್ಕೆ ಆಗಲಿಲ್ಲ. ಸರಕಾರ ಒಂದು

ನಿರ್ಣಯ ಮಾಡಿ ಹೈಕೋರ್ಟಿಗೆ ಕಳುಹಿಸಿಕೊಟ್ಟರೂ ಸಹಕಾರ ಕಾಯಿದೆಯ 54 ಮತ್ತು 29ರ ಪ್ರಕಾರ ಮಾಡಲು ಆಗುವುದಿಲ್ಲ ಎಂದು ಹೇಳಿದುದನ್ನು ಯಾರೂ ವಿಚಾರ ಮಾಡಲಿಲ್ಲವೇನು? ನಮ್ಮಕಡೆ ಇರುವ ಸಂಸ್ಥೆಗಳಲ್ಲಿ 15 ಮಂದಿ ಚುನಾಯಿತ ಸದಸ್ಯರಿದ್ದಾರೆ. ಸೆಕ್ಷನ್ 29ರಂತೆ ಮೂರು ಮಂದಿ ಮಾತ್ರ ಹೊರಗಿನವರು ಇರಬೇಕು ಇದಕ್ಕಿಂತ ಹೆಚ್ಚಾಗಿ ಇರುವಂತಿಲ್ಲ. ನಮ್ಮಲ್ಲಿ 15 ಜನ ಚುನಾಯಿತರಾದವರು ಇರಬೇಕು ಎಂದು ಇದ್ದರೂ ಇನ್ನೊಬ್ಬರನ್ನು ಸರಕಾರ ನಾಮಿನೇಟು ಮಾಡಿ 16 ಜನ ಎಂದು ಮಾಡಿದ್ದಾರೆ. ಇದರಲ್ಲಿ ಜಿಲ್ಲೆಯ ಎಲ್ಲ ಆಫೀಸರಗಳೂ ಇದ್ದಾರೆ. ಇದರ ಜೊತೆಗೆ ಬೆಳಗಾಂನಲ್ಲಿರುವ ಅಗ್ರಿಕಲ್ಚರಲ್ ಡೆಪ್ಯುಟಿ ಡೈರೆಕ್ಟರ್ ಇರಬೇಕೆಂದು ನಾಮಿನೇಟ್ ಮಾಡಿದ್ದಾರೆ. ನಾಮಿನೇಟೆಡ್ ಸದಸ್ಯರನ್ನು ಮಾಡುವಾಗ ಸರಿಯಾಗುತ್ತಾ ಎಂದು ಅಂದು ಇದ್ದ ಶ್ರೀ ನಿಜಲಿಂಗಪ್ಪನವರು ಕೂಲಂಕುಷವಾಗಿ ವಿಚಾರಮಾಡಿ ತಂದರು. ಇದನ್ನು ಮುಂದೆಬರುವ ನಾಯಕರಾದ ಶ್ರೀ ವೀರೇಂದ್ರ ಪಾಟೀಲರೂ ಅನುಸರಿಸುತ್ತಾರೆಂದು ಮಾಡಿದರು. ಅಲ್ಲದೆ ಅವರು ನಾನು ಇರುವುದರೊಳಗಾಗಿಯೇ ಶ್ರೀ ಕೆ.ಎಚ್. ಪಾಟೀಲರವರನ್ನು ಹತಮಾಡಿದರೆ ಸರಿಯಾಗುತ್ತದೆ ಎಂದು ಅವರು ತಮ್ಮ ಶೌರ್ಯ ಪ್ರತಾಪವನ್ನು ತೋರಿಸಿದರು ಮತ್ತು ಅದಕ್ಕೆ ತಕ್ಕಂತಹ ಆದೇಶಗಳನ್ನು ಕೊಡಲು ನಿಮ್ಮ ಇಲಾಖೆಯಲ್ಲಿರುವ ಲಾ ಡಿಪಾರ್ಟ್‌ಮೆಂಟಿನ ಸೆಕ್ರೆಟರಿಗಳು, ಡೆಪ್ಯುಟಿ ಸೆಕ್ರೆಟರಿಗಳು ಇತ್ಯಾದಿ ಎಲ್ಲ ಅಧಿಕಾರಿಗಳನ್ನು ಸೇರಿಸಿಕೊಂಡು ಹೇಗೆ ಮಾಡಬೇಕು ಎಂದೂ ಆಲೋಚನೆ ಮಾಡಿದರು. ಇಂತಹ ರಾಕ್ಷಸೀ ಕೃತ್ಯಕ್ಕೆ ನಾವೇನು ಹೇಳಬೇಕೋ ಗೊತ್ತಾಗುತ್ತಿಲ್ಲ.

ಇಲ್ಲಿ ವಿವೇಕವಂತರು ಇದ್ದಾರೆ, ಒಳ್ಳೆಯ ಜ್ಞಾನವನ್ನು ಪಡೆದವರು ಇದ್ದಾರೆ, ಮಹಿಳೆಯರು ಇದ್ದಾರೆ, ಅವರಲ್ಲಿ ಪ್ರಾರ್ಥನೆ ಮಾಡುತ್ತೇನೆ, ನಿಮ್ಮಲ್ಲಿ ವಿವೇಕ ಇರುವುದಾದರೆ ಒಬ್ಬರನ್ನು ಹತ್ಯಾಕಾಂಡ ಮಾಡುವುದು ಸರಿಯೇ, ಅದನ್ನು ವಿಮರ್ಶೆ ಮಾಡಿ ಎಂದು ನಾನು ತಮ್ಮಲ್ಲಿ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ.

ಸೆಕ್ಷನ್ 29ರಲ್ಲಿ 3 ಜನ ನೇಮಕ ಮಾಡಬೇಕು ಎಂದು ಮಾಡಿದ್ದೀರಿ. ಆದರೆ ಅದರಲ್ಲಿ ಅಗ್ರಿಕಲ್ಚರ್‌ನಲ್ಲಿ ಟೆಕ್ನಿಕಲ್ ಎಕ್ಸ್‌ಪರ್ಟ್ ಆದವರು ಒಬ್ಬರನ್ನು ನೇಮಕಮಾಡಿದರೆ ಸಾಕು. ಈಗ ಇಬ್ಬರನ್ನು ನೇಮಕ ಮಾಡುವುದಕ್ಕೆ ಹೊರಟಿದ್ದೀರಿ. ಅದರಲ್ಲಿ ನಿಮಗೆ ಬೇಕಾದಂಥವರನ್ನು ನೇಮಕ ಮಾಡುತ್ತೀರಿ. ದಾವಣಗೆರೆಯಲ್ಲಿ ಶ್ರೀಮಾನ್ ಸಿದ್ಧವೀರಪ್ಪನವರು ಇರುವ ಸೊಸೈಟಿಯಲ್ಲಿ 3 ಮಂದಿ ನೇಮಕ ಮಾಡಿದ್ದರಿಂದ ಈ ಹತ್ಯಾಕಾಂಡಕ್ಕೆ ದಾರಿಯಾಯಿತು. ಆದುದರಿಂದ ಅಗ್ರಿಕಲ್ಚರನಲ್ಲಿ ಎಕ್ಸ್‌ಪರ್ಟ್ ಆದವರು ಒಬ್ಬರನ್ನು ನೇಮಕ ಮಾಡಿದರೆ ಸಾಕು. ಇದನ್ನು ಅಮೆಂಡ್‌ಮೆಂಟ್ ಮಾಡಬೇಕು ಎಂದು ಹೇಳುತ್ತೇನೆ.

ಇನ್ನು ಸೆಕ್ಷನ್ 54. ಈ ಸೆಕ್ಷನ್ ಪ್ರಕಾರ ಏನಾದರೂ ಆ್ಯಕ್ಷನ್ ತೆಗೆದುಕೊಳ್ಳುವ ಮೊದಲು ಅದರ ವಿವರಣೆ ಕೇಳುವುದಕ್ಕೆ ಅವಕಾಶ ಕೊಡಬೇಕು. ಸಹಕಾರಿ ಸಂಘದವರು ನಿಮ್ಮನ್ನು ದುಡ್ಡು ಕೇಳುತ್ತಾರೆ. ನೀವು ನಿಮ್ಮಹತ್ತಿರ ದುಡ್ಡು ಇಲ್ಲ ಎಂದು ಹೇಳುವುದು ಸರಿಯಲ್ಲ. ಅವರಿಗೆ ಹಣ ಕೊಡಿ. ಮ್ಯಾನೇಜ್‌ಮೆಂಟ್‌ನವರನ್ನು ನಿಮ್ಮ ಆಸ್ತಿ ಬರೆದುಕೊಡಿ ಎಂದರೆ ಬರೆದುಕೊಡುತ್ತಾರೆ. ಇದರಲ್ಲಿ ಎಷ್ಟೋ ನ್ಯಾಯ, ಅನ್ಯಾಯಗಳು ನಡೆದಿವೆ. ಕಳ್ಳನು ಒಂದೇ ಸುಳ್ಳನೂ ಒಂದೇ, ಸತ್ಯವಂತನೂ ಒಂದೇ. ಈ ರೀತಿ ಮಾಡುವುದನ್ನು ದೂರ ಮಾಡಬೇಕು. ಆದುದರಿಂದ ಇದನ್ನು

ತೆಗೆದುಹಾಕುತ್ತೇವೆ ಎಂದು ಹೇಳಿದರೆ ನಿಮ್ಮಿಂದ ಪ್ರಗತಿಶೀಲರಿಗೆ ಅಭಿನಂದನೆಯನ್ನು ಸಭಾಧ್ಯಕ್ಷರ ಮೂಲಕ ಸಲ್ಲಿಸುತ್ತೇನೆ.

ಇನ್ನು ಸೆಕ್ಷನ್ 57ರಲ್ಲಿ ಸ್ಟೇಟ್ ಕೋ-ಆಪರೇಟಿವ್ ಯೂನಿಯನ್‌ಗೆ ಸಬ್‌ಸ್ಕ್ರಿಪ್ಷನ್ ಎಲ್ಲಾ ಸೊಸೈಟಿಯವರು ಕೊಡಬೇಕೆಂದು ಮಾಡಿದ್ದೀರಿ. ಇದರಿಂದ ಎಷ್ಟು ಆಗುತ್ತದೆ ಎನ್ನುವುದನ್ನು ನೋಡಬೇಕು. ಮೈಸೂರು ರಾಜ್ಯದಲ್ಲಿರುವ ಸಹಕಾರಿ ಸಂಘಗಳು ಸಹಾಯ ಪಡೆಯಲಿ, ಸಹಾಯ ಪಡೆಯದೇ ಇರಲಿ, ಅವರು ಸಬ್‌ಸ್ಕ್ರಿಪ್ಷನ್ ಕೊಡಬೇಕು. ಹಾಗೆ ನಮ್ಮ ರಾಜ್ಯದಲ್ಲಿ 20 ಸಾವಿರಕ್ಕೂ ಹೆಚ್ಚಿಗೆ ಸಹಕಾರಿ ಸಂಘಗಳು ಇವೆ. ಒಂದೊಂದು ಸಂಘವು 5-5 ರೂಪಾಯಿನಂತೆ ಕೊಟ್ಟರೂ ಕೂಡ ಬೇಕಾದಷ್ಟು ಆಗುತ್ತದೆ. ಪ್ರತಿಯೊಂದು ಸಹಕಾರಿ ಸಂಘಗಳು ಆಡಿಟ್ ಛಾರ್ಜು ಯಾವ ರೀತಿ ವಸೂಲ್ಮಾಡುತ್ತಾರೋ ಅದೇ ರೀತಿ ಯೂನಿಯನ್‌ಗೂ ಕೂಡ ಸಬ್‌ಸ್ಕ್ರಿಪ್ಷನ್ ವಸೂಲ್ಮಾಡಬೇಕು ಎಂದು ಹೇಳುತ್ತೀರಿ. ಹಾಗಾದರೆ ಮಹಾರಾಷ್ಟ್ರದಲ್ಲಿ ಮಾಡಿದಂತೆ, ಪ್ರತ್ಯೇಕವಾಗಿ ಆಡಿಟ್ ಮಾಡುವುದನ್ನು ಜಾರಿಗೆ ತನ್ನಿ.

ಇನ್ನು ಕೋ-ಆಪರೇಟೀವ್ ಜರ್ನಲ್ ಎಂದು ಮಾಡಿದ್ದಾರೆ. ಅದರಲ್ಲಿ ಮೊದಲನೇ ಪೇಜು ನೋಡಿದರೆ ಶ್ರೀಮಾನ್ ನಾಡಗೌಡರ ಚಿತ್ರ, ಎರಡನೇ ಪೇಜು ನೋಡಿದರೆ ಶ್ರೀ ಜಮಖಂಡಿ ಮಠರವರ ಚಿತ್ರ ಮೂರನೇ ಚಿತ್ರ ಯಾವುದು ಎಂದು ನಾನು ಹೇಳಲಾರೆ. ಅದನ್ನು ಬಿಟ್ಟರೆ ಮತ್ತೇನು ಮಾಡಿದ್ದೀರಿ?

ಇನ್ನು ಸೊಸೈಟಿಗಳ ಹತ್ಯಾಕಾಂಡ ನೋಡಿದರೆ ನಿಮಗೆ ಏನು ಧೈರ್ಯ ಇದೆಯೋ ಎಂದು ನಾನು ಹೇಳಲಾರೆ. ನನ್ನ ಕಾನ್‌ಸ್ಟಿಟ್ಯೂಯೆನ್ಸಿಯಲ್ಲಿ ಜನ ಕೇಳುತ್ತಿದ್ದಾರೆ. ಸಹಕಾರಿ ಸಂಘದಲ್ಲಿ 2 ವರ್ಷದಿಂದಲೂ ಡಿವಿಡೆಂಟ್ ಕೊಟ್ಟಿಲ್ಲ ಎಂದು ಶ್ರೀಮಾನ್ ಕೆ.ಹೆಚ್. ಪಾಟೀಲರೂ ಕೂಡ ಇದರಲ್ಲಿ ಪಾರ್ಟ್‌ನರ್ ಆಗುವುದಕ್ಕೆ ಬಂದಿದ್ದಾರೆ ಎಂದು ಜನ ತಿಳಿದುಕೊಂಡಿದ್ದಾರೆ. ಈ ವಿಷಯ ಶ್ರೀಮಾನ್ ನಾಡಗೌಡರಿಗೆ ಗೊತ್ತಿರಬೇಕು. ಆದುದರಿಂದ ಉಪಸಚಿವರಾದ ಶ್ರೀಮಾನ್ ಬಿ.ಎಲ್. ಗೌಡರನ್ನು ಅದರ ಉದ್ದೇಶ ಏನು ಎಂದು ಕೇಳುತ್ತೇನೆ. ಅವರು ಮೈಸೂರು ರಾಜ್ಯದ ಕೋ-ಆಪರೇಟಿವ್ ಸೊಸೈಟಿಯ ಒಬ್ಬ ಉಪಮಂತ್ರಿಗಳಾಗಿದ್ದಾರೆ. ಅವರು ಕೆ.ಹೆಚ್. ಪಾಟೀಲರು ಹೇಳುವುದನ್ನು ಒಪ್ಪುತ್ತಾರೆ. ಮಂತ್ರಿಗಳೇ ಆಗಲಿ, ಉಪಮಂತ್ರಿಗಳೇ ಆಗಲಿ ನಿಜವಾಗಿಯೂ ಈ ಸಹಕಾರಿ ಸಂಘಗಳನ್ನು ಅಭಿವೃದ್ಧಿ ಮಾಡಬೇಕು. ಈ ಸಹಕಾರಿ ಸಂಘಗಳಲ್ಲಿ ಅನುಭವ ಪಡೆದು ಬಂದ ಜನಗಳ ತೊಂದರೆಗಳನ್ನು ಕೇಳಿ. ಅದಕ್ಕೆ ತಕ್ಕ ಪರಿಹಾರವನ್ನು ಒದಗಿಸಬೇಕು. ಅಂಕಿಸಂಖ್ಯೆಗಳನ್ನು ನೋಡಿ ಹೇಳುತ್ತಾ ಇದ್ದೇನೆ. 54ನೇ ಸೆಕ್ಷನ್ ಪ್ರಕಾರ ಹಿಂದೆ ಏನು ಮಾಡಿದ್ದೀರಿ ಎಂದು ತಿಳಿದುಕೊಂಡು ಹೇಳುತ್ತಿದ್ದೇನೆ. ಮೈಸೂರು ರಾಜ್ಯದೊಳಗೆ ಯಾವ ಸಂಘಗಳೇ ಆಗಲಿ, ಅವನ್ನು ನೋಡಿದರೆ ನಿಮ್ಮ ಆಡಳಿತಗಾರರೇ ಇದ್ದಂಥ ಕರ್ನಾಟಕ ಸ್ಪಿನ್ನಿಂಗ್ ಮಿಲ್ ಆಗಲಿ, ಗುಲ್ಬರ್ಗ ಸ್ಪಿನ್ನಿಂಗ್ ಮಿಲ್ ಆಗಲಿ ಯಾವ ಮಿಲ್ ಆಗಲಿ ಸಕ್ಕರೆ ಕಾರ್ಖಾನೆ ಒಂದು ಬಿಟ್ಟರೆ ಅವು ಹೇಗೆ ಕೆಲಸ ಮಾಡುತ್ತಿವೆ ಎಂದು ನೋಡಿ ಎಲ್ಲ ಸರ್ಕಾರದವರು ತಮ್ಮ ಧೋರಣೆಯನ್ನು ಮಿತಿಗೊಳಿಸಿದ್ದರೋ ಅಲ್ಲಿ ಮಾತ್ರ ಸಹಕಾರಿ ಸಂಘ ಚೆನ್ನಾಗಿ ನಡೆಯುತ್ತಾ ಇದೆ. ಬಾಕಿ ಕಡೆಸರಿಯಾಗಿ ನಡೆಯುತ್ತಾ ಇಲ್ಲ. ವಾರನ್ ಹೆಸ್ಟಿಂಗ್ಸ್ ಇಂಪೀಚ್‌ಮಾಡಿದ ಹಾಗೆ ನಿಮ್ಮನ್ನು ಇಂಪೀಚ್

ಮಾಡಬೇಕಾಗುತ್ತದೆ ಇನ್ನೂ ಒಂದು ಅಂಶ ನಿಮ್ಮ ಗಮನಕ್ಕೆ ತರುವುದಾದರೆ, ಕೋ-ಆಪರೇಟಿವ್ ಪ್ರಿಂಟಿಂಗ್ ಸೊಸೈಟಿ ಎಂದು ಏತಕ್ಕೆ ಮಾಡಿದ್ದೀರಿ? ಕ್ಯಾಲೆಂಡರ್ ಮತ್ತು ಬ್ಲೀಚಿಂಗ್ ಮೆಷಿನ್ ಕೊಂಡುಕೊಳ್ಳುವ ವಿಚಾರದಲ್ಲಿ ಏನೋ ಹಸ್ತಕ್ಷೇಪ ಮಾಡಿದ್ದೀರಿ ಎಂದು ಗೊತ್ತಾಗಿದೆ. ಮೊದಲು ಒಂದು ರಾಮಪ್ರಿಯ ವಿಚಾರವಾಗಿ ಚರ್ಚೆ ಆಯಿತು. ಈಗ ಮತ್ತೊಂದು ರಾಮಪ್ರಿಯ ವಿಚಾರ ಕೋ-ಆಪರೇಟಿವ್ ಡಿಪಾರ್ಟ್‌ಮೆಂಟಿನಲ್ಲಿ ಬಂದಿದೆ. ನಾವು ಏನು ಮಾಡುವುದು, ಸಹಕಾರ ಸಂಘದವರು ಖರೀದಿ ಮಾಡಿದ್ದಾರೆ ಎಂದು ಹೇಳಬಹುದು. ಅದಕ್ಕೆ ಕೊಟ್ಟ ಹಣ ಯಾರದು? ನೀವು ಹಣ ಕೊಡಲಿಲ್ಲವೇ? ಇದೇ ರೀತಿಯಾಗಿ ಕೋ-ಆಪರೇಟೀವ್ ಯೂನಿಯನ್‌ನವರು ಧಾರವಾಡದಲ್ಲಿ ಒಂದು ಮನೆಯನ್ನು ಲಕ್ಷಾಂತರ ರೂಪಾಯಿ ಕೊಟ್ಟು ತೆಗೆದುಕೊಂಡಿದ್ದಾರೆ. ಇಂಥ ಅನೇಕ ಉದಾಹರಣೆಗಳನ್ನು ಕೊಡಬಹುದು.

ಎಲ್ಲರೂ ಮಾತನಾಡಿದ ಮೇಲೆ ಉತ್ತರ ಕೊಡುವಾಗ ಇನ್ನು ಏನಾದರೂ ವಿಷಯಗಳಿದ್ದರೆ ಅವನ್ನು ತಿಳಿಸಬೇಕೆಂದಿದ್ದೇನೆ. ನಾನು ಉತ್ತರ ಕೊಡತಕ್ಕ ಸಂದರ್ಭ ಬರಲಾರದೆಂದು ತಿಳಿಸಿದ್ದೇನೆ. ಮಾನ್ಯ ಬಿ.ಎಲ್. ಗೌಡರು ನ್ಯಾಯಾನ್ಯಾಯಗಳನ್ನು ತೂಗಿ ನಾನು ತಂದಿರುವ ತಿದ್ದುಪಡಿಗಳನ್ನು ಒಪ್ಪಿಕೊಳ್ಳುತ್ತಾರೆಂಬ ವಿಶ್ವಾಸ ನನಗಿದೆ.

54ನೇ ಸೆಕ್ಷನ್ ಪ್ರಕಾರ ಇಡೀ ಭಾರತದಲ್ಲಿ ಎಲ್ಲಿಯಾದರೂ ಸೂಪರ್ ಸೀಡ್ ಆಗಿರತಕ್ಕ ನಿದರ್ಶನಗಳು ಇದ್ದರೆ ಮಾನ್ಯ ಮಂತ್ರಿಗಳು ಹೇಳಲಿ. ನಾನು ಈ ಸಹಕಾರ ಕ್ಷೇತ್ರದಿಂದಲೇ ನಿವೃತ್ತಿಯಾಗುತ್ತೇನೆ.

ಸೆಕ್ಷನ್ 121ರೊಳಗೆ ಯಾವುದಾದರೂ ಮಾಡಿಫಿಕೇಶನ್ ಮಾಡಬಹುದು ಎಂದಿದೆ. ಅದಕ್ಕೇನೂ ಪ್ರಶ್ನೆ ಇಲ್ಲ. ಶಾಸನಸಭಾ ರಂಗಗಳಲ್ಲಿ ಬೇಕಾದಷ್ಟು ಅನುಭವವನ್ನು ವ್ಯಕ್ತಪಡಿಸಿ ಕಾಯಿದೆ ಇರುವುದನ್ನು ತಿದ್ದುವುದಕ್ಕಾಗಲೀ ಇಂತಹ ಸೆಕ್ಷನ್ ತರಬಾರದು ಎಂದಾಗಲೀ ಹೇಳಬಹುದು. ಸೆಕ್ಷನ್ 121ನ್ನು ಅನುಸರಿಸಿ ಇಂತಹ ತಿದ್ದುಪಡಿ ಇಂತಹ ಸೊಸೈಟಿಗೆ ಹೀಗೆ ಆಗಬೇಕು ಎಂಬುದಾಗಿ ಏತಕ್ಕೆ ಹೇಳಬೇಕು.

ಮಾನ್ಯ ಶ್ರೀ ನಂಜೇಗೌಡರು ಸಾಮಾನ್ಯವಾಗಿ ಯಾವ ಒಂದು ವಿಷಯವನ್ನು ಪ್ರಸ್ತಾಪ ಮಾಡದೆ, ಈ ತಿದ್ದುಪಡಿಯನ್ನು ಒಪ್ಪಿಕೊಂಡರೆ ಸರ್ಕಾರಕ್ಕೆ ಒಳ್ಳೆಯದು ಎಂದು ಹೇಳಿದ್ದಾರೆ. ಅವರಿಗೆ ನಾನು ಕೃತಜ್ಞನಾಗಿದ್ದೇನೆ. ಈ ಆ್ಯಕ್ಟನ ಬದಲಾವಣೆ ಮಾಡುವುದಕ್ಕೆ ಬೇರೊಂದು ಕಮಿಟಿಯನ್ನು ಮಾಡಿದ್ದಾರೆ. ಆದರೆ ಅದರಿಂದ ಸಾಕಷ್ಟು ತಿದ್ದುಪಡಿ ಬರುವುದಿಲ್ಲ. ಪಾಟೀಲರು ಈ ತಿದ್ದುಪಡಿಯನ್ನು ಅವರ ಒಂದು ಸೊಸೈಟಿ ಬಗ್ಗೆ ತಂದಿದ್ದಾರೆ ಎಂದು ಹೇಳದೆ ಈ ತಿದ್ದುಪಡಿ ಸಹಕಾರ ದೃಷ್ಟಿಯಿಂದ ಅದು ಸಾಧುವಾದುದು ಎಂಬುದಾಗಿ ತಿಳಿದುಕೊಳ್ಳಬೇಕು. ಇನ್ನು ನನ್ನ ಗದಗ್ ಸೊಸೈಟಿಗೆ ಸಂಬಂಧವಾಗಿ ಈ ಸಭೆಯನ್ನು ತಪ್ಪು ಅರ್ಥಕ್ಕೆ ಒಯ್ಯುವ ರೀತಿಯಲ್ಲಿ ಮಾತನಾಡಬೇಡಿ. ಗದಗ್ ಕೋ-ಆಪರೇಟಿವ್ ಸೊಸೈಟಿಗೆ ಏನು ಅನ್ವಯಿಸಬೇಕೆಂಬುದನ್ನು ಹೇಳಿದ್ದೇನೆ. ನಿಮ್ಮ ಶ್ರೀ ನಾಡಗೌಡರು ಮಾಡುವ ಪಾಪ ಮಾನ್ಯ ಶ್ರೀ ಬಿ.ಎಲ್. ಗೌಡರಿಂದ ಆಗಬಾರದೆಂಬುದೇ ನನ್ನ ಆಶಯ.

ಈಗಾಗಲೇ ಮಾತನಾಡಿದಂತ ಯಾವತ್ತೂ ಮಾನ್ಯ ಸದಸ್ಯರು ಹಾಗೂ ಉತ್ತರ ಕೊಟ್ಟಂಥ ಮಾನ್ಯ ಉಪಸಚಿವರು ಸಹಕಾರ ಹಾಗೂ ಶಾಸನಗಳನ್ನು ಬಹಳ ಚೆನ್ನಾಗಿ ವಿಮರ್ಶೆ ಮಾಡಿದ್ದಾರೆ. ನನಗೆ ಬಹಳ ಸಂತೋಷವಾಗಿದೆ. ಈ ಸಭೆಯಲ್ಲಿ ಉಪಸಚಿವರಾಗಿರತಕ್ಕ ನಿಮಿತ್ತ ಮಾತ್ರಕ್ಕೆ ಪರಮ ಮಿತ್ರರಾದಂಥ ಶ್ರೀ ಗೌಡರು ಒಬ್ಬರನ್ನು ಬಿಟ್ಟರೆ, ಈ ತಿದ್ದುಪಡಿಯನ್ನು ಆ ಕಡೆ ಮತ್ತು ಈ ಕಡೆ ಸದಸ್ಯರು ಯಾರು ವಿರೋಧ ಮಾಡಿಲ್ಲ, ಅದಕ್ಕಾಗಿ ನನಗೆ ಬಹಳ ಸಂತೋಷವಾಗುತ್ತದೆ. ಇದು ವಿವೇಕವುಳ್ಳ ಜನರ ಅಭಿಪ್ರಾಯವಾಗಿರುವುದರಿಂದ ಅವರು ಇದನ್ನು ತಮ್ಮ ಮನಸಾರ ಒಪ್ಪಿದ್ದಾರೆ. ತತ್ವದ ದೃಷ್ಟಿಯಿಂದ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಸಮರ್ಥವಾಗಿ ವಿರೋಧ ಮಾಡಬೇಕಾಗಿತ್ತು. ನಿಜವಾಗಿ ಮಾಡಲಿಲ್ಲ. ಈ ಸಭೆ ಸಂಪೂರ್ಣವಾಗಿ ನನ್ನ ತಿದ್ದುಪಡಿಯನ್ನು ಒಪ್ಪಿದೆ. ಮಾನ್ಯ ಶ್ರೀ ಗೌಡರು ಮಾತನಾಡಿದರು. ಅವರ ಬಗ್ಗೆ ನನಗೆ ಅನುಕಂಪವಿದೆ. ಅವರು ವಕೀಲರೂ ಹೌದು. ಸಹಕಾರಿಗಳೂ ಹೌದು. ಸರ್ಕಾರದಲ್ಲಿ ಒಳಹೊಕ್ಕಿದ್ದಾರೆ. ನಾವು ಅದಕ್ಕಿಂತ ಹೆಚ್ಚು ಒಳಹೊಕ್ಕಿ ನೋಡೋಣ. ಆಗ ಈ ಸಂಬಂಧವಾಗಿ ಸರ್ಕಾರ ಮಾಡಿದ್ದು ಬಯಲಿಗೆ ಬರಬಹುದು. ಸರ್ಕಾರದ ತಪ್ಪನ್ನು ಮುಚ್ಚುವುದಕ್ಕೆ ಬಹಳ ಪ್ರಯತ್ನ ಮಾಡಿದ್ದಾರೆ. ಅದಕ್ಕೋಸ್ಕರ ನಾನು ಅವರಿಗೆ ಅಭಿನಂದನೆ ಸಲ್ಲಿಸುತ್ತೇನೆ. ಮಾನ್ಯ ಶ್ರೀ ನಾಡಗೌಡರು ಇದ್ದಿದ್ದರೆ ತಮ್ಮ ತಪ್ಪನ್ನು ಮುಚ್ಚುತ್ತಿರಲಿಲ್ಲ. ಆದ್ದರಿಂದ ಇವರಿಗೆ ಪ್ರಥಮ ವಂದನೆಗಳನ್ನು ನಾನು ಅರ್ಪಿಸುತ್ತೇನೆ. ಈ ತಿದ್ದುಪಡಿ ಹಿಂದಿನಿಂದ ಇರುವ ಸಂಘಗಳಿಗೆ ಅನ್ವಯಿಸುವುದಿಲ್ಲ. ಆದರೆ ಮುಂದೆಮಾಡತಕ್ಕ ಸಂಘಗಳಿಗೆ ಅದು ಆಗಬಹುದು. ಅನುಭವ ಪಡೆದ ಒಬ್ಬ ರೋಗಿ ಡಾಕ್ಟರಿಗಿಂತ ಮೇಲು ಎಂದು ಹೇಳುತ್ತಾರೆ. ಸಹಕಾರ ಸಂಘಗಳಲ್ಲಿ ನನಗೆ ಅನುಭವ ಕಡಿಮೆ ಇಲ್ಲ. ಇವತ್ತು ನಾನು ಸರ್ಕಾರಕ್ಕೆ ತಿಳುವಳಿಕೆಯನ್ನು ಸಹಕಾರ ದೃಷ್ಟಿಯಿಂದ ಹೇಳುತ್ತಿದ್ದೇನೆ. ನಿಮಗೆ ಇರತಕ್ಕ ಅವಕಾಶವನ್ನು ಕಲ್ಪಿಸಿಕೊಂಡು ನಿಮ್ಮ ಹೃದಯ ವಿವೇಕದಿಂದ ಮಾಡಿ, ಮೈಸೂರು ರಾಜ್ಯದ 7 ಸಂಘಗಳ ಪೈಕಿ ನನ್ನ 2 ಸಂಘಗಳಿಗೆ 54ನೇ ಸೆಕ್ಷನ್ ಇನ್‌ವೋಕ್ ಮಾಡಿದ್ದಾರೆ. ಉಳಿದಿದ್ದು ನಾವು ಮಾಡಲಿಲ್ಲವೆಂದು ಹೇಳಿದರು. ಈಗ ಯಾವುದಾದರೂ ಒಂದು ಸಹಕಾರ ಸಂಸ್ಥೆಯಲ್ಲಿ 2 ಲಕ್ಷಕ್ಕಿಂತ ಹೆಚ್ಚು ಬಂಡವಾಳವನ್ನು ಹಾಕಿದ್ದರೆ ಅಂಥಾ ಸಂದರ್ಭದಲ್ಲಿ ಸರ್ಕಾರದ ಅಥವಾ ಸಾರ್ವಜನಿಕರ ಹಿತದೃಷ್ಟಿಯಿಂದ 54ನೇ ಸೆಕ್ಷನ್ ಜಾರಿಗೆ ಬರಬೇಕು ಎಂದು ಇದೆ. ಎರಡು ಲಕ್ಷ ಎನ್ನುವುದಕ್ಕೆ 5 ಲಕ್ಷ ಎಂದು ಹಾಕಬೇಕು ಎಂದು ನಾನು ತಿದ್ದುಪಡಿಯನ್ನು ತಂದಿದ್ದೇನೆ. ಏತಕ್ಕೆಂದರೆ ಪ್ರತಿಯೊಂದು ಮಾರ್ಕೆಟಿಂಗ್ ಸೊಸೈಟಿಯಲ್ಲಿಯೂ ಬಹಳ ಹಣವನ್ನು ಹಾಕಿದೆ. ಈಗ ಸಣ್ಣ ಸಣ್ಣ ಸೊಸೈಟಿಗಳಲ್ಲಿ ಸರ್ಕಾರದ ಹಸ್ತಕ್ಷೇಪ ಮತ್ತು ದುರುಪಯೋಗ ಹೆಚ್ಚು ಹೆಚ್ಚು ನಡೆಯುತ್ತಿದೆ. ಆಡಳಿತ ಪಕ್ಷದವರು ಈ ಸಹಕಾರ ಸಂಸ್ಥೆಗಳ ಮುಖಾಂತರ ತಮಗೆ ಯಾರು ಬೇಕೋ ಅವರಿಗೆ ಸಹಾಯ ಮಾಡುತ್ತಾರೆ. ಯಾವ ಸೊಸೈಟಿಗಳಲ್ಲಿ ಸರ್ಕಾರದವರು ಹಣ ಸಹಾಯ ಮಾಡುತ್ತಾರೆ. ಸ್ಟೇಟ್ ಎಯ್ಡ್ ಕೊಡುತ್ತಾರೆ ಚುನಾವಣೆಯ ಕಾಲದಲ್ಲಿ ತಮಗೆ ಬೇಕಾದಂತ ವ್ಯಕ್ತಿಗೆ ಓಟನ್ನು ಗಳಿಸಿಕೊಂಡು ತಮಗೆ ಬೇಡವಾದ ವ್ಯಕ್ತಿಯನ್ನು ಚುನಾವಣೆಯಲ್ಲಿ ಉರುಳಿಸಬೇಕು ಎನ್ನುವ ದೃಷ್ಟಿಯನ್ನು ಇಟ್ಟುಕೊಂಡು ಸಹಕಾರಿ ಚಳುವಳಿಯಲ್ಲಿ ರಾಜಕೀಯ ಚಳುವಳಿಯನ್ನು ಬೆರೆಸಿ ಪವಿತ್ರವಾದ ಸಹಕಾರಿ ಚಳುವಳಿಯನ್ನು ಹಾಳು ಮಾಡುತ್ತಿದ್ದಾರೆ. ಚುನಾವಣೆಯ ಕಾಲದಲ್ಲಿ ಯಾರು ಮಂತ್ರಿಗಳ ಹಿಂದೆ ಇರುತ್ತಾರೆಯೋ ಯಾರು ಮಂತ್ರಿಗಳ ಕಾರಿನ ಜೊತೆಯಲ್ಲಿ ಓಡಾಡುತ್ತಾರೆಯೋ ಅವರಿಗೆ ಈ ಸಹಕಾರಿ ಸಂಸ್ಥೆಗಳ ಮುಖಾಂತರ

ಸಹಾಯ ಮಾಡುತ್ತಾರೆ. ಇದರ ಜೊತೆಗೆ ಚುನಾವಣೆಗಳಲ್ಲಿ ತಮಗೆ ಸಹಾಯ ಮಾಡಲು ಅಧಿಕಾರಿಗಳನ್ನು ಕರೆಯುತ್ತಾರೆ. ಇಂಥಾ ವ್ಯವಹಾರವನ್ನು ಮಾಡುವುದು ಸರಿಯಲ್ಲ. ಜನತೆಯ ಹಿತದೃಷ್ಟಿಯಿಂದ ಈ ಸಹಕಾರಿ ಚಳುವಳಿ ಚೆನ್ನಾಗಿ ನಡೆಯಬೇಕಾದರೆ ನಿಮ್ಮ ದುರ್ವ್ಯವಹಾರವನ್ನು ನಿಲ್ಲಿಸಬೇಕು. ಇಲ್ಲದೇ ಹೋದರೆ ಈ ಸಹಕಾರಿ ಚಳುವಳಿ ಹಾಳಾಗಿ ಹೋಗುತ್ತದೆ. ಹಿಂದೆ ಮೈಸೂರು ರಾಜ್ಯದಲ್ಲಿ ಬಹಳ ಉತ್ತಮವಾದ ರೀತಿಯಲ್ಲಿ ಸಹಕಾರಿ ಚಳುವಳಿಯನ್ನು ನಡೆಸಿದ್ದಾರೆ. ಇವೊತ್ತು ನಮ್ಮ ರಾಜ್ಯದಲ್ಲಿ ನಡೆಯತಕ್ಕಂಥ ಸಹಕಾರಿ ಚಳುವಳಿಯನ್ನು ನೋಡಿದರೆ ನಿಜವಾಗಿಯೂ ನಾಚಿಕೆಯಾಗುತ್ತದೆ. ನಾನು ಸ್ಪಷ್ಟವಾಗಿ ಪ್ರಾಮಾಣಿಕವಾಗಿ ಹೇಳುತ್ತೇನೆ. ಯಾವುದೇ ದೃಷ್ಟಿಯಿಂದ ಜನತೆಗೆ ಒಳ್ಳೆಯದನ್ನು ಮಾಡುವ ದೃಷ್ಟಿಯಿಂದ ಒಂದು ತಿದ್ದುಪಡಿಯನ್ನು ತರುವುದಾದರೆ ಅದನ್ನು ಸರ್ಕಾರದವರು ಸ್ವಾಗತ ಮಾಡಬೇಕೆಂದು ನಾನು ಹೇಳುತ್ತೇನೆ. ಅಷ್ಟೇ ಅಲ್ಲ, ಮಾನ್ಯ ಸಹಕಾರ ಮಂತ್ರಿಗಳು ಮಂತ್ರಿಗಳಾದವರ ಅಳಿಯ, ತಮ್ಮ, ಹೆಂಡತಿ, ಅಣ್ಣ ಮತ್ತು ಅವರ ಮಕ್ಕಳು ಯಾರೂ ಸಹಕಾರ ಸಂಘಗಳ ಚೇರ್ಮನ್ ಆಗಬಾರದು ಎಂದು ಕಾಯಿದೆ ಮಾಡುವುದಾದರೆ ನಾನು ಅದನ್ನು ಸ್ವಾಗತ ಮಾಡುತ್ತೇನೆ. ಇವೊತ್ತು ಸರ್ಕಾರದವರು ಯಾವ ಸೊಸೈಟಿಗಳಿಗೆ ಸಹಾಯ ಮಾಡುತ್ತಿದ್ದಾರೆ ಎಂದರೆ ಯಾವ ಸೊಸೈಟಿಯಲ್ಲಿ ಹಣದ ದುರ್ವಿನಿಯೋಗ ದುರುಪಯೋಗವಾಗುತ್ತವೆಯೋ ಅಂಥಾ ಸೊಸೈಟಿಗಳಿಗೆ ಸರ್ಕಾರದವರು ಕೇಂದ್ರ ಸರ್ಕಾರದಿಂದ ಬಂದಂಥ ಹಣವನ್ನು ಕೊಡುತ್ತಿದ್ದಾರೆ. ಮಾನ್ಯ ಉಪಮಂತ್ರಿಗಳಾದ ಶ್ರೀಮಾನ್ ಬಿ.ಎಲ್. ಗೌಡರಿಗೆ ಸಹಕಾರಿ ರಂಗದಲ್ಲಿ ಸಾಕಷ್ಟು ಅನುಭವ ಇದೆ. ಅವರು ಈ ಸಹಕಾರಿ ರಂಗದಲ್ಲಿರತಕ್ಕ ಲೋಪದೋಷಗಳನ್ನು ತೊಡೆದು ಹಾಕುವುದಕ್ಕೆ ಸಾಕಷ್ಟು ಪ್ರಯತ್ನ ಮಾಡುತ್ತಾರೆಂದು ನಾನು ನಂಬಿದ್ದೇನೆ.

ನನ್ನ 54ನೆ ಸೆಕ್ಷನ್ ತಿದ್ದುಪಡಿಯ ಪ್ರಕಾರ "ಅದರ್ ದ್ಯಾನ್‌ದಿ ಬೋರ್ಡ್ ಆಫ್ ಮ್ಯಾನೇಜ್‌ಮೆಂಟ್" ಎನ್ನುವ ವಾಕ್ಯವನ್ನು ಏನು ಸೇರಿಸಿದ್ದೇನೆ ಅದರ ಬಗ್ಗೆ ಶ್ರೀಮಾನ್ ಬಿ.ಎಲ್. ಗೌಡರು ಬೋರ್ಡ್ ಆಫ್ ಮ್ಯಾನೇಜ್‌ಮೆಂಟಿನವರನ್ನು ಬಿಟ್ಟು ಕೆಲಸ ಮಾಡುವುದಕ್ಕಾಗುವುದಿಲ್ಲ ಎಂದು ಹೇಳಿದ್ದಾರೆ, ನಾನು ಇದನ್ನು ಏತಕ್ಕೆ ಈ ತಿದ್ದುಪಡಿಯಲ್ಲಿ ತಂದಿದ್ದೇನೆ ಎಂದರೆ ರಾಜ್ಯದ ಎರಡು ಕೋಟಿ ಜನಗಳ ಹಿತದೃಷ್ಟಿಯಿಂದ ನಾನು ಈ ತಿದ್ದುಪಡಿಯನ್ನು ತಂದಿದ್ದೇನೆ. ರಾಜ್ಯದ ಹಣವನ್ನು ರಕ್ಷಣೆ ಮಾಡುವಂಥ ಕಾರ್ಯ ಇವರಿಗೆ ಬೇಕಾಗಿಲ್ಲ. ಇವರಿಗೆ ರಾಜ್ಯದ ಆಡಳಿತವನ್ನು ಮಾಡುವುದು ಬೇಕಾಗಿದೆ.

ಈಗ ಕೋ-ಆಪರೇಟಿವ್ ಎಕ್ಸ್‌ಪರ್ಟ್ ಕಮಿಟಿ ಏನಿದೆ ಅದರಲ್ಲಿ ತಮಗೆ ಯಾರು ಬೇಕೋ ಅಂಥವರನ್ನು ಮಾತ್ರ ನೇಮಕ ಮಾಡಿದ್ದಾರೆ. ಆ ಕಮಿಟಿಯಲ್ಲಿರತಕ್ಕವರಿಗೆ ಸಹಕಾರ ಚಳುವಳಿ ಎಂದರೆ ಏನು ಎಂಬುದು ತಿಳಿಯದೇ ಇರುವವರು ಇದ್ದಾರೆ. ಸಹಕಾರಿ ರಂಗದಲ್ಲಿ ಒಳ್ಳೆಯ ಅನುಭವಿಗಳು, ನಿಸ್ಪೃಹತೆಯಿಂದ ಕೆಲಸ ಮಾಡತಕ್ಕವರು ಇನ್ನೂ ಕೆಲವಾರು ಜನ ನಿಮ್ಮಲ್ಲಿಯೂ ಇದ್ದಾರೆ. ಅಂಥವರನ್ನು ಆ ಕಮಿಟಿಯಲ್ಲಿ ನೇಮಕ ಮಾಡಬಹುದಾಗಿತ್ತು. ಶ್ರೀಮಾನ್ ನಾಗನಗೌಡರು ಮತ್ತು ಶ್ರೀಮಾನ್ ಎಂ.ಆರ್. ಪಾಟೀಲರು ಮುಂತಾದವರು ಈ ಸಹಕಾರಿ ರಂಗದಲ್ಲಿ ಅನುಭವಶಾಲಿಗಳು ಇದ್ದಾರೆ. ಅಂಥಾ ಪ್ರಾಮಾಣಿಕರಾದ ಜನಗಳ ಸಲಹೆಗಳನ್ನು

ಪಡೆದು ಈ ಸಹಕಾರಿ ಕಾಯಿದೆಯಲ್ಲಿ ಜನತೆಯ ಹಿತದೃಷ್ಟಿಯಿಂದ ಕೆಲವಾರು ತಿದ್ದುಪಡಿಗಳನ್ನು ಮಾಡಬೇಕೆಂದು ನಾನು ವಿನಂತಿ ಮಾಡಿಕೊಳ್ಳುತ್ತೇನೆ.

ಸೆಕ್ಷನ್ 29ರ ಪ್ರಕಾರ 3 ಜನ ಸದಸ್ಯರನ್ನೇನು ನಾಮಕರಣ ಮಾಡಬೇಕೆಂದು ಹೇಳಿದ್ದಾರೆ. ಆ ಪೈಕಿ ಒಬ್ಬರು ಅಗ್ರಿಕಲ್ಚರ್ ಎಕ್ಸ್‌ಪರ್ಟ್ ಆದವರನ್ನು ನೇಮಕ ಮಾಡಬೇಕೆಂದು ನಾನು ಸೂಚನೆ ಮಾಡಿದ್ದೆ. ಅದನ್ನು ಮಾನ್ಯ ಉಪಮಂತ್ರಿಗಳು ಒಪ್ಪಿಕೊಳ್ಳಲಿಲ್ಲ. ಅದನ್ನು ಒಪ್ಪಿಕೊಂಡಿದ್ದರೆ ರೈತರ ಹಿತದೃಷ್ಟಿಯಿಂದ ಚೆನ್ನಾಗಿರುತ್ತಿತ್ತು.

ಇನ್ನೊಂದು ವಿಷಯವೇನೆಂದರೆ, ಸರ್ಕಾರದ ನೆರವಿನಿಂದ ನಡೆಯುವ ಸಹಕಾರ ಸಂಘಗಳ ಮೇಲೆ ಸರ್ಕಾರ ನಿಯಂತ್ರಣವನ್ನು ಇಟ್ಟುಕೊಳ್ಳುವ ವಿಷಯದಲ್ಲಿ ಸಹಕಾರ ಸಂಘಗಳ ಆರ್ಥಿಕ ವ್ಯವಹಾರಗಳ ಮೇಲೆ ಸರ್ಕಾರದ ನಿಯಂತ್ರಣ ಇರಬೇಕೆ ವಿನಃ ಸಂಘಗಳ ಆಡಳಿತ ಅಥವಾ ಸಂಘದ ಆಡಳಿತದ ಮೇಲೆ ಇರಬಾರದು ಎಂದು ನಾನು ಹೇಳುತ್ತೇನೆ. ಸೆಕ್ಷನ್ 30ರ ಪ್ರಕಾರ ನೋಟೀಸ್ ಕೊಟ್ಟರೆ ಫ್ರೊಟ್ರಾಕ್ಟ್ ಆಗುವುದು ಎಂದು ಹೇಳುವುದಾದರೆ ತಿದ್ದುಪಡಿ ಮಾಡಿ. ಅಧಿಕಾರಿಗಳು ಲಂಚಕ್ಕೊಳಗಾದರೆ, ಅಧಿಕಾರವಿದ್ದರೆ ಡಿಸ್‌ಮಿಸ್ ಮಾಡಿ. ಅದನ್ನು ಬಿಟ್ಟು ಫ್ರೊಟ್ರಾಕ್ಟ್ ಆಗುತ್ತದೆಂದರೆ ಹೇಗೆ? ನಾಳೆ ಆಕಾಶದಲ್ಲಿ ಅಳೆಯುವುದಕ್ಕೆ ಸಾಧ್ಯವೇ? ಗದಗ್ ಸೊಸೈಟಿಯನ್ನು ನೀವು ತೆಗೆದುಕೊಂಡಿರಿ. ರಿಜಿಸ್ಟ್ರಾರರು, ಅಸಿಸ್ಟೆಂಟ್ ರಿಜಿಸ್ಟ್ರಾರರು ಮುಂತಾದವರೆಲ್ಲಾ ಕೂಡಿ ಮಾಡಿರುವುದೇನು? ಫ್ರೊಟ್ರಾಕ್ಟ್ ಆಗಿಲ್ಲವೇ? ಆಗುವುದು ಆಗೇ ಆಗುವುದು. ಅದನ್ನು ಹಿಡಿದರೆ ನಿಮಗೆ ಸರೆಂಡರ್ ಆಗಬೇಕು. ನೀತಿ ತಪ್ಪಿದರೆ ಫ್ರೊಟ್ರಾಕ್ಟ್ ಆಗುವುದು. ಕೆ.ಹೆಚ್. ಪಾಟೀಲರಿಗೆ ಏನು ಅನ್ಯಾಯ ಮಾಡಿದರೂ ತಡೆದುಕೊಳ್ಳುವ ಶಕ್ತಿಯಿದೆ. ಉಳಿದವರಿಗೆ ಸಾಧ್ಯವಾಗುವುದಿಲ್ಲ. ಬಹಳ ಜೋಕೆ. ಮತ್ತೇನಾದರೂ ಮಾಡುತ್ತಾರೆ. ಅದಾಗದಹಾಗೆ ಸಹಕಾರ ಇಲಾಖೆಯನ್ನು ಜೋಪಾನ ಮಾಡಬೇಕು. ಬಿ.ಎಲ್. ಗೌಡರನ್ನು ಸಹಕಾರಿ ಇಲಾಖೆಯ ಉಪಮಂತ್ರಿಗಳನ್ನಾಗಿ ಮಾಡಬೇಕಾದರೆ ಅವರ ಅಗಾಧ ಅನುಭವ, ಜ್ಞಾನ ನೋಡಿ ಮಾಡಿದ್ದಾರೆ. ಅದನ್ನು ಅವರು ಉಳಿಸಿಕೊಳ್ಳಬೇಕು.

ಸೆಕ್ಷನ್ 57ರ ಬಗ್ಗೆ ಹೇಳುವಾಗ ಸಹಕಾರಿ ಯೂನಿಯನ್ನಿಗೆ ಡೊನೇಷನ್ ಕೊಡುವುದಿದೆ ಎಂದು ಹೇಳಿದರು. ಇಂದು ಇಡೀ ಇಂಡಿಯಾ ದೇಶದಲ್ಲಿ ನಮ್ಮ ಸಹಕಾರ ಇಲಾಖೆ ಎರಡನೆ ನಂಬರನ್ನು ಪಡೆದಿದೆ ಎಂದು ಹಿರಿಯ ಮಿತ್ರರು ಹೇಳಿದರು, ವರದಿಯಲ್ಲಿ ಆ ವಿಚಾರವಿರುವುದಿಲ್ಲ. ಮೈಸೂರು ರಾಜ್ಯದಲ್ಲಿ ಸುಳ್ಳು ವರದಿಯನ್ನು ಕೊಡುತ್ತಾರೆಂಬುದು ಎಲ್ಲರಿಗೂ ಗೊತ್ತಾಗುವುದಿಲ್ಲ. ರಾಜ್ಯದ ಮರ್ಯಾದೆ ಹೋಗುವುದೆಂದು ಎಲ್ಲವನ್ನು ಹೊರಗೆ ಹಾಕುವುದಿಲ್ಲ. ಅಂಕಿಸಂಖ್ಯೆಗಳನ್ನು ಕೊಡುವುದರಲ್ಲಿ ತಪ್ಪು ಅರ್ಥವನ್ನು ಕೊಡುವುದರಲ್ಲಿ ನಾಡಗೌಡರನ್ನು ಮೀರಿಸುವರು ಯಾರೂ ಇಲ್ಲ. ನಿಜಲಿಂಗಪ್ಪನವರು ಬಹಳ ಪರಿಣತರು. ವರದಿ ನೋಡಿ ಅದರ ಆಧಾರದ ಮೇಲೆ ಎರಡನೆಯ ನಂಬರ್ ಎಂದು ಹೇಳಿರಬಹುದು. ನಾನು ದಾವಣಗೆರೆಗೆ ಹೋಗಿದ್ದೆ, ಅಲ್ಲಿ ನಾಟಕವಾಡಿದ್ದನ್ನು ನೋಡಿದ್ದೇನೆ. ನಿಜಲಿಂಗಪ್ಪನವರ ಕಾಲದಲ್ಲಿ ಜಾಯಿಂಟ್ ಫಾರ್ಮಿಂಗ್ ಸೊಸೈಟಿ ಎಷ್ಟು ಜಾರಿಗೆ ಕೊಡಲಾಗಿದೆ? ಎಷ್ಟು ಯಶಸ್ವಿಯಾಗಿದೆ? ಅಮಲಿನಲ್ಲಿ ತಂದಿರುವುದರಲ್ಲಿ ಯಾವುದು ಜಯಪ್ರದವಾಗಿದೆ? ರಿಜಿಸ್ಟ್ರಾರರು 39,903 ರೂಪಾಯಿ ಕೊಟ್ಟಿರುವುದಾಗಿ ಹೇಳುತ್ತಾರೆ.

ನಾನೊಬ್ಬನೇ 10 ಸಾವಿರ ರೂಪಾಯಿ ಕೊಟ್ಟಿರುವುದಾಗಿ ಹೇಳುತ್ತಾರೆ. ನಾನೊಬ್ಬನೇ 10 ಸಾವಿರ ರೂಪಾಯಿ ಕೊಟ್ಟಿದ್ದೇನೆ. ಕೆಲವನ್ನು ಬಿಟ್ಟರೆ ಉಳಿದ ಸೊಸೈಟಿಗಳನ್ನು ನೋಡಿದರೆ ಸಂಶಯ ಬರುವ ರೀತಿಯಲ್ಲಿ ಆಡಳಿತ ನಡೆಯುತ್ತಿದೆ. 20 ಸಾವಿರ ಸೊಸೈಟಿಗಳಿದ್ದರೂ ಒಂದು ಸೊಸೈಟಿಗೆ 5 ರೂಪಾಯಿ ಆದರೂ ಕೊಡುವ ಹಾಗೆ ಮಾಡಿಲ್ಲ. ಸೊಸೈಟಿಗೆ 2 ಲಕ್ಷ ಲಾಭ ಬಂದರೆ 12 ಸಾವಿರ ಯೂನಿಯನ್ನಿಗೆ ಕೊಡಬೇಕೆಂದು ಹೇಳುವುದು ನ್ಯಾಯವೇ? ಯೂನಿಯನ್ ಡೈರೆಕ್ಟರಾದಾಗ ನಾನು ಯಾವ ರೀತಿ ವಿರೋಧ ಮಾಡಿದೆ ಎಂದು ಗೊತ್ತಿರಬಹುದು. ತಲೆಯಿಲ್ಲದಿದ್ದರೆ ಬರೀ ಕೈ ಎತ್ತುವವರಿಗೆ ಬಿಟ್ಟು ಬಿಡಬೇಕು. ಪ್ರಜಾಪ್ರಭುತ್ವ ನಾವೇನು ಮಾಡಲು ಸಾಧ್ಯ ಎಂದು ಹೇಳಬಹುದು. ಎಲ್ಲೆಲ್ಲೂ ನಿಮ್ಮ ಕೈವಾಡ ಇದೆ. ಎಲ್ಲೆಲ್ಲಿ ಓಟು ಹಾಕಲು ಅಧಿಕಾರಿಗಳು ಏನು ಮಾಡುತ್ತಾರೆಂಬುದನ್ನು ನಾನಲ್ಲಿ ಹೇಳುವುದಿಲ್ಲ. ಬೇರೆ ಸಂದರ್ಭದಲ್ಲಿ ಹೇಳುತ್ತೇನೆ. ಯೂನಿಯನ್ ಬಗ್ಗೆ ಕೆಟ್ಟ ಮಾತು ಹೇಳುವುದಿಲ್ಲ. ಅದು ಮದರ್ ಆಫ್ ದಿ ಇನ್‌ಸ್ಟಿಟ್ಯೂಷನ್. ಆದರೆ ಯೂನಿಯನ್ ಹಣ ಹೇಗೆ ವಸೂಲು ಆಗುತ್ತಿದೆಯೆಂಬುದನ್ನು ನೋಡಬೇಕು. ಸಹಕಾರಿ ಸಂಘದಲ್ಲಿ ಮಾಡುವ ಪ್ರಚಾರ ಮಾಡಿ ಬೇರೆ ರೀತಿಯಲ್ಲಿ ಪ್ರಚಾರ ಮಾಡುತ್ತಿದ್ದಾರೆ. ಇದರಿಂದ ಕೆಟ್ಟ ಹೆಸರು ಬರುತ್ತದೆ. ಹಣ ಪೋಲಾಗುತ್ತಿದೆ. ಸಹಕಾರಿ ರಂಗದಲ್ಲಿ ಯೂನಿಯನ್ನಿಗೆ 12 ಭಾಗ ಕೊಡಬೇಕು ಆದರಿಂದ ಹೆಚ್ಚು ಲಾಭವಾಗುವುದಿಲ್ಲ. ಬೇರೆ ರೀತಿ ಮಾಡೋಣ ಎಂದು ಬುದ್ಧಿ ಹೇಳಬಾರದು. ಲಾಭ ಬಂದರೆ ನೂರು ರೂಪಾಯಿ ಕೊಡಬಹುದು ಎಂದು ಅಮೆಂಡ್‌ಮೆಂಟ್ ಇದೆ. 10 ರೂಪಾಯಿಗಳಿಸಿದರೂ, ಸಾವಿರ ರೂಪಾಯಿಗಳಿಸಿದರೂ ಕೊಡಬಹುದು.

ಇನ್ನು ಸೆಕ್ಷನ್ 29 ನೋಡೋಣ. ರಾಮಕೃಷ್ಣ ಹೆಗಡೆಯವರು ಈ ಸಭೆಯಲ್ಲಿ ಒಂದು ಆಶ್ವಾಸನೆಯನ್ನು ಕೊಟ್ಟರು, ಶಕ್ಯವಿದ್ದರೆ ಕೋ-ಆಪರೇಷನ್ ಇಲಾಖೆಯನ್ನು ತೆಗೆಯಬೇಕೆಂದಿದ್ದೇವೆಂದು ಹೇಳಿದರು. ಮೂರು ಜನರನ್ನು ನಾಮಿನೇಷನ್ ಮಾಡುವುದಕ್ಕೆ ಬದಲಾಗಿ ಇಬ್ಬರನ್ನು ಮಾಡಬಹುದು.

121ನೆಯ ಸೆಕ್ಷನ್ ತಿದ್ದುಪಡಿ ಸಲುವಾಗಿ ಕೆ.ಹೆಚ್. ಪಾಟೀಲರು ಏನೂ ಹೇಳಿಲ್ಲವೆಂದು ಬಿ.ಎಲ್. ಗೌಡರು ಹೇಳಿದರು. ನಾವು ಇಲ್ಲಿಯವರೆಗೆ ಈ ಸೆಕ್ಷನ್ ಆಧಾರದ ಮೇಲೆ ನೋಟೀಫಿಕೇಶನ್ ಹೊರಡಿಸುತ್ತಿದ್ದೇವೆ. ಮಂತ್ರಿಯಾಗಿ ಕೆಲಸ ಮಾಡುವವರಿಗೆ ಅನುಮಾನವಿದ್ದರೆ ಅವರು ವಿಚಾರ ಮಾಡಲಿ ಕೆಲವರು ಇದು ಹುಚ್ಚು ಆಡಳಿತ ಎಂದು ಹೇಳಬಹುದು. ಸೆಕ್ಷನ್ 121 ಏನಿದೆ, ಏನು ಮಾಡುತ್ತಿದ್ದಾರೆ ಎಂಬುದನ್ನು ಅಧ್ಯಕ್ಷರ ಗಮನಕ್ಕೆ ತರುತ್ತೇನೆ. ಈ ಸೆಕ್ಷನ್ ಪ್ರಕಾರ ಅವರು ಆರ್ಡರ್ ಮಾಡಿರುವುದೇನು ಎಂಬುದನ್ನು ನೋಡಬೇಕು. ಸೊಸೈಟಿಯು ಇದರಿಂದ ದುರಂತಕ್ಕೀಡಾಗುವುದು. ನಾನು ಅನೇಕ ತಜ್ಞರನ್ನು ವಿಚಾರಿಸಿದ್ದೇನೆ. ಮಂತ್ರಿಗಳು ಇಂಥ ಕಾಯಿದೆ ಮಾಡುವವರಾಗಿದ್ದಾರೆ. ಕೋರ್ಟಿನಲ್ಲಿ ನಮ್ಮ ನಿರ್ಣಯ ಬರಾಬರಿ ಆಗಿದೆ. ಸುಪ್ರೀಂ ಕೋರ್ಟಿನಲ್ಲಿ ಕೇಸು ಹೋದಾಗ 121ರ ಪ್ರಕಾರ ಸರಕಾರ ಅಧಿಕಾರ ಪಡೆದು ಚಲಾಯಿಸುವುದಕ್ಕೆ ಅವಕಾಶವಿರುವುದು ಸರಿಯಲ್ಲ ಎಂದು ಸ್ಪಷ್ಟಮಾಡಿದ್ದಾರೆ.

ಸುಪ್ರೀಂ ಕೋರ್ಟಿನವರು ಈ ರೀತಿ ಹೇಳಿದ್ದರೂ ಕೂಡ ನಮ್ಮ ಸರ್ಕಾರದವರು ಯಾವ ಕಾಲಕ್ಕೂ ಸೆಕ್ಷನ್ 131ಕ್ಕೆ ತಿದ್ದುಪಡಿಯನ್ನು ತರುವುದಕ್ಕೆ ಬರುವುದಿಲ್ಲವೆಂದು ಹೇಳುತ್ತಿದ್ದಾರೆ. ಇಷ್ಟಬಂದಂತೆ ಇವರು ನಡೆದುಕೊಂಡು ಹೋಗುವುದಾದರೆ ನಾವಾದರೂ ಕೂಡ ಇಲ್ಲಿ ಏತಕ್ಕೆ

ಇರಬೇಕೆಂದು ಕೇಳುತ್ತೇನೆ ವಿರೋಧಪಕ್ಷದ ಸದಸ್ಯರು ಹೇಳುತ್ತಿದ್ದಾರೆಂದು ಈ ವಿಷಯವನ್ನು ಕಡೆಗಣಿಸಬಾರದು. ಹಿಂದೆ ಮಾಲಿಮರಿಯಪ್ಪನವರು ಏನು ವಚನ ಕೊಟ್ಟಿದ್ದರೋ ಅದನ್ನು ಬುದ್ಧಿವಂತಿಕೆಯಿಂದ ಅನುಷ್ಠಾನಕ್ಕೆ ತರುವುದು ಒಳ್ಳೆಯದೆಂದು ವಿನಯಪೂರ್ವಕವಾಗಿ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ಸೆಕ್ಷನ್ 54ಕ್ಕೆ ತಿದ್ದುಪಡಿಯನ್ನು ತಂದು ಎರಡು ಸದನಗಳಲ್ಲಿಯೂ ಒಪ್ಪಿಗೆ ಪಡೆಯುತ್ತೇನೆಂದೂ ಮಾಲಿ ಮರಿಯಪ್ಪನವರು ಹೇಳಿದ್ದರು. ಯಾವ ಸೊಸೈಟಿಗಳು ಚೆನ್ನಾಗಿ ನಡೆಯುತ್ತಿವೆಯೋ ಅಲ್ಲಿ ಸರ್ಕಾರದ ಅಧಿಕಾರಿಯನ್ನು ನೇಮಕಮಾಡಬೇಕೆಂಬ ಉದ್ದೇಶವನ್ನು ಅವರು ಇಟ್ಟುಕೊಂಡಿರಲಿಲ್ಲ. ಈ ವಿಚಾರ ಶ್ರೀ ಎಂ.ಆರ್. ಪಾಟೀಲ್ ಅವರಿಗೂ ಗೊತ್ತಿದೆ. ಅವರೂ ಕೂಡ ಹಿಂದೆ ಸೆಲೆಕ್ಟ್ ಕಮಿಟಿಯ ಸದಸ್ಯರಾಗಿದ್ದರು. ಅವರು ನೈತಿಕ ಶಕ್ತಿ ಉಳ್ಳವರಾಗಿದ್ದಾರೆ. ಅವರು ಇನ್ನೂ ಜೀವಂತ ಇರುವುದರಿಂದ ಈ ಬಗ್ಗೆ ಅವರನ್ನು ಕಿವಿ ಮಾತಿನಲ್ಲಿ ಕೇಳಿದರೆ ಹೇಳುತ್ತಾರೆ. ಶ್ರೀಮಾನ್ ಬಿ.ಎಲ್. ಗೌಡರೇ ಈ ಬಗ್ಗೆ ಒಂದು ತಿದ್ದುಪಡಿ ತಂದಿದ್ದರೆ ನಾನು ತರುವ ಅವಶ್ಯಕತೆಯೇ ಇರಲಿಲ್ಲ. ಅವರು ಹಿಂದೆ ಅವಶ್ಯಕತೆ ಇದ್ದರೆ ಒಂದು ತಿದ್ದುಪಡಿಯನ್ನು ತರುತ್ತೇನೆಂದು ಹೇಳಿದ್ದರು. ಆದರೆ, ಸ್ಥಾನದ ಮಹಿಮೆ ಆ ರೀತಿ ತರದಂತೆ ಮಾಡಿರಬಹುದು. ನಾನು ಇಷ್ಟು ಮಾತ್ರ ಹೇಳುತ್ತೇನೆ. ಸಹಕಾರ ಚಳುವಳಿ ಉಳಿಯಬೇಕಾದರೆ ಶ್ರೀ ಬಿ.ಎಲ್. ಗೌಡರು ಹಠ ಮಾಡದೆ ಈ ತಿದ್ದುಪಡಿಯನ್ನು ಒಪ್ಪಿಕೊಳ್ಳಬೇಕು ಮತ್ತು ಮಾನ್ಯ ಸದಸ್ಯರುಗಳೆಲ್ಲರೂ ಕೂಡ ಇದಕ್ಕೆ ಬೆಂಬಲ ಕೊಡಬೇಕೆಂದು ಪ್ರಾರ್ಥಿಸಿಕೊಳ್ಳುತ್ತೇನೆ. ಈ ತಿದ್ದುಪಡಿಗೆ ವಿರುದ್ಧವಾಗಿ ಯಾರಾದರೂ ಓಟು ಮಾಡಿದರೆ ಅದರಿಂದ ಯಾರಿಗೂ ಒಳ್ಳೆಯದಾಗುವುದಿಲ್ಲವೆಂದು ಹೇಳುತ್ತೇನೆ. ಸಹಕಾರಿ ಚಳುವಳಿಗೆ ಕೊಡಲಿಪ್ರಾಯವಾಗಿರುವ ಈ 54ನೇ ಸೆಕ್ಷನ್‌ಗೆ ಸರ್ಕಾರದವರೇ ಇಂತಹ ಒಂದು ತಿದ್ದುಪಡಿಯನ್ನು ತರಬೇಕಾಗಿತ್ತು. ಆದರೆ ತರಲಿಲ್ಲ. ಈ ಸೆಕ್ಷನ್‌ಗೆ ಇನ್ನೂ ಕ್ರಾಂತಿಕಾರಕವಾದ ಒಂದು ತಿದ್ದುಪಡಿಯನ್ನು ತರುವುದಕ್ಕೆ ಅವಕಾಶವಿತ್ತು.

ಕ್ರಾಂತಿಕಾರವಾದ ತಿದ್ದುಪಡಿಯಲ್ಲ ವಾದ್ದರಿಂದ ಬೆಂಬಲ ಕೊಡುವುದಕ್ಕಾಗುವುದಿಲ್ಲವೆಂದು ಶ್ರೀಮಾನ್ ಅಗ್ನಿಹೋತ್ರಿಯವರು ಹೇಳಿದರು. ಸರ್ಕಾರದವರೇ ಈ ಸೆಕ್ಷನ್‌ಗೆ ತಿದ್ದುಪಡಿಯನ್ನು ತರಬೇಕಾಗಿತ್ತು. ಆದರೆ ಸರ್ಕಾರದವರು ಈ ಬಗ್ಗೆ ತಿದ್ದುಪಡಿಯನ್ನು ತರುವ ಕಾಲ ಮೀರಿದ್ದರಿಂದ ನಾನೇ ತರಬೇಕಾಯಿತು. ಸಹಕಾರಿ ರಂಗ ಚೆನ್ನಾಗಿ ಬೆಳೆಯಬೇಕೆನ್ನುವ ಉದ್ದೇಶದಿಂದ ಈ ತಿದ್ದುಪಡಿಯನ್ನು ನಾನು ತಂದಿದ್ದೇನೆ. ಇದನ್ನು ಮಾನ್ಯ ಸದಸ್ಯರುಗಳೆಲ್ಲರೂ ಕೂಡ ಪೂರ್ಣ ಒಮ್ಮತದಿಂದ ಪಾಸ್ ಮಾಡಬೇಕೆಂದು ಕಳಕಳಿಯಿಂದ ವಿನಂತಿ ಮಾಡಿಕೊಂಡು ನನ್ನ ಮಾತನ್ನು ಮುಗಿಸುತ್ತೇನೆ.

# ಪ್ರಾಥಮಿಕ ಶಿಕ್ಷಣ (ತಿದ್ದುಪಡಿ) ವಿಧೇಯಕ 1969ರ ಮೇಲಿನ ಚರ್ಚೆ

ಸನ್ಮಾನ್ಯ ಅಧ್ಯಕ್ಷರೇ, ಮಾನ್ಯ ಶ್ರೀಮಾನ್ ಎಂ. ನಾಗಪ್ಪನವರು ಪ್ರೈಮರಿ ಎಜುಕೇಷನ್ನಿನ ಬಿಲ್ಲಿನ ಮೇಲೆ 9ನೇ ಕ್ಲಾಸಿಗೆ ತಂದಿರುವ ಅಮೆಂಡ್‌ಮೆಂಟ್ ಬಗ್ಗೆ ಒಂದೆರಡು ಮಾತುಗಳನ್ನು ಹೇಳಬಯಸುತ್ತೇನೆ.

ನಮ್ಮ ಕನ್ನಡದಲ್ಲಿ ಒಂದು ಗಾದೆ ಇದೆ. ಅದು ನಿನಗೆ ಅಪಮಾನ ಮಾಡುವವರು ಬೇಕೋ, ಕುತ್ತಿಗೆ ಕುಯ್ಯುವವರು ಬೇಕೋ ಎಂದರೆ, ಅಪಮಾನವಾದರೂ ಪರವಾಗಿಲ್ಲ. ಕುತ್ತಿಗೆ ಕುಯ್ಯುವವರು ಬೇಡ ಎಂದು ಹೇಳಿದ ಹಾಗೆ ನಮ್ಮ ಶ್ರೀಮಾನ್ ಎಂ. ನಾಗಪ್ಪನವರು ಹೇಳಿರುವುದೇನೆಂದರೆ ಈ ಎಜುಕೇಷನ್ ಏನು ಇದೆಯೋ ಇಂತಹ ಪವಿತ್ರವಾದ ಕಾರ್ಯಕ್ಕೆ ಟ್ಯಾಕ್ಸನ್ನು ಬಹಳ ಹಾಕಬೇಡಿ ಸ್ವಲ್ಪ ಕಡಿಮೆ ಮಾಡಿರಿ, ಅಂದರೆ ರೂಪಾಯಿಗೆ 5 ಪೈಸೇ ಇರುವುದನ್ನು ಒಂದು ಪೈಸೇ ಮಾಡಿ ಎಂದು ವಾದ ಮಾಡಿದ್ದಾರೆ ಜನರ ಪ್ರತಿನಿಧಿಗಳೆಂದು ಹೇಳುವ ಈ ಸರ್ಕಾರಕ್ಕೆ ವಿವೇಕ ಹೇಳುವುದಾದರೆ 5 ಪೈಸೆ ಹಾಕುವುದು ಬೇಡ, ಒಂದು ಪೈಸೇ ಮಾಡಿರಿ ಎಂದು ನಾನು ಈಗಲಾದರೂ ಕೇಳಿಕೊಳ್ಳುತ್ತೇನೆ. ಸೈಕಲ್‌ನವರಿಗೆ, ರಿಕ್ಷಾದವರಿಗೆ ಜಟಕಾದವರಿಗೆ, ಗುಡಿಸಲಿನಲ್ಲಿರುವ ಬಡವರಿಗೆ, ಎತ್ತಿನಗಾಡಿಯವರಿಗೆ ಈವೊತ್ತಿನವರೆಗೆ ಅವರಿಗೆ ಯಾವ ಟ್ಯಾಕ್ಸನಲ್ಲಿ ರಿಯಾಯಿತಿ ಕೊಟ್ಟಿದ್ದೀರಿ? ಚುನಾವಣೆಯಲ್ಲಿ ನೊಗ ಏರಿಸಕೊಂಡ, ಎತ್ತಿನ ಸಂಕೇತ ಇಟ್ಟುಕೊಂಡು, ಅದರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಗೆದ್ದು ಬಂದು ಇಂದು ಅಂತಹ ರೈತನ ಮೇಲೆ ಹೆಚ್ಚು ಟ್ಯಾಕ್ಸ್ ಹಾಕುವುದಕ್ಕೆ ಪ್ರಯತ್ನ ಮಾಡುತ್ತಿದ್ದೀರಿ. ಇದನ್ನು ಒಳಹೊಕ್ಕು ನೋಡಿದರೆ ಜನ ಕೂಡಲೇ ಕ್ರಾಂತಿ ಎದ್ದಾರು. ಮೇಲಾಗಿ ವಕ್ಕಲಿಗನಿಗೆ ಅಜ್ಞಾನ ಇದೆ ಎಂದು ತಿಳಿದುಕೊಂಡು ಟ್ಯಾಕ್ಸನ್ನು ಹೆಚ್ಚಿಸಿಕೊಂಡು ಹೋಗುವುದು ಸರಿಯಲ್ಲ, ಅದಕ್ಕೆ ಬದಲಾಗಿ ಅಂತಹ ರೈತನ ಮಕ್ಕಳಿಗೆ ಪುಕ್ಕಟೆ ಶಿಕ್ಷಣವನ್ನು ಕೊಡಬೇಕು. ನೀವು ಜನತೆಯ ಹಿತರಕ್ಷಣೆ ಮಾಡುವುದಿಲ್ಲ. ನಿಮಗೆ ಆಡಳಿತದಲ್ಲಿ ಸಂಖ್ಯಾಬಲ ಇದೆ ಎಂದು ಈ ರೀತಿ ಮಾಡುತ್ತಾ ಹೋದರೆ ಅದು ಬಹಳ ದಿನ ಉಳಿಯುವುದಿಲ್ಲ. ಬೇಕಾದರೆ ಈವೊತ್ತೇ ಇಡಿ ರಾಷ್ಟ್ರಾದ್ಯಂತ ಚುನಾವಣೆ ಇಡಿ. ಆಗ ಜನರು ಏನು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ ಎಂಬುದು ಗೊತ್ತಾಗುತ್ತದೆ. ನೀವು ಮಾಡುವ ವರ್ತನೆ ಸರಿಯಾದುದಲ್ಲ. ಜನತೆಯ ಹಿತವನ್ನು ನಿರ್ಲಕ್ಷಿಸುತ್ತಿದ್ದೀರಿ ಎನ್ನುವ ಕಡೆಗೆ ತಮ್ಮ ಗಮನವನ್ನು ಸೆಳೆಯಬಯಸುತ್ತೇನೆ. ನೀವು ಅಧಿಕಾರವನ್ನು ದುರುಪಯೋಗ ಮಾಡಿಕೊಂಡಿದ್ದೀರಿ, ದೇಶದೊಳಗೆ ಶಿಸ್ತು ಭಂಗ ಮಾಡಿದ್ದೀರಿ. ಯಾವ ರೀತಿಯಲ್ಲೂ ಈ ಮನೆಯಲ್ಲಿ ಕಾಯಿದೆ ಮಾಡಿ ಪಾಸು ಮಾಡಿದ ಬಿಲ್ಲನ್ನು ಪದೇ ಪದೇ ಬಯಲು ಮಾಡುವುದು ಒಳ್ಳೆಯದಲ್ಲ. ನಾವು ಮಾಡುವಂಥ ಕಾಯಿದೆ ಬಹಳ ದಿನದವರೆಗೂ ಉಳಿಯಬೇಕು. ಶ್ರೀಮಾನ್ ಹನುಮಂತಯ್ಯನವರು ಮುಖ್ಯಮಂತ್ರಿಗಳಾಗಿದ್ದಾಗ ಕಟ್ಟಿಸಿದಂಥ ವಿಧಾನಸೌಧದಲ್ಲಿ ಅವರನ್ನು ಒಂದು ದಿವಸವಾದರೂ ಕೂಡಲಿಕ್ಕೆ ಅವಕಾಶ ಕೊಡಲಿಲ್ಲ ಈ ಜನ, ಎಂದು ಎಷ್ಟೋ ಜನರು ನಮ್ಮ ಕಡೆ ಹೇಳುತ್ತಿದ್ದಾರೆ. ಈ ರೀತಿ ಅವಸರ ಅವಸರವಾಗಿ ಕಾಯಿದೆ ಮಾಡುವುದು ಸರಿಯಲ್ಲ. ಇಲ್ಲಿ ಯಾವ ಒಂದು ಕಾಯಿದೆ ಮಾಡಿದರೂ ಕೂಡ ಅದು ನಮ್ಮ ಮೊಮ್ಮಕ್ಕಳ ಆದಿಯಾಗಿ, ತಲೆತಲಾಂತರಗಳವರೆಗೂ

ವಿಸನದಿ: 20-8-1969

ಬರುತ್ತದೆ. ನೀವು ಮಾಡುವಂಥ ಕಾಯಿದೆ ವಕೀಲರಿಗೂ ತಿಳಿಯಲಿಕ್ಕಿಲ್ಲ. ಅಂತಹ ಕಾಯಿದೆ ಮಾಡುತ್ತೀರಿ ಬೇಕಾದರೆ ನಿಮ್ಮ ಲೈಬ್ರರಿಯಲ್ಲಿರುವ ಪುಸ್ತಕವನ್ನು ತರಿಸಿ ನೋಡಬಹುದು. ನನಗೆ ಅವೆಲ್ಲ ಕಾಯದೆಗಳು ಹೆಸರು ಹೇಳಲಿಕ್ಕೆ ಇಂದೇ ಬರಲಿಕ್ಕಿಲ್ಲ. ಹಿಂದೆ ನೀವು ಮಾಡಿದಂಥ ಕಾಯಿದೆಗಳು ಏನೇನೂ ಪ್ರಯೋಜನಕ್ಕೆ ಬರಲಿಲ್ಲ. ನಮ್ಮ ಕಾಯಿದೆ ಮಿನಿಸ್ಟರ್‌ರವರಾದ ಶ್ರೀಮಾನ್ ಪುಟ್ಟಸ್ವಾಮಿಯವರ ಗಮನವನ್ನು ಈ ವಿಚಾರಕ್ಕೆ ಸೆಳೆಯಬಯಸುತ್ತೇನೆ. ಈ ಪವಿತ್ರವಾದ ಶಿಕ್ಷಣಮಟ್ಟವನ್ನು ಬಹಳ ಕೆಳಮಟ್ಟಕ್ಕೆ ತಂದಿಟ್ಟಿದ್ದೀರಿ. ಈ ಬಿಲ್ಲಿಗೆ ಜನತೆಯ ಅಭಿಪ್ರಾಯವನ್ನು ತೆಗೆದುಕೊಳ್ಳಿ, ಈ ದೃಷ್ಟಿಯಿಂದ ಈಗ ತಂದಿರುವ ಬಿಲ್ಲನ್ನು 15 ದಿವಸದವರೆಗೆ ಮುಂದಕ್ಕೆ ಹಾಕಿದರೆ ಆಕಾಶವೇನೂ ತಲೆಮೇಲೆ ಬೀಳುವುದಿಲ್ಲ. ಎರಡು ಕೋಟಿ ಇರತಕ್ಕಂಥ ಜನರಲ್ಲಿ ಒಂದು ಕೋಟಿಗಿಂತ ಹೆಚ್ಚು ಜನ ಒಳ್ಳೆಯ ಅಭಿಪ್ರಾಯವನ್ನು ಕೊಟ್ಟರೆ ಇದಕ್ಕೆ ನಾನು ಧನ್ಯವಾದಗಳನ್ನು ಅರ್ಪಿಸುವಂತಾಗುತ್ತದೆ. ಈ ಎಜುಕೇಷನ್ ಬಿಲ್ಲು ಒಂದು ಮಹತ್ವವಾದ ಬೇಡಿಕೆ ಎಂದು ನಾನು ಹೇಳುತ್ತೇನೆ. ಇದನ್ನು ಶ್ರೀಮಾನ್ ನಾಗಪ್ಪನವರು ಇದು ಒಂದು ಸಣ್ಣ ಬೇಡಿಕೆ ಎಂದು ಹೇಳುತ್ತಾರೆ. ನಾನು ಶ್ರೀಮಾನ್ ಸೋಗಿಯವರನ್ನು ಪ್ರಶ್ನೆ ಮಾಡುತ್ತೇನೆ. ಅವರು ಶಿಕ್ಷಣವನ್ನು ಹೇಗೆ ಪಡೆದರು ಎಂದು ನೆನಪು ಇಟ್ಟುಕೊಳ್ಳಲಿ. ಬ್ರಿಟಿಷರ ಕಾಲದಲ್ಲೂ ಈ ಎಜುಕೇಷನ್ನಿಗೆ ಇಷ್ಟು ಶುಲ್ಕ ಇರಲಿಲ್ಲ. ಈವೊತ್ತು ನಮ್ಮ ಮಕ್ಕಳಿಗೆ ನಾವು ಕೊಡಲಾರದಷ್ಟು ಶುಲ್ಕವನ್ನು ಹೆಚ್ಚಿಸಿದ್ದಾರೆ. ಈ ಎಜುಕೇಷನ್ನಿಗೆ ಇಷ್ಟು ಶುಲ್ಕ ಇರಲಿಲ್ಲ. ಈವೊತ್ತು ನಮ್ಮ ಮಕ್ಕಳಿಗೆ ನಾವು ಕೊಡಲಾರಥಷ್ಟು ಶುಲ್ಕವನ್ನು ಹೆಚ್ಚಿಸಿದ್ದಾರೆ. ಈ ಎಜುಕೇಷನ್ನಿಗೆ ನಾವು ಹಣ ಕೊಡುತ್ತಿದ್ದೇವೆ. ಬಾಯಿಯಲ್ಲಿ ಮಾತ್ರ ಫ್ರೀ ಎಜುಕೇಷನ್ ಕೊಡುತ್ತಿದ್ದೇವೆ ಎಂದು ಹೇಳುತ್ತಿದ್ದಾರೆ. ಈ ಸಭೆಯಲ್ಲಿ ಶ್ರೀಮಾನ್ ಶಂಕರೇಗೌಡರು ಇಲ್ಲದಿದ್ದರೂ ಉಪಮಂತ್ರಿಗಳಾದ ಶ್ರೀಮಾನ್ ಸೋಗಿಯವರು ಇದಕ್ಕೆ ಏನು ಹೇಳುತ್ತಾರೆ ಎನ್ನುವುದನ್ನು ಕೇಳಬೇಕಾಗಿದೆ. 1922 ರಲ್ಲಿ ಗೋಪಾಲಕೃಷ್ಣ ಗೋಖಲೆಯವರ ಕಾಲದಲ್ಲಿ ಇದ್ದ ಅಂದಿನ ಶಿಕ್ಷಣದ ಮಟ್ಟ ಹೇಗಿತ್ತು? ಆ ಶಿಕ್ಷಣಕ್ಕೆ ಎಷ್ಟು ಖರ್ಚಾಗುತ್ತಿತ್ತು? ಇಂದಿನ ಶಿಕ್ಷಣದ ಮಟ್ಟ ಹೇಗಿದೆ? ಅದರ ರೀತಿನೀತಿ ಎಷ್ಟರ ಮಟ್ಟಿಗೆ ಇದೆ ಎಷ್ಟು ಖರ್ಚಾಗುತ್ತಿದೆ ಎಂಬುದನ್ನು ಪರಿಶೀಲಿಸಬೇಕು. ಈವೊತ್ತು ಕಂಪಲ್ಸರಿ ಎಜುಕೇಷನ್ ಎಂದು ಬೇರೆ ಮಾಡಿದ್ದೀರಿ. ಎಷ್ಟು ಸ್ಕೂಲ್‌ಗಳಿಗೆ ಬಿಲ್ಡಿಂಗ್ ಕಟ್ಟಿಸಿದ್ದೀರಿ? ಎಷ್ಟು ಸ್ಕೂಲ್‌ಗಳನ್ನು ಪ್ರಾರಂಭ ಮಾಡಿದ್ದೀರಿ, ಇದನ್ನು ಹೇಳುವುದಕ್ಕೆ ಸಿದ್ಧರಿದ್ದೀರಾ? ಇವರು ಯಾವ ರೀತಿ ನಾಟಕ ಮಾಡುತ್ತಿದ್ದಾರೆ ಎಂದು ಎಲ್ಲ ವಿಚಾರಗಳ ಬಗ್ಗೆಯೂ ಹೇಳಬೇಕಾದರೆ ಒಂದೆರಡು ದಿನವಾದರೂ ಬೇಕು. ಅಷ್ಟು ಸಮಯ ನಮಗೆ ಇಲ್ಲ. ಅದರ ಸಲುವಾಗಿ ನಾನು ಹೇಳುವುದೇನೆಂದರೆ ಅವರು ತಮ್ಮಷ್ಟಕ್ಕೆ ತಾವೇ ತಮ್ಮ ಹೃದಯ ಪರಿಶೀಲನೆ ಮಾಡಿಕೊಳ್ಳಲಿ. ಅಲ್ಲಿರುವ (ಕಾಂಗ್ರೆಸ್ಸಿನಲ್ಲಿರುವ) ಅನೇಕ ಜನರಿಗೆ ಬಿನ್ನಹ ಮಾಡಿಕೊಳ್ಳುವುದು ಏನೆಂದರೆ ವಿರೋಧ ಪಕ್ಷದ ಮನುಷ್ಯ ಮಾತನಾಡುತ್ತಿದ್ದಾನೆ ಎಂದು ಭಾವಿಸದೆ, ಅವರಿಗೆ ಮತ ಸ್ವಾತಂತ್ರ್ಯ ಕೊಡದೆ ಇದ್ದ ಪಕ್ಷದ ಸಭೆಯಲ್ಲಾದರೂ ಅಂಕಿ ಸಂಖ್ಯೆಗಳನ್ನು ಕೇಳಿ ಯಾವ ಯಾವ ಭಾಗದಲ್ಲಿ ಯಾವ ರೀತಿ ಇದೆ ಎನ್ನುವುದನ್ನು ತಿಳಿದುಕೊಂಡು ಇಂಥ ಮಹತ್ವದ ವಿಷಯಕ್ಕೆ ಮನಸ್ಸು ಕೊಡಬೇಕೆಂದು ಹೇಳುತ್ತೇನೆ. ರೈತನ ಸಂಪತ್ತನ್ನು ಸೂರೆ ಮಾಡಿ, ಅವನಿಂದ ಎಜುಕೇಷನ್ ಸೆಸ್ ತೆಗೆದುಕೊಳ್ಳುವುದಕ್ಕೆ ಬದಲಾಗಿ ಸಾರಾಯಿ, ಹೆಂಡ ತಂಬಾಕ್ ಮೊದಲಾದ ಮಾದಕ ವಸ್ತುಗಳ ಮೇಲೆ ಅಥವಾ ರೇಸಿನ ಮೇಲೆ

ಹೆಚ್ಚು ಸೆಸ್ ಹಾಕಿದ್ದರೆ ಅದಕ್ಕೆ ನಾನು ಏನು ಹೇಳುತ್ತಿದ್ದಿಲ್ಲ. ಅದನ್ನು ಬಿಟ್ಟು ಬೆಣ್ಣೆ ಮಾರುವ ಹೆಣ್ಣು ಮಕ್ಕಳ ಮೇಲೆ, ಜೀವನ ಸಾಗಿಸಲಿಕ್ಕೆ ಆಕಳನ್ನು ಕಟ್ಟಿರುವವರ ಮೇಲೆ ಟ್ಯಾಕ್ಸ್ ಹಾಕುವುದು ಸರಿಯಲ್ಲ. ಕರಭಾರ ಹೆಚ್ಚಾಗಿರುವ ಒಕ್ಕಲಿಗನ ಮೇಲೆ ಮತ್ತೂ ಟ್ಯಾಕ್ಸ್ ಹಾಕುವುದಕ್ಕೆ ಹೋಗಬೇಡಿ. ಮಾನ್ಯ ಮಂತ್ರಿಗಳು ಸಭೆಯ ಮುಂದೆ ತಂದಿರುವ ವಿಧೇಯಕವನ್ನು ಹಿಂದೆ ತೆಗೆದುಕೊಳ್ಳಬೇಕು. ಇಲ್ಲದೆ ಇದ್ದರೆ ಮಾನ್ಯ ನಾಗಪ್ಪನವರು ಸೂಚಿಸಿರುವಂತೆ ಕಡಿಮೆ ಟ್ಯಾಕ್ಸನ್ನಾದರೂ ಹಾಕಬೇಕೆಂದು ಬಿನ್ನಹ ಮಾಡಿಕೊಂಡು ನನ್ನ ಮಾತನ್ನು ಮುಗಿಸುತ್ತೇನೆ.

# ಹಕ್ಕುಚ್ಯುತಿ ಸೂಚನೆ ನಿರ್ಣಯ ಮಂಡನೆ ವ್ಯವಸಾಯ ವಿಧೇಯಕದ ಬಗ್ಗೆ ಚರ್ಚೆ

ನಾನು ಸಭಾಧ್ಯಕ್ಷರಿಂದ ತಿಳಿಯಲು ಇಚ್ಛಿಸುವುದು ಏನೆಂದರೆ ಮಾನ್ಯ ಮಂತ್ರಿಗಳು 73ನೇ ವಿಧೇಯಕವನ್ನು ಕಡೆಗಣಿಸಿ ಅತಿ ಜರೂರಾಗಿ ಒಪ್ಪಿಗೆ ಪಡೆಯಲು ಆತುರರಾಗಿದ್ದಾರಾ ಎಂದು, ಅವರು ಅವರ ಅಧಿಕಾರದ ಮೂಲಕ ಈ ವಿಧೇಯಕವನ್ನು ಸಲ್ಲಿಸಲು ಆಜ್ಞಾಪಿಸುವಂತೆ ನನಗೆ ಕಾಣುತ್ತದೆ. ಈ ಗೊತ್ತುವಳಿ ಮಂಡಿಸದಿದ್ದರೆ ಅವರ ಮಂತ್ರಿತ್ವಕ್ಕೆ ಧಕ್ಕೆ ಬರಬಹುದೆಂಬ ಅವರ ಮನಸ್ಸಿನಲ್ಲಿ ಹೆದರಿಕೆ ಅದು ಬಿಟ್ಟರೆ ಈಗ ಇದಕ್ಕೆ ಅವಸರ ಖಂಡಿತ ಇಲ್ಲ. ಹಾಗಿದ್ದರೆ ನಾವು ಮಾನವೀಯತೆಯಿಂದ ಇದನ್ನು ಪರಿಗಣಿಸುತ್ತೇವೆ. ಇಲ್ಲದಿದ್ದರೆ ನಾವು ಕಾನೂನು ರೀತಿ ಅನುಸರಿಸೋಣ. ವಿಶೇಷ ಸಂದರ್ಭದಲ್ಲಿ ಅನುಮತಿ ಇದೆ ಹೌದು. ಆದ್ದರಿಂದ ಹೆಚ್ಚಿನ ಅನುಭವವುಳ್ಳ ಮತ್ತು ಒಳ್ಳೆಯ ಪ್ರಜಾಪ್ರಭುತ್ವವಾದಿಯಾದ ಶ್ರೀಮಾನ್ ನಾಡಗೌಡರು ವಿಶೇಷ ಸಂದರ್ಭಾನುಸಾರ ಈ ಅನುಶಾಸನವನ್ನು ಮುಂದಿಡಲಿ.

ಅವು ತಮ್ಮ ದಿನಾಂಕದಾಗಿರಬೇಕು. ಆ ಆರ್ಡಿನೆನ್ಸ್ 13ನೇ 1969ರಲ್ಲಿ ಸಲ್ಲಿಸಿಲ್ಲ. ಈ ಆರ್ಡಿನೆನ್ಸ್ ಜುಲೈ ತಿಂಗಳಲ್ಲಿ ಸಲ್ಲಿಸಿರಬೇಕು. ಈ ಅರ್ಡಿನೆನ್ಸ್ ಮಾನ್ಯ ಮಂತ್ರಿಗಳು ಹೇಳುವುದನ್ನು ಬಿಟ್ಟು ಬೇರೆ ದಿನಾಂಕದವುಗಳು ಆಗಿರಬೇಕು. ಆದ್ದರಿಂದ 13ನೇ ಆಗಸ್ಟ್ 1969ಕ್ಕೆ ಯಾವುದೇ ಆರ್ಡಿನೆನ್ಸ್ ಸಲ್ಲಿಸಿರಲಿಕ್ಕಿಲ್ಲ. ಮಾನ್ಯ ಸಿ. ಎಂ. ಗೌಡರು ಈ ಸಭೆಯ ಮುಂದೆ ಸುಳ್ಳು ಮಾಹಿತಿ ನೀಡಿದ್ದಾರೆ ಎಂಬುದರ ವಿಶೇಷ ಅಧಿಕಾರ ಸೂಚನೆ ನನಗೆ ಸಿಕ್ಕಿದೆ. ಅವರು ಈ ಆರ್ಡಿನೆನ್ಸ್ 13ನೇ ಆಗಸ್ಟ್ 1969 ಆಗಸ್ಟ್ 1969ಕ್ಕೆ ಸಲ್ಲಿಸಲಾಗಿದೆ ಎಂಬುದಾಗಿ ಈ ಸಭೆಯ ಮುಂದಿಟ್ಟಿದ್ದಾರೆ. ಇದು ಸತ್ಯ ಅಲ್ಲವೆಂದು ಕಾಣುತ್ತದೆ. ನನ್ನ ಸ್ನೇಹಿತರು ಕಣ್ಣು ತಪ್ಪಿನಿಂದ ತಪ್ಪು ಮಾಡಿರಬೇಕು. ಆ ಮೂಲಕ ಅವರು ಈ ಸಭೆಯನ್ನು ಹಾಗೂ ಮಾನ್ಯ ಸಭಾಪತಿಯವರನ್ನು ಈ ಆರ್ಡಿನೆನ್ಸ್ 13ನೇ ಆಗಸ್ಟ್ 1969 ಕ್ಕೆ ಸಲ್ಲಿಸಲಾಗಿದೆ ಎಂದು ನಂಬಿಸಿದಂತಿದೆ. ಮಾನ್ಯ ಮಂತ್ರಿಗಳು ನೀಡಿದ ಮಾಹಿತಿ ಸಂಪೂರ್ಣ ಸುಳ್ಳು ಏಕೆಂದರೆ ಅವರು 13ನೇ ಆಗಸ್ಟ್ 1969ಕ್ಕೆ ಬಿಲ್ಲಿನ ಪ್ರತಿಯನ್ನು ಸಲ್ಲಿಸಿದ್ದೇನೆಂದು ಹೇಳಿರುವುದರಿಂದ.

ನಾನು ನಮ್ಮ ಗೆಳೆಯರ ಪ್ರಿವೆಲೆಜ್ ಮೊಷನನ್ನು ಎದುರಿಸಲು ಸಿದ್ದನಿದ್ದೇನೆ. ಆದರೆ ಅವರು ಈ ರೀತಿ ತಡಮಾಡುವುದು ಸರಿಯಲ್ಲ. ನಾನು ಮುಗಿಸಿದ ಮೇಲೆ ಅವರಿಗೆ ನಾನು ತಪ್ಪು ಮಾಡಿದ್ದೇನೆಂದು ಅರಿವಾದರೆ ಅವರೂ ಈ ರೀತಿಯ ಪ್ರಿವೆಲೇಜ್ ಮೋಷನನ್ನು ನೀಡಲು ಸ್ವತಂತ್ರರು. 13ನೇ ಆಗಸ್ಟ್ 1969 ರಂದು ಮಾನ್ಯ ಮಂತ್ರಿಗಳು ಆರ್ಡಿನೆನ್ಸ್‌ನ್ನು ಸಲ್ಲಿಸುವುದಾಗಲೀ, ಪ್ರಸಾರ ಪಡಿಸುವುದಾಗಲಿ ಮಾಡಿಲ್ಲ, ಮಾನ್ಯ ಸಭಾಪತಿಯವರು ಒಪ್ಪಿಗೆ ನೀಡದೆ ಇದನ್ನು ಸರಿಯಾಗಿ ವಿಷದ ಪಡಿಸಬೇಕೆಂದು ಹೇಳಿದರೂ ಅದು ವಿಷದ ಪಡಿಸಲು ಕಷ್ಟ ಸಾಧ್ಯವೆಂದು ರೂಲ್ 73 ರ ಮೇಲೆ ಕಣ್ಣು ತಪ್ಪಿಸಿ ಗೊತ್ತಿದ್ದು ಮಾಡಿದಂತಿದೆ. ಆದ್ದರಿಂದ 13ನೇ ತಾರೀಖಿಗೆ ನಾನು ಹಂಚಿದ್ದೇನೆ ಎಂದು ಮುಂದೆ ಬಂದು ಹೇಳಿದ್ದಾರೆ. ಇದು ಸಭೆಯ ಹೊರಗೆ ಮಾಡಿದ ಒಂದು ಹೇಳಿಕೆಯೇ ಅಲ್ಲ. ಸಭೆಗೆ ತಿಳಿಯದಂತೆ ಮಾಡಿಲ್ಲ. ರೂಲ್ 73ನ್ನು ಇಲ್ಲದಂತೆ ಮಾಡಿ ನನ್ನನ್ನು ಹಾಗೂ ಇಡೀ ಸಭೆಯನ್ನು ನಂಬುವಂತೆ ಮಾಡಿದ್ದಾರೆ. ನನ್ನ ಗೆಳೆಯ ಪುಟ್ಟಸ್ವಾಮಿಯವರು ಮಾನ್ಯ ಗೋಪಾಲಗೌಡರ ವಿರುದ್ಧ ಪ್ರಿವಿಲೇಜ್ ಮೋಷನ್ ಜೊತೆ ಈ ಪ್ರಿವಿಲೆಜ್ ಮೋಷನನ್ನು ಮಂಡಿಸಲು ಒಪ್ಪಿಗೆ ನೀಡಬೇಕೆಂದು ಕೇಳಿಕೊಳ್ಳುತ್ತೇನೆ.

---

ವಿಸನದಿ: 21-8-1969

# ಮೈಸೂರು ಮಾರಾಟ ತೆರಿಗೆ (ತಿದ್ದುಪಡಿ) ವಿಧೇಯಕ 1969ರ ಮೇಲಿನ ಚರ್ಚೆ

ಸನ್ಮಾನ್ಯ ಸಭಾಪತಿಗಳೇ, ಇವತ್ತಿನ ದಿವಸ ಮೈಸೂರು ಸೇಲ್ಸ್ ಟ್ಯಾಕ್ಸ್ ಅಮೆಂಡ್‌ಮೆಂಟ್ ಬಿಲ್ಲಿನ ಬಗ್ಗೆ ಕೆಲವು ಮಾತುಗಳನ್ನು ಹೇಳುತ್ತಾ ಈ ಬಿಲ್ಲಿನ ಉಗಮ ಯಾವ ರೀತಿ ಇದೆ. ಇತ್ತೀಚೆಗೆ ಈ ತಿದ್ದುಪಡಿ ಮಸೂದೆಗಳು ಯಾವ ರೀತಿ ಬರುತ್ತಿವೆ ಎಂಬ ಬಗ್ಗೆ ಸರ್ಕಾರದ ಗಮನಕ್ಕೆ ತರುವುದಕ್ಕೆ ಇಚ್ಛಿಪಡುತ್ತೇನೆ. ಈ ತಿದ್ದುಪಡಿ ಮಸೂದೆಯನ್ನು ತರುವ ಉದ್ದೇಶ ಏನಿತ್ತು ಎಂಬುದನ್ನು ಸ್ಟೇಟ್‌ಮೆಂಟ್ ಆಫ್ ಆಬ್ಜೆಕ್ಟ್ ಅಂಡ್ ರೀಜನ್ಸ್‌ನಲ್ಲಿ ಬಹಳ ಚೆನ್ನಾಗಿ ಹೇಳಿದ್ದಾರೆ. ಸರ್ಕಾರದ ಕಾಯಿದೆಯನ್ನು ಹೈಕೋರ್ಟಿನವರು ತಳ್ಳಿ ಹಾಕಿದ ಪರಿಣಾಮವಾಗಿ ವಸೂಲಿಯಾದ ಟ್ಯಾಕ್ಸನ್ನು ವಾಪಸ್ ಕೊಡುವ ಬದಲು ಅದನ್ನು ಉಳಿಸಿಕೊಳ್ಳುವ ಸಲುವಾಗಿ ಈ ತಿದ್ದುಪಡಿಯನ್ನು ತಂದಿದ್ದಾರೆ. ಸರ್ಕಾರದವರು ಪಾಸ್ ಮಾಡಿದ ಕಾಯಿದೆಗಳನ್ನು ಹೈಕೋರ್ಟಿನವರು ಏತಕ್ಕೆ ತಳ್ಳಿಹಾಕುತ್ತಾರೆ ಎಂಬುದನ್ನು ಸರ್ಕಾರದವರು ಬಹಳ ಶಾಂತ ರೀತಿಯಿಂದ ಆಲೋಚನೆ ಮಾಡುವುದು ಒಳ್ಳೆಯದು. ಸರ್ಕಾರದವರು ಪ್ರತಿಯೊಂದು ಕಾಯಿದೆ ಮಾಡುವಾಗಲೂ ಕೂಡ ರಾಜ್ಯದ ಎರಡು ಕೋಟಿ ಜನಾಂಗವನ್ನು ಅಷ್ಟೇ ಅಲ್ಲ. ದೇಶದ ಇತರ ರಾಜ್ಯಗಳಿಂದ ಬಂದು ಉದ್ಯೋಗದಲ್ಲಿರುವವರನ್ನು ಕೂಡ ಗಮನದಲ್ಲಿ ಇಟ್ಟುಕೊಂಡು ಮುಂದೆ ಯಾವ ಲೋಪದೋಷಗಳು ಕೂಡ ಬರದಂತೆ ಮಾಡಬೇಕು. ಆ ರೀತಿ ಮಾಡದೇ ಇರುವುದರಿಂದ ಹೈಕೋರ್ಟಿನವರು ಅನೇಕ ಕಾಯಿದೆಗಳನ್ನು ತಳ್ಳಿಹಾಕುತ್ತಾರೆ. ಅವಸರವಸರದಲ್ಲಿ ಅನೇಕ ತಿದ್ದುಪಡಿಗಳನ್ನು ತಂದು ಪಾಸು ಮಾಡಿಕೊಳ್ಳುತ್ತಿರುವವರನ್ನು ನೋಡಿದರೆನೆ, ದೇಶದ ಇವತ್ತಿನ ಪರಿಸ್ಥಿತಿಯನ್ನು ನೋಡಿದರೆನೆ ಈಗಿನ ಮಂತ್ರಿಮಂಡಲ ಡಿಸ್‌ಮಿಸ್ ಆಗುವ ಸ್ಥಿತಿಯಲ್ಲಿ ಇದೆಯೋ ಏನೋ ಎಂದು ಕಾಣುತ್ತದೆ. ಕೆಲವು ತಿದ್ದುಪಡಿಗಳನ್ನು ತರುವ ಮೂಲಕ ತಮಗೆ ಬೇಕಾದವರಿಗೆ ರೊಕ್ಕ ಕೊಡುವ ಸಲುವಾಗಿ ಮಂತ್ರಿಮಂಡಲದವರು ಮಾತನಾಡಿಕೊಂಡಿದ್ದಾರೋ ಏನೋ ಎಂದು ನನಗನ್ನಿಸುತ್ತದೆ. ಹಾಗೆ ಇಲ್ಲ ಎಂದು ಆ ಕಡೆಯ ನನ್ನ ಮಾನ್ಯ ಸ್ನೇಹಿತರು ಮತ್ತು ಮುಖ್ಯ ಮಂತ್ರಿಗಳು ಹೇಳಬಹುದು. ಹಾಗೆ ಇಲ್ಲ ಎಂದು ಒಪ್ಪಿಕೊಳ್ಳುವುದಾದರೆ ಇಂತಹ ತಿದ್ದುಪಡಿ ಮಸೂದೆಗಳನ್ನು ಅವಸರದಲ್ಲಿ ಪಾಸ್ ಮಾಡುವ ಬದಲು ಸಾರ್ವಜನಿಕ ಅಭಿಪ್ರಾಯ ಪಡೆಯಲು ಏತಕ್ಕೆ ಕಳುಹಿಸುವುದಿಲ್ಲ ಎಂದು ಕೇಳುತ್ತೇನೆ. ಈಗ ಏನು ನಡೆಯುತ್ತದೆ ಎಂದರೆ, ಬೆಳಿಗ್ಗೆ ಅಧ್ಯಕ್ಷರ ಗಮನಕ್ಕೆ ತಂದು ಮಧ್ಯಾಹ್ನ ಸಭೆಯಲ್ಲಿ ಮಂಡಿಸಿ, ಸಾಯಂಕಾಲದೊಳಗೆ ತಿದ್ದುಪಡಿಗಳನ್ನು ಪಾಸ್ ಮಾಡಿಕೊಳ್ಳುತ್ತಿದ್ದಾರೆ. ಬೇಕಾದರೆ ರೂಲನ್ನು ಸಸ್‌ಪೆಂಡ್ ಮಾಡಿ ಪಾಸ್ ಮಾಡಿಸಿಕೊಳ್ಳುತ್ತಾರೆ.

ನಾನು ರೂಲ್ಸ್ ತಿಳಿದುಕೊಂಡೇ ಹೇಳುತ್ತಿದ್ದೇನೆ. ನಾನು ಹೇಳುವುದರಲ್ಲಿ ತಪ್ಪಿದ್ದರೆ ವಾಪಸ್ ತೆಗೆದುಕೊಳ್ಳುವುದಕ್ಕೂ ಕೂಡ ತಯಾರಿದ್ದೇನೆ. ಸಮಯ ಬಂದರೆ ವಿರೋಧ ಪಕ್ಷದವರು ವಾಕ್‌ಔಟ್ ಮಾಡುವಂತಹ ಸನ್ನಿವೇಶವನ್ನು ಕಲ್ಪಿಸಿ, ನಾವುಗಳೂ ಹೊರಗೆ ಹೋದಾಗ ಪಾಸ್ ಮಾಡಿಸಿಕೊಳ್ಳುತ್ತಿದ್ದೀರಿ. ಅಂತಹ ಒಂದು ಚಾಣಾಕ್ಯ ಬುದ್ಧಿಯನ್ನು ಹೊಂದಿರುವ ಈಗಿನ ಮಂತ್ರಿಮಂಡಲದವರು ಹೈಕೋರ್ಟ್ ಮತ್ತು ಸುಪ್ರಿಂ ಕೋರ್ಟ್‌ಗಳನ್ನು ರದ್ದು ಮಾಡಿಬಿಟ್ಟು,

ವಿಸನದಿ: 21-8-1969

ಯಾರ ಭಯವೂ ಇಲ್ಲದಂತೆ ತಮ್ಮ ಕೆಲಸಗಳನ್ನು ಸುಸೂತ್ರವಾಗಿ ಬೇಕಾದರೆ ಮಾಡಿಕೊಂಡು ಹೋಗಬಹುದು.

ಹುಚ್ಚು ಮೊಮ್ಮಗನ ರಾಜ್ಯಭಾರ ಈಗ ನಡೆಯುತ್ತಿದೆ. ಮಹಮ್ಮದ್‌ಬಿನ್ ತೊಗಲಕ್‌ನಿಗೆ ಹೋಲಿಸಿದರೂ ಕೂಡ, ಅವನಿಗೇ ಅವಮಾನವಾಗುವಂತಹ ರಾಜ್ಯಭಾರವನ್ನು ನಡೆಸಿ ರಾಜ್ಯದ ಜನರಿಗೆ ತಾವು ಅನ್ಯಾಯ ಮಾಡುತ್ತಿದ್ದೀರಿ. ಅಧ್ಯಕ್ಷರನ್ನು ಒಳಗೊಂಡು ಸರ್ಕಾರದವರಿಗೆ ನಾನು ಹೇಳುವುದು ಮಸೂದೆಗಳನ್ನು ಸಭೆಯ ಮುಂದೆ ತರುವುದಕ್ಕೆ ಮುಂಚೆ ಜಾಗರೂಕತೆಯಿಂದ ಪರಿಶೀಲನೆ ಮಾಡಬೇಕೆಂದು ಮತ್ತು 7 ದಿವಸದ ಬದಲು 15 ದಿವಸದವರೆಗೂ ಮಸೂದೆಯನ್ನು ನಾವು ಪರಿಶೀಲಿಸಲು ಸಮಯ ಕೊಡಬೇಕೆಂದು. ಮೋಷನ್ ಮೂವ್ ಮಾಡುವುದಕ್ಕೆ ಅವಕಾಶ ಕೊಡಿ ಎಂದರೆ ಕೊಡುವುದಿಲ್ಲ. ಇದರಿಂದ ಮೊಷನ್ ಮೂವ್ ಮಾಡುವುದಕ್ಕಾಗುವುದಿಲ್ಲ. ಇದನ್ನು ಯಾವ ರೀತಿ ಮಾಡಬೇಕು ಎನ್ನುವುದಕ್ಕೆ ಸೆಕ್ರೆಟೇರಿಯಟ್‌ನಲ್ಲಿ ಸದಸ್ಯರಿಗೆ ಒಂದು ರೀತಿ ಟ್ರೈನಿಂಗ್ ಇಡಿರಿ. ಇಲ್ಲಿ ಮಾಡಿದಂಥ ಕಾಯಿದೆ ಹೈಕೋರ್ಟಿನಲ್ಲಿಯಾಗಲಿ, ಸುಪ್ರೀಂ ಕೋರ್ಟಿನಲ್ಲಿಯಾಗಲಿ ಛಾಲೆಂಜ್ ಮಾಡುತ್ತಾರೆ. ಇದಕ್ಕೆ ನೂರಾರು ರಿಟ್ ಅರ್ಜಿಗಳು ಈ ಕಾಯಿದೆ ಮೇಲೆ ಬಂದಿರುವುದನ್ನು ನೋಡಿದರೂ ಸಹಿತ ಇದನ್ನು ಇತ್ಯರ್ಥ ಮಾಡದೆ ಇನ್ನೊಬ್ಬ ನ್ಯಾಯಾಧೀಶರನ್ನು ನೇಮಿಸುವುದಕ್ಕೆ ಪ್ರಯತ್ನ ಮಾಡುತ್ತೀರಿ. ಈ ರೀತಿ ಮಾಡುವುದನ್ನೆಲ್ಲಾ ಪರಮಾತ್ಮ ಕಂಡುಕೊಂಡಿದ್ದಾನೆ. ನೀವು ಈ ರೀತಿ ಮಾಡುವುದು ಸಮಂಜಸವಲ್ಲ.

ಸ್ವಾಮಿ, ಈವೊತ್ತು ಹೈಕೋರ್ಟಿನವರು ಯಾವ ರೀತಿಯಿಂದಲಾದರೂ ಅದನ್ನು ಮಾಡಿದರೆ ಅದು ಹೈಕೋರ್ಟಿನವರ ತಪ್ಪೇ, ಸರ್ಕಾರದ ತಪ್ಪೇ, ಸರ್ಕಾರಕ್ಕೆ ಬರೆದುಕೊಡುವವರ ಬರವಣಿಗೆಯವನ ತಪ್ಪೇ ಅಥವಾ ಅಡ್ವೋಕೇಟ್ ಜನರಲ್‌ರವರು ವಾದ ಮಾಡುವಾಗ ತಪ್ಪು ಮಾಡಿದ್ದಾರೆಯೇ, ಇದನ್ನೆಲ್ಲಾ ಈ ಸಭೆಯಲ್ಲಿ ವಿಚಾರಣೆ ಮಾಡುವುದಕ್ಕೆ ಅವಕಾಶ ಕೊಡಬೇಕೆಂದು ಮಾನ್ಯ ಅಧ್ಯಕ್ಷರಿಗೆ ಹೇಳಿದೆ ಮತ್ತು ಹೈಕೋರ್ಟ್ ಆರ್ಡರ್ ಏನು ಇದೆಯೋ ಅದನ್ನು ಈ ಸಭೆಯಲ್ಲಿ ಸರ್ಕ್ಯುಲೇಟ್ ಮಾಡಿ ಎಂದು ಹೇಳಿದೆ. ಪ್ರತಿಯೊಂದು ಕಾಯಿದೆಯನ್ನು ಈ ಸಭೆ ತಿಳಿದುಕೊಂಡು ಎಕ್ಸಿಕ್ಯೂಟೀವ್ ಅಧಿಕಾರಿಗಳನ್ನು ವಿಚಾರಿಸಲು ಅದರ ಬಗ್ಗೆ ತನಿಖೆ ಮಾಡಲು ಕ್ರಮ ತೆಗೆದುಕೊಳ್ಳಬೇಕು. ನಾನು ಒಂದು ಮೋಷನ್ ಬರೆದುಕೊಟ್ಟಿದ್ದೆ. ಫೈಲ್ ತರಿಸಿ ನೋಡಿ. ನನ್ನ ಮೋಷನ್ ಅಡ್ಮಿಟ್ ಆಗಲಿಲ್ಲ. ಆ ಫೈಲನ್ನು ನಿಮಗೆ ತಂದುಕೊಡುವ ಬುದ್ಧಿಯೇ ಅವರಿಗಿಲ್ಲ. ಆ ಪ್ರಶ್ನೆಗೆ ಉತ್ತರ ತಿಳಿದುಕೊಳ್ಳುವಾ ಎಂದರೆ ಸಿಕ್ಕುವುದಿಲ್ಲ. ಆ ಫೈಲು ತರಿಸಿ ನೋಡಿದರೆ ಅವರ ಕೈಕೆಳಗೆ ಇರತಕ್ಕಂಥ ಅಧಿಕಾರಿಗಳು ಏನು ಅನಾಚಾರ ಮಾಡುತ್ತಿದ್ದಾರೆ ಎನ್ನುವುದು ಗೊತ್ತಾಗುತ್ತದೆ. ಆ ಅಧಿಕಾರಿಗಳಿಗೆ ಫರ್ನಿಷ್ ಮಾಡುವುದಕ್ಕೂ ಆಗುವುದಿಲ್ಲ. ಈ ರೀತಿ ನಮ್ಮ ಸೆಕ್ರೆಟೇರಿಯೇಟ್‌ನಲ್ಲಿ ನಡೆಯುತ್ತಾ ಇದೆ. ಸರ್ಕಾರಕ್ಕೆ ಹಣದ ತೊಂದರೆ ಇದೆಯೆಂದು ಹೇಳಿ ಈ ಸೇಂದಿ ಸಾರಾಯಿ ಮೇಲೆ ಮಾರಾಟ ತೆರಿಗೆ ಜಾಸ್ತಿ ಹಾಕುವುದು ಸರಿಯಲ್ಲ. ಈ ರೀತಿಯ ನಿಷ್ಫಲವಾದ ಕಾಯಿದೆ ಮಾಡುವುದರಿಂದ ಪ್ರಯೋಜನವಿಲ್ಲ. ನೀವು ಸಿವಿಲ್ ಲಯಬಿಲಿಟಿ ಅವನ ಮೇಲೆ ಹೊರಿಸುತ್ತೀರಿ. ಕ್ರಿಮಿನಲ್ ಲಯಬಿಲಿಟಿ ಅವನ ಮೇಲೆ ಹೊರಿಸಬೇಕು. ಅವನನ್ನು ಕ್ರಿಮಿನಲ್ ಲಯಬಿಲಿಟಿಗೆ ಒಳಪಡಿಸಬೇಕು. ನೀವು ಈಗ ಮಾಡದಿದ್ದರೆ ಮುಂದೆ ಅಂತಹ ಕಾಲ ಬರುತ್ತದೆ ಎಂದು ಜನ ಎಚ್ಚರಿಕೆ ಕೊಡುತ್ತಾರೆ.

ಸ್ವಾಮಿ, ಹಿಂದೆ ಯಾವ ರೀತಿ ಕಾಯಿದೆಗಳನ್ನು ಮಾಡುತ್ತಾ ಇದ್ದರು ಎಂದರೆ ಬ್ರಿಟೀಷರ ಕಾಲದಲ್ಲಿದ್ದ ಕಾಯಿದೆ ತೆಗೆದುಕೊಂಡು ನೋಡಿದರೆ ಗೊತ್ತಾಗುತ್ತದೆ. ಮಾನ್ಯ ಅಧ್ಯಕ್ಷರು ನಿಷ್ಠಾವಂತ ವಕೀಲರು. ಹಿಂದೆ ಯಾವುದಾದರೂ ಕಾಯಿದೆ ಮಾಡಬೇಕಾದರೆ, ವ್ಯಾಪಾರ ಸಂಸ್ಥೆಗಳನ್ನಾಗಲಿ, ವಾಣಿಜ್ಯ ಸಂಸ್ಥೆಗಳನ್ನಾಗಲಿ ಸಂಘಸಂಸ್ಥೆಗಳನ್ನಾಗಲಿ, ಇನ್ನೂ ಇತರ ಪ್ರಮುಖ ವ್ಯಕ್ತಿಗಳ ಅಭಿಪ್ರಾಯವನ್ನು ಬಹಳ ಮಟ್ಟಿಗೆ ಕೇಳುತ್ತಾ ಇದ್ದರು. ಆ ವ್ಯಕ್ತಿಗಳು ತಮ್ಮ ಅಭಿಪ್ರಾಯವನ್ನು ಸಂಗ್ರಹಣೆ ಮಾಡಬೇಕು. ಈ ಸಭೆಯಲ್ಲಿ ಕಾಯಿದೆ ಬಲ್ಲಂಥ ಸದಸ್ಯರಿದ್ದಾರೆ. ಅದರಲ್ಲಿ ಶ್ರೀಮಾನ್ ಹೆಚ್.ವಿ. ಕೌಜಲಗಿ ಅವರೂ ಒಬ್ಬರು. ಜನತೆಯ ಹಿತರಕ್ಷಣೆ ಮಾಡುವವರು ಎಂದು ಹೇಳಿಕೊಳ್ಳುವವರು ಜನತೆಯ ಅಭಿಪ್ರಾಯವನ್ನು ಸಂಗ್ರಹಣೆ ಮಾಡದೆ ಈ ರೀತಿ ಮಾಡಿದ್ದಾರೆ.

ಇನ್ನು ಆರ್ಡಿನೆನ್ಸ್ ಎನ್ನುವ ಶಬ್ದ ಹೊಸದಲ್ಲ. ಇದನ್ನು ಯಾವಾಗ ತರಬೇಕು ಎಂದರೆ ಯಾವಾಗ ಲೆಜಿಸ್ಲೇಟೀವ್ ಅಸೆಂಬ್ಲಿ ಮತ್ತು ಕೌನ್ಸಿಲ್ ಕೂಡುವುದಿಲ್ಲವೋ, ಯಾವಾಗ ದೇಶಕ್ಕೆ ಗಂಡಾಂತರ ಪರಿಸ್ಥಿತಿ ಒದಗುತ್ತದೋ ಅಂತಹ ಸಂದರ್ಭದಲ್ಲಿ ಇಂತಹ ಆರ್ಡಿನೆನ್ಸ್‌ನ್ನು ತರಬಹುದು ಎಂದು ನನಗೆ ಅನಿಸುತ್ತದೆ. ಆ ರೀತಿಯಾಗಿ ಆರ್ಡಿನೆನ್ಸ್‌ನ್ನು ಹೊರಡಿಸುವ ಅಧಿಕಾರವನ್ನು ಗವರ್ನರಿಗೆ ಕಾನ್‌ಸ್ಟಿಟ್ಯೂಷನ್ ಪ್ರಕಾರ ಕೊಟ್ಟಿದೆ. ಸರಕಾರವು ಯಾವಾಗಲೂ ಮಂತ್ರಿ ಮಂಡಲದ ಸಲಹೆ ಸೂಚನೆಯಂತೆ ಕಾರ್ಯನಿರ್ವಹಿಸಬಹುದು. ಗೌರ್ನರಿಗೆ ಉಪದೇಶ ಕೊಡುವ ಜನ ಯಾವ ರೀತಿಯಾಗಿರಬೇಕು. ಕೌನ್ಸಿಲ್ ಆಫ್ ಮಿನಿಸ್ಟರ್ಸ್ ಯಾವ ವೈಜ್ ಕೌನ್‌ಸೆಲ್ ಕೊಡುತ್ತಾ ಇಲ್ಲ. ಆದುದರಿಂದ ಈ ಆರ್ಡಿನೆನ್ಸ್‌ನ್ನು ಈಗ ತಂದಿರುವುದಕ್ಕೆ ಇವರನ್ನು ಏನನ್ನ ಬೇಕೋ, ಇವರಿಗೆ ಯಾವ ಶಬ್ದದಿಂದ ಕರೆಯಬೇಕೋ ನನಗೆ ಗೊತ್ತಾಗುವುದಿಲ್ಲ. ಮಂತ್ರಿಗಳು ಗವರ್ನರಿಗೆ ಆಡ್‌ವೈಸ್ ಕೊಟ್ಟು ಬಿಡುತ್ತಾರೆ. ಅದರಂತೆ ಗವರ್ನರ್ ರುಜು ಹಾಕಿದರೆ ಒಂದು ಕಾಯಿದೆ ಆಗುತ್ತದೆ. ಆ ಕಾಯಿದೆಯೂ ಕೂಡ ಹೈಕೋರ್ಟಿಗೆ ಛಾಲೆಂಜಿಗೆ ಹೋಗುತ್ತದೆ. ಏತಕ್ಕೆ ಈ ರೀತಿ ಕಾಯಿದೆಗಳನ್ನು ಮಾಡಿ ಹೈಕೋರ್ಟಿನಲ್ಲಿ ಛಾಲೆಂಜ್ ಮಾಡುವುದಕ್ಕೆ ಅವಕಾಶ ಮಾಡಿಕೊಡಬೇಕು? ಇಂತಹ ಕಾಯಿದೆಯನ್ನು ನೀವು ಏತಕ್ಕೆ ಡಿಸ್‌ಪ್ರೊವ್ ಮಾಡಲಿಲ್ಲ ಎಂದು ನಮ್ಮನ್ನು ಆರಿಸಿ ಇಲ್ಲಿಗೆ ಕಳುಹಿಸಿದಂಥ ಜನ ಕೇಳಬಹುದು. ಇದರಿಂದ ನಾವು ಎರಡು ಕೋಟಿ ಜನತೆಯ ಹಿತರಕ್ಷಣೆ ಮಾಡಿದಂತಾಗುವುದಿಲ್ಲ. ನಾವು ಜನತೆಯ ಮುಂದೆ ತಪ್ಪುಗಾರರಾಗುತ್ತೇವೆ. ಆದುದರಿಂದ ಇನ್ನು ಮುಂದಕ್ಕಾದರೂ ಒಂದು ಕಾಯಿದೆ ಮಾಡಿದರೆ ಅದರಲ್ಲಿ ತಪ್ಪು ಇರದಂತೆ ಮಾಡಬೇಕು ಎಂದು ಹೇಳುತ್ತೇನೆ. ಎಲ್ಲರೂ ಮರ್ಯಾದೆ ಕೊಡುವಂಥ ಕಾಯಿದೆ ಇರಬೇಕು. ಆರ್ಡನೆನ್ಸ್‌ನ್ನು ಬಹಳ ರೇರ್ ಆಗಿ ಹೊರಡಿಸಬೇಕು. ಯಾವಾಗ ಯಾವ ಸಂದರ್ಭದಲ್ಲಿ ಆರ್ಡಿನೆನ್ಸ್‌ನ್ನು ಹೊರಡಿಸಬೇಕು ಎಂದು ಅಧ್ಯಕ್ಷರನ್ನು ಕೇಳಿರಿ. ಇದನ್ನೆಲ್ಲಾ ತಿಳಿದುಕೊಂಡು ಆರ್ಡಿನೆನ್ಸ್‌ನ್ನು ಹೊರಡಿಸಿದ್ದೀರಾ? ಟ್ಯಾಕ್ಸ್ ಕೊಡಬೇಕೆಂಬ ಬಗ್ಗೆ ಇಂಥ ಹೊಸ ಆರ್ಡಿನೆನ್ಸನ್ನು ಮುಂಚಿತವಾಗಿಯೇ ಹೊರಡಿಸುವ ಅವಶ್ಯಕತೆ ಏನು ಇತ್ತು? ಇನ್ನು 15 ದಿವಸ ತಡವಾಗಿದ್ದರೆ ನಿಮ್ಮ ಮಂತ್ರಿಮಂಡಲ ಬಿದ್ದು ಹೋಗುತ್ತಿತ್ತೋ? ನಿಮಗೇನಾದರೂ ಮಾನ ಮರ್ಯಾದೆ ಹೋಗಿ, ನಿಮಗೆ ರೊಕ್ಕ ಇಲ್ಲದೇ ಹೋಗುತ್ತಿತ್ತೋ ಅಥವಾ ರಾಮಕೃಷ್ಣ ಹೆಗಡೆಯವರ ಬೊಕ್ಕಸ ಬರಿದಾಗುತ್ತಿತ್ತೋ? ಆದುದರಿಂದ ಅಧಿಕಾರ ಸೂತ್ರವನ್ನು ಹಿಡಿದುಕೊಂಡಿರತಕ್ಕಂಥ ನೀವು ಈ ರೀತಿ ಆರ್ಡಿನೆನ್ಸ್ ಹೊರಡಿಸಿರುವುದು ಸಮಂಜಸವಲ್ಲ ಎಂದು ನಾನು ತಮ್ಮನ್ನು ಸವಿನಯದಿಂದ ಬಿನ್ನಹ ಮಾಡಿಕೊಳ್ಳುತ್ತೇನೆ.

ಮಹಾತ್ಮಾ ಗಾಂಧಿಯವರು ಹೇಳಿದಂಥ ಮಾತನ್ನು ಈ ಹೊತ್ತು ಹೇಳಬಹುದೋ, ಹೇಳಬಾರದೋ ಗೊತ್ತಿಲ್ಲ, ಗಾಂಧೀಜಿಯವರ ಅನುಯಾಯಿಗಳಾದ ಇವರು ಗಾಂಧಿ ಶತಾಬ್ದಿಗಾಗಿ ಲಕ್ಷಾವಧಿ ರೂಪಾಯಿಗಳನ್ನು ಖರ್ಚು ಮಾಡಲು ಹೊರಟಿದ್ದಾರೆ. ಇದರಲ್ಲಿ ಮಾತ್ರ ಇವರು ಎಲ್ಲರಿಗಿಂತ ಮುಂದೆ ಇದ್ದಾರೆ. ಇಂಥವರು ಯಾವ ದೃಷ್ಟಿಯಿಂದ ಗಾಂಧೀಜಿಯವರ ಹೆಸರನ್ನು ಉಪಯೋಗ ಮಾಡುತ್ತಿದ್ದಾರೆ? ಮಹಾತ್ಮ ಗಾಂಧೀಜಿಯವರು ಹೇಳಿರುವ ಮಾತನ್ನು ಅನೇಕ ಬಾರಿ ಈ ಸಭೆಯಲ್ಲಿ ಹೇಳಿದ್ದೇನೆ. ಅದನ್ನು ಪುನರಪಿ ಹೇಳುತ್ತೇನೆ. "ಶೇಂದಿಯಿಂದ ಬರುವ ಲಾಭವು ಅವ್ಯವಹಾರದಿಂದ ಬರುವ ಲಾಭವಲ್ಲದೆ ಇನ್ನಾವುದೂ ಅಲ್ಲ ಎಂದು ನನ್ನ ಅಭಿಪ್ರಾಯ" ಎಂದು ಹೇಳಿದ್ದಾರೆ. ಮಹಾತ್ಮ ಗಾಂಧೀಜಿಯವರು ನಿಮ್ಮ ಗುರಗಳು, ರಾಜಕೀಯ ಗುರುಗಳು ಎನ್ನುವುದಾದರೆ, ಅವರು ಒಬ್ಬ ಆದರ್ಶ ಪುರುಷರು ಎಂದು ಹೇಳುವಾದಾದರೆ ಈಗ ಸಭೆಯ ಮುಂದೆ ತಂದಿರುವ ಕಾಯಿದೆಯನ್ನು ಒಂದು ವರ್ಷ ಬಿಡುವುದಕ್ಕೆ ಆಗುತ್ತಿರಲಿಲ್ಲವೇ? ಕೆಲವು ಕಾಲವಾದರೂ ಅದನ್ನು ಬಿಡಲಿಕ್ಕೆ ಪ್ರಯತ್ನ ಮಾಡಿರಿ ಎಂದು ಹೇಳುತ್ತೇನೆ.

ಈ ಕಾಯಿದೆಯಲ್ಲಿ ಒಂದು ವಿಚಿತ್ರವಾದ ಕಲವನ್ನು ಸೇರಿಸಿದ್ದಾರೆ. ಅದು ಹೀಗಿದೆ: "ಈ ರೀತಿಯ ಕರ ಸಲ್ಲಿಸಿದ್ದು ಹಿಂದಿರುಗಿಸುವ ಬಗ್ಗೆ ಯಾವುದೇ ನಡುವಳಿಕೆಯು ನ್ಯಾಯಾಲಯದಲ್ಲಿ ಸ್ವೀಕರಿಸುವುದು ಅಥವಾ ಮುಂದುವರಿಸುವುದು ಅಸಾಧ್ಯ",

ಟ್ಯಾಕ್ಸ್ ಕಟ್ಟಿದ್ದರ ಮೇಲೆ ಕೋರ್ಟಿಗೆ ಹೋಗಬಾರದು, ಮೇಲಿನವರ ಹತ್ತಿರ ಹೋಗಬಾರದು, ಇಲ್ಲಿಯೂ ಕೇಳುವ ಹಾಗಿಲ್ಲ, ಅಲ್ಲಿಯೂ ಕೇಳುವ ಹಾಗಿಲ್ಲ ಎಂದರೆ ಎಲ್ಲಿ ಕೇಳಬೇಕು? ನಾವು ಮಾಡುವುದು ಸರಿ ಎನ್ನುವ ವಿಚಿತ್ರವಾದ ಧೋರಣೆಯನ್ನು ತಾಳುವುದಾದರೆ ನಿಮಗೂ ಹಿಟ್ಲರನಿಗೂ ಏನು ವ್ಯತ್ಯಾಸವಿದೆ ಎಂದು ಕೇಳುತ್ತೇನೆ. ಹಿಟ್ಲರನಾದರೂ ಕೆಲವು ಮಂದಿ ಬುದ್ಧಿವಂತರಾದ ಸಲಹೆಗಾರರನ್ನು ನೇಮಿಸಿಕೊಂಡಿದ್ದ, ಆದರೆ ಇವರಲ್ಲಿ ಅದೂ ಕಾಣುವುದಿಲ್ಲ. ಅವರ ಪಕ್ಷದಲ್ಲಿ ಕೂಡ ಛಿದ್ರ ವಿಚ್ಛಿದ್ರವಾಗಿ ಮನಸ್ಸು ಬಂದ ಹಾಗೆ ಮಾಡತಕ್ಕ ಪರಿಸ್ಥಿತಿ ಬಂದಿದೆ. ಅಸೆಂಬ್ಲಿಯಲ್ಲಿ ಆ ಪಕ್ಷದವರು ಕೇಳುವುದಕ್ಕೆ ಅವರಿಗೆ ತೊಂದರೆ ಇದೆ, ನಾವಾದರೂ ಮಾಹಿತಿ ಸಿಕ್ಕಿದ್ದಕ್ಕೆ ಕೈಕಟ್ಟಿ ಕುಳಿತುಕೊಳ್ಳಬೇಕಾಗಿದೆ. ಒಂದು ರಿಟ್ ಪಿಟಿಷನ್ ತೀರ್ಮಾನವಾಗಿರುವಾಗ ಅದಕ್ಕೆ ಸಂಬಂಧಪಟ್ಟ ತೀರ್ಪಿನ ಅಂಶಗಳನ್ನು ಎಲ್ಲ ಸದಸ್ಯರಿಗೂ ಒದಗಿಸುವುದು ಸರ್ಕಾರದ ಕರ್ತವ್ಯವೆಂದು ಅವರು ತಳೆಯುವುದಿಲ್ಲವೇ? ಐದು ನಿಮಿಷಗಳಲ್ಲಿ ಪಾಸು ಮಾಡುತ್ತೇವೆಂದು ಅವರು ಹೇಳುತ್ತಾರೆ. ಆ ಕಡೆಯಲ್ಲಿ ನನಗಿಂತ ಸಾವಿರ ಪಾಲು ತಿಳುವಳಿಕೆಯುಳ್ಳವರಿದ್ದಾರೆ. ಅವರಿಗೆ ಇಲ್ಲಿ ಮಾತನಾಡಿ ವೇಳೆ ಕಳೆಯಬೇಕಾಗಿಲ್ಲ. ಲಘುವಾಗಿ ಪಾಸುಮಾಡಿಕೊಳ್ಳಬೇಕಾಗಿದೆ. ಕಾಯಿದೆಗಳ ಬಗ್ಗೆ ವಿರೋಧ ಪಕ್ಷದ ಸದಸ್ಯರು ಮಾತ್ರ ಮಾತನಾಡುತ್ತಿದ್ದಾರೆ. ಆ ಕಡೆಯ ಸದಸ್ಯರು ಯಾರೂ ಮಾತನಾಡುವುದಿಲ್ಲ. ಇದಕ್ಕೆ ಕಾರಣವಾದರೂ ಏನು? ಮಂತ್ರಿಗಳ ಬಗ್ಗೆ ಆದರ ಭಾವವಿದೆಯೇ ಎಂದರೆ ಅದೂ ಅಲ್ಲ.

ಎಷ್ಟೋ ರಿಟ್ ಅರ್ಜಿಗಳು ಹೈಕೋರ್ಟಿನಲ್ಲಿ ಬರುತ್ತಿವೆ. ಅವುಗಳನ್ನು ಪುರಸ್ಕರಿಸಿ ನಿಮ್ಮ ಕಾಯಿದೆಯನ್ನು ಕೋರ್ಟಿನವರು ತಳ್ಳಿ ಹಾಕಿದ ನಂತರ ಅದನ್ನು ಆಚರಣೆಗೆ ತಾರದೆ ಎಷ್ಟು ಕಂಟೆಪ್ಟ್ ನಿಮ್ಮ ಮೇಲೆ ಆಗುತ್ತಿದೆ? ನಿಮ್ಮ ನೌಕರರೇ ನಿಮ್ಮ ಮೇಲೆ ಎಷ್ಟು ರಿಟ್‌ಗಳನ್ನು ಹಾಕಿದ್ದಾರೆ? ಅವರಿಗೆ ಕೊಡಬೇಕಾದ ಸವಲತ್ತುಗಳನ್ನು ಕೊಡದೆ ಅವರಿಗೆ ಪ್ರಮೋಷನ್

ಕೊಡಲು ಜಾಗವಿಲ್ಲ, ಜಾಗವಿದ್ದರೆ ಕೊಡುತ್ತಿದ್ದೆವು ಎಂದು ಹೇಳುತ್ತೀರಿ. ರಿಟೈರ್ ಆಗಿ ಮನೆಗಳಿಗೆ ಹೋಗುವಂಥವರನ್ನು ಕರೆದುಕೊಂಡು ಬಂದು ನೇಮಕ ಮಾಡುತ್ತ ಇದ್ದೀರಿ. ಹುಡುಗರು ನಿಮ್ಮ ಮಾತು ಕೇಳುವುದಿಲ್ಲ. ನೀವು ಹೇಳಿದ ಹಾಗೆ ಬರೆಯುವುದಿಲ್ಲ ಎಂದು ಹೀಗೆ ಮಾಡುತ್ತಿದ್ದೀರಾ? ನೀವು ಹೇಳಿದಂತೆ ಬರೆಯಬೇಕು, ಆಫೀಸಿನಲ್ಲಿ ಕುಳಿತು ಬರೆಯುತ್ತೇವೆಂದರೆ ನೀವು ಕೇಳುವುದಿಲ್ಲ. ನಿಮ್ಮ ಮನೆಯಲ್ಲಿ ಆಟ್ಟದ ಮೇಲೆ ಬಂದು ಕುಳಿತುಕೊಂಡು ಬರೆದರೆ ಇನ್‌ಕ್ರಿಮೆಂಟ್, ಪ್ರಮೋಷನ್, ಎಕ್ಸ್‌ಟೆನ್‌ಷನ್ ಕೊಡುತ್ತೇವೆಂದು ಹೇಳಿ ಕೆಲಸ ಮಾಡಿಸುತ್ತೀರಿ. ಇಂಥ ಅಧಿಕಾರಿಯಿಂದ ಇಂಥ ಕಾಯಿದೆ ಬರುತ್ತದೆ. ಇದು ಸಮಂಜಸವಲ್ಲ, ಘಟನಾತ್ಮಕವಾಗಿ ಸರಿಯಲ್ಲ. ಇದಲ್ಲದೆ ಈ ಸಂಬಂಧದಲ್ಲಿ ನಮಗೆ ಬೇಕಾದ ಮಾಹಿತಿಯನ್ನೂ ಪೂರೈಸಲಿಲ್ಲ, ಹೈಕೋರ್ಟ್ ನಿರ್ಣಯ ನಮಗೆ ಕೊಟ್ಟಿಲ್ಲ. ಇವು ಎಲ್ಲ ಸದಸ್ಯರ ಕೈಗೂ ಬಂದಿದ್ದರೆ ಅದರಲ್ಲಿರುವ ಅಭಿಪ್ರಾಯವನ್ನು ತೆಗೆದುಕೊಂಡು ಕೋರ್ಟಿಗೆ ಹೋಗುತ್ತಾರೆಯೋ ಏನೋ ಎನ್ನುವ ಅನುಮಾನದಿಂದ ಕೊಟ್ಟಿಲ್ಲವೆಂದು ಕಾಣುತ್ತದೆ.

ಕೋರ್ಟಿನವರು ಡಿಕ್ರಿ ತೆಗೆದುಕೊಂಡಿದ್ದರೂ ಕೂಡ ಎನ್‌ಫೋರ್ಸ್ ಮಾಡಬಾರದು ಎನ್ನುವ ಅಂಶವನ್ನೂ ಸೇರಿಸಿದ್ದಾರೆ. ಡಿಕ್ರಿ ಆದುದನ್ನೂ ತೆಗೆದುಕೊಳ್ಳಬಾರದು ಎಂದರೆ ಕೋರ್ಟು ಏಕೆ ಬೇಕು? ಅದನ್ನೂ ತೆಗೆದು ಹಾಕಿ, ಮಾನವಂತರಿದ್ದರೆ, ಯಾವತ್ತಿಗೂ ಕೋರ್ಟಿಗೆ ಒಪ್ಪಿಸಿದ ಮೇಲೆ ಅವರು ಮಾಡಿದಂಥ ನಿರ್ಣಯಗಳಿಗೆ ಮನ್ನಣೆಯನ್ನು ಕೊಡಬೇಕು. ಅದಕ್ಕೆ ತಲೆಬಾಗಬೇಕು. ಸ್ವಾಮಿ, ಈ ಹೊತ್ತು ಕಾಯಿದೆಯಲ್ಲಿ ಸೂಚಿಸಿರುವ ತಿದ್ದುಪಡಿ ಎಷ್ಟರಮಟ್ಟಿಗೆ ನ್ಯಾಯ ಸಮ್ಮತವಾಗಿದೆ ಎನ್ನುವುದು ನನಗೆ ಗೊತ್ತಿಲ್ಲ ಕೋರ್ಟಿನ ಡಿಕ್ರಿ ಆಗಬಾರದು, ನಿಮ್ಮವರಿಗೆ ಬೇಕಾದಷ್ಟು ಮಾಡುವುದಕ್ಕೆ ಅವಕಾಶವಿರಬೇಕು ಎನ್ನುವುದಾದರೆ ಅದು ಇಲ್ಲೀಗಲ್ ಆಗಬಹುದು. ಸರ್ಕಾರದವರು ಕೆಲವು ಖಟ್ಲೆಗಳನ್ನು ನಡೆಸಲು ಅವರ ಏಜೆಂಟರನ್ನು ವಕೀಲನ್ನಾಗಿ ನೇಮಿಸಿದ್ದಾರೆ. ಒಮ್ಮೆ ಹಾಜರಾದರೆ 400 ರೂಪಾಯಿ, ಒಂದೊಂದು ಸಾವಿರ, ಎರಡೆರಡು ಸಾವಿರ ಹೀಗೆ ಕೊಡುವ ಪ್ರಯತ್ನ ಮಾಡಿದ್ದಾರೆ, ವಕೀಲರಿಗೆ ಕೊಡುವ ರೊಕ್ಕದಲ್ಲಿ ಇವರಿಗೆ ಎಷ್ಟು ಪರ್ಸೆಂಟೇಜ್ ಇದೆಯೋ ನನಗೆ ಗೊತ್ತಿಲ್ಲ. ಇವೆಲ್ಲ ಮಾತುಗಳನ್ನೂ ಸೂಕ್ಷ್ಮ ರೀತಿಯಿಂದ ತಾವು ಪರಿಶೀಲನೆ ಮಾಡಿಕೊಂಡು ನಮ್ಮಲ್ಲಿ ನ್ಯಾಯವಿರುವಾಗ, ಈ ಕಾಯಿದೆಯ ನಡುವಳಿಕೆಯಲ್ಲಿ ಒಬ್ಬರಿಗೊಂದು ಒಬ್ಬರಿಗೆ ಇನ್ನೊಂದು ಆಗಬಾರದು. ಘಟನೆಗೆ ವಿರೋಧವಾಗಿ ಯಾವುದನ್ನೂ ಮಾಡಬಾರದು. ಕೋರ್ಟಿಗೆ ಹೋಗಿ ಕೋರ್ಟಿನಲ್ಲಿ ಆಗುವ ನಿರ್ಣಯಕ್ಕೆ ಎಲ್ಲರೂ ಮನ್ನಣೆಕೊಡುವಂತೆ ಆಗಬೇಕು ಎಂದು ಮಾನವಂತರ ಸರ್ಕಾರ ಇದ್ದಾಗ ಹೇಳುತ್ತಿದ್ದರು. ಅದನ್ನು ಇವರೂ ಅನುಸರಿಸಬೇಕೆಂದು ನಾನು ಕಳಕಳಿಯಿಂದ ಬಿನ್ನಹ ಮಾಡುತ್ತಿದ್ದೇನೆ. ಇವರು ನಮ್ಮ ಘಟನಾಬದ್ಧವಾದ ಹಕ್ಕುಗಳನ್ನು ಹತ್ತಿಕ್ಕಲಿಕ್ಕೆ ಹೊರಟಿದ್ದಾರೆ. ಆದರ ಸಲುವಾಗಿ ಸರ್ಕಾರವನ್ನು ಘಟನಾಬದ್ಧವಾಗಿ ತೆಗೆದುಹಾಕಬೇಕೆಂದು ನಾವು ಕೇಳಬೇಕೋ, ಚಳುವಳಿ ನಡೆಸಬೇಕೋ, ಜನತೆ ಇದನ್ನು ತೆಗೆಯಬೇಕೆಂದು ಹೇಳಬೇಕೋ ಎನ್ನುವಂಥ ಸಂದರ್ಭ ತ್ವರಿತ ರೀತಿಯಿಂದ ಬರುವುದಕ್ಕೆ ಹತ್ತಿದೆ. ಇದಕ್ಕೆ ಅವಕಾಶ ಕೊಡಬಾರದು, ಇಷ್ಟು ದಿವಸ ಆಗಿರುವುದನ್ನು ಮರೆತು ಇನ್ನು ಮುಂದಾದರೂ ಕೂಡ ಕಾಯಿದೆಯನ್ನು ನಮ್ಮೆದುರಿಗೆ ತರುವಾಗ ಸರ್ವರೀತಿಯಿಂದ ಜನರ ಅಭಿಪ್ರಾಯವನ್ನು ಪಡೆದು ಮನೆಯಲ್ಲಿ ನೋಟ್ ಬರೆಸದೆ ಶ್ರೀಮಾನ್ ಹನುಮಂತಯ್ಯನವರು ಕಟ್ಟಿಸಿರುವ ಈ ದೊಡ್ಡ ಕಟ್ಟಡದಲ್ಲೇ ಬರೆಸುವುದಕ್ಕೆ ಅವಕಾಶ ಮಾಡಿ ಇಂಥ ಬಿಲ್ಲುಗಳನ್ನು ನಮ್ಮೆದುರಿಗೆ ತರಬೇಕೆಂದು ವಿನಂತಿ ಮಾಡಿ ಈ ಮಸೂದೆಯನ್ನು ವಿರೋಧಿಸುತ್ತೇನೆ.

# ಬೆಂಗಳೂರು ಮುನಿಸಿಪಲ್ ತಿದ್ದುಪಡಿ ವಿಧೆಯಕ 1969ರ ಮೇಲಿನ ಚರ್ಚೆ

ಸನ್ಮಾನ್ಯ ಸಭಾಪತಿಯವರೇ, ಈ ನಮ್ಮ ಮುಂದೆ ಇಟ್ಟಿರುವಂತಹ ಬೆಂಗಳೂರು ಮುನಿಸಿಪಲ್ ಅಮೆಂಡ್‌ಮೆಂಟ್ ಬಿಲ್ಲಿನ ಕೆಲವು ಅಂಶಗಳನ್ನು ಸ್ವಾಗತಿಸುತ್ತಾ ಒಂದೆರಡು ಮಾತುಗಳನ್ನು ಹೇಳುತ್ತೇನೆ. ಸರ್ಕಾರದವರು ಯಾವ ಒಂದು ಉದ್ದೇಶದಿಂದ ಈ ಬಿಲ್ಲನ್ನು ತಂದಿದ್ದಾರೋ, ಆ ಉದ್ದೇಶ ಸಫಲವಾಗಲಿಕ್ಕೆ ಬೇಕಾದಷ್ಟು ಅಮೆಂಡ್‌ಮೆಂಟುಗಳನ್ನು ಅದರಲ್ಲಿ ತರಲಿಲ್ಲವೆಂದು ಬಹಳ ದು:ಖದಿಂದ ಅದನ್ನು ವಿರೋಧ ಮಾಡುತ್ತೇನೆ. ಅನೇಕ ಜನರು ಇವತ್ತು ಬೆಂಗಳೂರು ಕಾರ್ಪೊರೇಶನ್ ಕಾಯಿದೆಯಲ್ಲಿರತಕ್ಕ ಲೋಪದೋಷಗಳನ್ನು ಸರ್ಕಾರದವರಿಗೆ ಹೇಳಿದ್ದಾರೆ. ಈ ಮಾತು ಹೊಸದೇನೂ ಅಲ್ಲ. ಇಲ್ಲಿರತಕ್ಕ ಮಾನ್ಯ ಕಾನೂನು ಸಚಿವರಿಗೆ ಗೊತ್ತಿರಲಿಕ್ಕೆ ಸಾಕು, ಕಾಯಿದೆ ಈ ಸಭೆಯ ಮುಂದೆ ಬಂದಾಗ ಪಕ್ಷದ ಎಲ್ಲಾ ಸದಸ್ಯರೂ ಇಷ್ಟು ತ್ವರಿತವಾಗಿ ಕಾಯಿದೆಯನ್ನು ಮಾಡಬೇಡಿ, ಇದರಲ್ಲಿ ಅನೇಕ ಲೋಪದೋಷಗಳಿವೆ ಎಂದು ಹೇಳಿದ್ದಾರೆ ಮತದಾರರ ಲಿಸ್ಟನ್ನು ತಯಾರು ಮಾಡುವುದಕ್ಕೆ ನೀವು ಅನುಸರಿಸಿರತಕ್ಕ ಕ್ರಮ ಹಾಕಿಕೊಂಡಿರುವ ಪದ್ಧತಿ ದೋಷಯುಕ್ತವಾಗಿದೆ ಎಂದು ಹೇಳಬೇಕಾಗಿದೆ. ಆದರೆ ಬಹುಮತದ ಬೆಂಬಲ ಇರುವುದರಿಂದ ವಿದುರವಾಣಿಯಿಂದ ಹೇಳಿದ ಎದುರು ಪಕ್ಷದವರ ನುಡಿ, ಹಿತದ ನುಡಿಯಾಗಿ ಪರಿಣಮಿಸಲಿಲ್ಲ. ಇದಕ್ಕೆ ಒಬ್ಬ ಶಾಲೆಯ ಉಪಾಧ್ಯಾಯರು, ಶಾಲೆಯಲ್ಲಿ ಹೇಳಿದ ಕತೆ ಹೇಳುತ್ತೇನೆ. ಉಪಾಧ್ಯಾಯರು, ಹುಡುಗರಿಗೆ ಪ್ರಶ್ನೆ ಕೇಳಿದರು. 2 ಗುಣಿಸು 2 ಎಷ್ಟು ಎಂದು. ಅದಕ್ಕೆ ಎಲ್ಲರೂ 9 ಎಂದು ಹೇಳಿದರು. ಆದರೆ ಒಬ್ಬ ಮಾತ್ರ ನಾಲ್ಕು ಎಂದು ಉತ್ತರಿಸಿದನಂತೆ. ಅದಕ್ಕೆ ಉಪಾಧ್ಯಾಯರು, ಇಂದಿನ ಡೆಮಾಕ್ರೆಸಿಯಲ್ಲಿ ಬಹುಮತ ಅಭಿಪ್ರಾಯವೇ ಸರಿಯಾಗಿರುವುದರಿಂದ 9 ಹೇಳಿದ್ದು ಸರಿ, ಉಳಿದ ಒಬ್ಬನು ಹೇಳಿದ ಉತ್ತರ ಸರಿಯಲ್ಲವೆಂದು ತೀರ್ಪಿತ್ತರಂತೆ. ಹಾಗೆ ಇವತ್ತು ವಿರೋಧ ಪಕ್ಷದವರು ಏನು ಹೇಳಿದರೂ ಅದು ಸರಿಯಲ್ಲವೆಂಬ ಅಭಿಪ್ರಾಯ ಇವರಿಗೆ ಇದೆ. ನಾವು ಹೇಳಿದ್ದನ್ನು ಮೀರಿದ್ದಾರೆ. ಇದರಲ್ಲಿ ಅನೇಕ ಲೋಪದೋಷಗಳನ್ನು ಮಾಡಿದ್ದಾರೆ. ಆದ್ದರಿಂದ ಇಂಥ ಕಾಯಿದೆಗಳನ್ನು ತರುವಾಗ ಬಹಳ ಸೂಕ್ಷ್ಮವಾಗಿ ಆಲೋಚನೆ ಮಾಡಬೇಕು. ವಿರೋಧಪಕ್ಷದವರ ವಿಶ್ವಾಸವನ್ನು ಗಳಿಸಬೇಕೆಂಬ ಸ್ವಭಾವ ಬರಬೇಕು. ಜನತೆಯ ಸಂಪರ್ಕ ಇಟ್ಟುಕೊಂಡು ವಿಚಾರ ಪರಿಶೀಲನೆ ಮಾಡಬೇಕೆಂದರೆ, ನೀವು ಜನತೆಯ ಸಂಪರ್ಕವನ್ನು ದೂರವಾಗಿ ಇಟ್ಟುಕೊಂಡಿದ್ದೀರಿ. ಎಲ್ಲಿಯ ತನಕ ಈ ರೀತಿ ಮಾಡುತ್ತೀರಿ? 1972ರ ವರೆಗೆ ಹೀಗೆ ಮಾಡಬಹುದು. ಎಷ್ಟೋ ಜನರು ಇದಕ್ಕೆ ಪ್ರತಿಭಟನೆ ಮಾಡಿದರೂ, ಯಾರ ಮಾತನ್ನೂ ತಾವು ಕೇಳಲಿಲ್ಲ. ಇದರಲ್ಲಿ ನೀವು ಎಷ್ಟು ಮಂತ್ರಿಗಳನ್ನು ಬದಲಾವಣೆ ಮಾಡಿದ್ದೀರಿ ಎಂಬುದನ್ನು ಯೋಚನೆ ಮಾಡಿ. ಇವತ್ತು ಕಾರ್ಪೋರೇಷನ್ ಚುನಾವಣೆಯನ್ನು ಮಾಡುವುದಕ್ಕೆ ಹೋದರೆ ಜನರು ಅದನ್ನು ತಿರಸ್ಕರಿಸುತ್ತಾರೆ, ನಾವು ಚುನಾವಣೆ ಮಾಡುವುದಿಲ್ಲ, ನಮ್ಮ ಪ್ರತಿನಿಧಿಗಳನ್ನು ಅಲ್ಲಿ ಇಡುತ್ತೇವೆ. ಚುನಾವಣೆಯಾಗಿ ಪ್ರತಿನಿಧಿಗಳು ಬಂದರೆ ನಮ್ಮ ಕೆಲಸ ನಡೆಯಲಾರದು ಎಂಬ ಒಂದು ಅಭಿಪ್ರಾಯವನ್ನು ಸರ್ಕಾರ ತಾಳಿ, ಅಂಥ ಸಂಸ್ಥೆಗಳಿಗೆ ರಿಜೆಕ್ಟಾದ ಜನರನ್ನು ಆಡ್ಮಿನಿಸ್ಟ್ರೇಟರನ್ನು ಮಾಡುತ್ತಿದ್ದಾರೆ.

---

ವಿಸನದಿ: 27-8-1969

ಈಗ ನೀವು ಎಲ್ಲಾ ಕೌನ್ಸಿಲರುಗಳ ಅಧಿಕಾರವನ್ನೂ ಒಬ್ಬ ಮನುಷ್ಯನ ಕೈಯಲ್ಲಿ ಕೊಟ್ಟು ಆಡಳಿತಾಧಿಕಾರಿಯನ್ನು ನೇಮಕ ಮಾಡಿದ್ದೀರಿ, ಮನುಷ್ಯ ವಿವೇಚನಾಶೀಲನಾಗಿ ಎಲ್ಲಾ ವಿಚಾರಗಳನ್ನು ಪರಿಶೀಲನೆ ಮಾಡುತ್ತಾನೆಯೇ? ನಾನು ಒಂದು ಮಾತನ್ನು ಹೇಳುತ್ತೇನೆ. ಈ ಮಸೂದೆಯಲ್ಲಿ ಲೋಪದೋಷಗಳಿಲ್ಲದೆ ಇದು ಕ್ರಮವಾದ ಬಿಲ್ಲು ಆಗಿದ್ದರೆ ಅದನ್ನು ನಾನು ಸ್ವಾಗತಿಸುತ್ತೇನೆ. ಇದರಲ್ಲಿರತಕ್ಕ ಅಕ್ರಮಗಳನ್ನು ನಾನು ವಿರೋಧಿಸುತ್ತೇನೆ. ಶ್ರೀಮಾನ್ ಬಿ.ಎಂ. ಪಾಟೀಲರು ಇನ್ನೂ ತರುಣರಾಗಿದ್ದಾರೆ. ಅವರ ಬಗ್ಗೆ ನಮಗೆ ವಿಶ್ವಾಸ ಇದೆ. ಅವರು ನೈತಿಕ ಬಲವನ್ನು ಕಳೆದುಕೊಳ್ಳುವುದಿಲ್ಲ. ಅವರು ಹಿಂದೆ ಏನು ಭರವಸೆಯನ್ನು ಕೊಟ್ಟಿದ್ದಾರೆ ಅದನ್ನು ಉಳಿಸಿಕೊಳ್ಳುವ ಸಲುವಾಗಿ ಡಿಸೆಂಬರ್ ತಿಂಗಳಲ್ಲಿ ಕಾರ್ಪೋರೇಶನ್ ಚುನಾವಣೆಯನ್ನು ನಡೆಸುತ್ತಾರೆ ಎಂದು ನಾನು ನಂಬಿದ್ದೇನೆ. ಎದುರು ಪಕ್ಷದವರಲ್ಲಿ ಕಾಂಗ್ರೆಸ್ ಮಂತ್ರಿಮಂಡಲ ಹೋಗಬೇಕು ಎನ್ನುವವರು ಯಾರು ಇದ್ದಾರೆ ಅವರು ಈ ಕಾರ್ಪೋರೇಶನ್ ಚುನಾವಣೆ ಆಗಬೇಕು ಎಂದು ಹೇಳುತ್ತಿದ್ದಾರೆ ಎಂದು ಮಾನ್ಯ ಮಂತ್ರಿಗಳು ತಿಳಿದುಕೊಳ್ಳಬಾರದು. ನಿಮ್ಮ ಅಧಿಕಾರ ದುರುಪಯೋಗಪಡಿಸಿಕೊಂಡು ಅಧಿಕಾರ ಬೆಂಬಲದಿಂದ ಚುನಾವಣೆ ನಡೆಸುವುದು ಬೇಡ ಎಂದು ಯಾರು ಹೇಳುತ್ತಾರೆಯೋ ಅವರ ಮಾತನ್ನು ತಾವು ಗಮನಿಸಬಾರದು ಎಂದು ನಾನು ತಮ್ಮ ಗಮನವನ್ನು ಆ ಕಡೆ ಸೆಳೆಯುತ್ತೇನೆ. ತಾವು ಆದಷ್ಟು ತೀವ್ರವಾಗಿ ಬೆಂಗಳೂರು ಕಾರ್ಪೋರೇಶನ್ ಚುನಾವಣೆಯನ್ನು ನಡೆಸುವ ಕಡೆ ಲಕ್ಷ್ಯ ಕೊಡಬೇಕು ಎಂದು ನಾನು ಹೇಳುತ್ತೇನೆ. ನಿಮ್ಮ ಸರ್ಕಾರದ ವರ್ತನೆ ಚುನಾವಣೆಯ ವಿಷಯದಲ್ಲಿ ಬದಲಾವಣೆಯಾಗಿದ್ದರೆ ತಾವು ಆಲೋಚನೆ ಮಾಡಿ, ಚುನಾವಣೆ ಆದ ಹೊರತು ಜನಾಭಿಪ್ರಾಯ ಗೊತ್ತಾಗುವುದಿಲ್ಲ. ಕೆಲವಾರು ವರ್ಷಗಳ ಹಿಂದೆ ನಮ್ಮ ರಾಷ್ಟ್ರದಲ್ಲಿ ಯಾರ ಯಾರ ಬಗ್ಗೆ ಏನು ಭಾವನೆ ಜನತೆಗೆ ಇತ್ತು ಇವೊತ್ತು ಏನಾಗಿದೆ ಎಂಬುದು ಎಲ್ಲರಿಗೂ ಗೊತ್ತಾಗಿದೆ. ಇಡೀ ಸಿಂಡಿಕೇಟು ರಾಷ್ಟ್ರವನ್ನು ಆಳುತ್ತಿತ್ತು. ಅದು ಇವೊತ್ತು ಪುಡಿ ಪುಡಿಯಾಗಿದೆ. ರಾಷ್ಟ್ರಾಧ್ಯಕ್ಷರ ಚುನಾವಣೆಯಾದ ಮೇಲೆ ಯಾರ ಯಾರ ಬೆಂಬಲ ಯಾರು ಯಾರಿಗೆ ಇದೆ ಎಂಬುದು ಗೊತ್ತಾಗಿದೆ. ಈಗ ನಿಮಗೆ ಅರಿವಾಗಿದೆ. ಕಾರ್ಪೋರೇಶನ್ ಚುನಾವಣೆ ಆದರೆ ಬೆಂಗಳೂರಿನ ಜನತೆಯ ಬೆಂಬಲ ಸರ್ಕಾರದ ಮೇಲೆ ಯಾವ ರೀತಿ ಇದೆ ಎನ್ನುವ ಅರಿವು ನಿಮಗೆ ಆಗುತ್ತದೆ. ಬೆಂಗಳೂರು ಕಾರ್ಪೋರೇಶನ್ನಲ್ಲಿ ಕಾಂಗ್ರೆಸ್ಸಿನವರಿಗೆ ಬೆಂಬಲ ಕಡಿಮೆಯಾಗಿದೆ. ಅದಕ್ಕೋಸ್ಕರ ಸರ್ಕಾರದವರು ಈ ಚುನಾವಣೆಯನ್ನು ಮಾಡುವುದಿಲ್ಲ. ಬೆಂಗಳೂರು ಕಾರ್ಪೋರೇಶನ್ನಿನ ಚುನಾವಣೆಯನ್ನು ಮಾಡುವುದು ಕಷ್ಟವಾಗಿರುವುದರಿಂದ ಅನೇಕ ಕಡೆ ಮುನಿಸಿಪಾಲಿಟಿಗಳ ಚುನಾವಣೆಯನ್ನು ಮಾಡುವುದಕ್ಕೆ ಇವರು ಹೆದರುತ್ತಿದ್ದಾರೆ ಎನ್ನುವ ಭಾವನೆ ಬರಬಾರದು. ಶ್ರೀಮಾನ್ ಬಿ.ಎಂ. ಪಾಟೀಲರ ವಿಷಯದಲ್ಲಿ ಜನಗಳಿಗೆ ಅಪನಂಬಿಕೆ ಬರಬಾರದು. ನೀವು ಕಾರ್ಪೋರೇಶನ್‌ನಲ್ಲಿ ಆಗಲೀ ಮುನಿಸಿಪಾಲಿಟಿಯಲ್ಲಾಗಲಿ, ಒಬ್ಬ ಆಡಳಿತಗಾರನನ್ನು ನೇಮಿಸಿ ಅವರ ಕೈಯಲ್ಲಿ ಅಧಿಕಾರವನ್ನು ಕೊಡುವುದಾದರೆ ನಿಜವಾಗಿ ಅದರಿಂದ ಜನತೆಗೆ ನ್ಯಾಯ ದೊರಕುತ್ತದೆಯೇ? ನೀವು ಈ ರೀತಿ ಮಾಡುವುದಕ್ಕೆ ಹೊರಟಿರುವುದು ಸರಿಯಲ್ಲ ಎಂದು ನಾನು ತಮ್ಮಲ್ಲಿ ಕಳಕಳಿಯಿಂದ ಬಿನ್ನಹ ಮಾಡಿಕೊಳ್ಳುತ್ತೇನೆ. ಅಗ್ರಿಕಲ್ಚರಲ್ ಪ್ರೊಡ್ಯೂಸ್ ಮಾರ್ಕೆಟ್ ಬಿಲ್ ಈ ಸಭೆಯ ಮುಂದೆ ಬಂದಾಗ ಮಾನ್ಯ ಕಾಯಿದೆ ಸಚಿವರು ಮಾರ್ಮಿಕವಾಗಿ ಹೇಳಿ ಚುನಾವಣೆ ಮಾಡುವುದಕ್ಕೆ ಸರ್ಕಾರ ಕಟ್ಟುಬಿದ್ದಿದೆ ಎಂದು ಹೇಳಿದ್ದಾರೆ ಆದ್ದರಿಂದ ತಾವು ಆ ರೀತಿ ಹೇಳುವುದಕ್ಕೆ ಹೋಗಬೇಡಿ. ಈಗ ಮುನಿಸಿಪಾಲಿಟಿಗಳಿಗೆ ಸಂಬಂಧಪಟ್ಟ

ಅಧಿಕಾರ ತಮ್ಮ ಕೈಯಲ್ಲಿ ಇರುವುದರಿಂದ ನಿಶ್ಚಯವಾಗಿ ಮುನಿಸಿಪಾಲಿಟಿಗಳು ಮತ್ತು ಬೆಂಗಳೂರಿನ ಚುನಾವಣೆಗಳನ್ನು ತೀವ್ರವಾಗಿ ಜರುಗಿಸಬೇಕು. ಚುನಾವಣೆಯನ್ನು ಮಾಡದೆ ಮುನಿಸಿಪಾಲಿಟಿಗಳಲ್ಲಿ ಸುಂಕ ವಗೈರೆಗಳನ್ನು ವಿಧಿಸುವುದಾಗಲೀ, ಅವುಗಳನ್ನು ವಸೂಲು ಮಾಡುವುದಾಗಲೀ ಕಷ್ಟವಾದೀತು. ಮುನಿಸಿಪಾಲಿಟಿಗಳಲ್ಲಾಗಲೀ, ಕಾರ್ಪೋರೇಶನ್ನಿನ ಆಡಳಿತದಲ್ಲಾಗಲೀ ಜನಗಳಿಗೆ ತೊಂದರೆಯುಂಟಾದಾಗ, ಅಡಚಣೆಗಳುಂಟಾದಾಗ ಅವರು ಕೋರ್ಟುಗಳಿಗೆ ರಿಟ್ ಹೋಗುವಂಥಾ ಸಂದರ್ಭಗಳು ಇರುವುದರಿಂದ ಅಂತವುಗಳನ್ನೆಲ್ಲಾ ದೂರ ಮಾಡಿ ಪ್ರಜಾಪ್ರಭುತ್ವ ನೀತಿಗನುಗುಣವಾಗಿ ಆಡಳಿತವನ್ನು ನಡೆಸುವುದಕ್ಕೆ ಪ್ರಯತ್ನ ಮಾಡಬೇಕು ಎಂದು ನಾನು ತಮ್ಮಲ್ಲಿ ಸವಿನಯದಿಂದ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ಆದಷ್ಟು ಜಾಗ್ರತೆ ತಾವು ಚುನಾವಣೆ ನಡೆಸುವುದಕ್ಕೆ ಪ್ರಯತ್ನ ಮಾಡಬೇಕು. ಪ್ರಾಮಾಣಿಕವಾಗಿ ಚುನಾವಣೆಯನ್ನು ನಡೆಸದೆ ಆ ತೊಂದರೆ ಬಂತು. ಈ ತೊಡಕು ಬಂತು ಎಂದು ಇಲ್ಲದೇ ಇರತಕ್ಕ ನೆಪಗಳನ್ನು ಒಡ್ಡಿ ಚುನಾವಣೆಯನ್ನು ಮುಂದೆ ಹಾಕುವುದು ಬೇಡಿ. ನಿಮ್ಮ ಸರ್ಕಾರದವರು ಈ ಮನೆಗೆ ಕೊಟ್ಟಂತಹ ಆಶ್ವಾಸನೆಗೆ ಭಂಗವನ್ನುಂಟು ಮಾಡುವುದಾದರೆ ಅದರಿಂದ ಜನತೆಗೆ ಮೋಸ ಮಾಡಿದಂತಾಗುತ್ತದೆ. ಆದ್ದರಿಂದ ಅಂಥಾ ಪ್ರಮಾದವೇನೂ ಆಗುವುದಿಲ್ಲ. ತಾವು ಆಶ್ವಾಸನೆ ಕೊಟ್ಟಂತೆ ಡಿಸೆಂಬರ್ ತಿಂಗಳಿನಲ್ಲಿ ಬೆಂಗಳೂರು ಕಾರ್ಪೋರೇಶನ್ನಿನ ಚುನಾವಣೆಯನ್ನು ಮಾಡಿ, ಚುನಾಯಿತ ಮೇಯರನ್ನು ಕಾಣುವಂಥಹ ಭಾಗ್ಯ ಜನತೆಗೆ ಬರಲಿ ಎಂದು ಹಾರೈಸಿ ನಾನು ನನ್ನ ಮಾತನ್ನು ಮುಗಿಸುತ್ತೇನೆ.

# ಕರ್ನಾಟಕದಲ್ಲಿ ಭೀಕರ ಬರಗಾಲದ ಬಗ್ಗೆ ಚರ್ಚೆ

ಮಾನ್ಯ ಅಧ್ಯಕ್ಷರೇ, ಕರ್ನಾಟಕ ರಾಜ್ಯದಲ್ಲಿ ಹಿಂದೆಂದೂ ಇಲ್ಲದಂಥ ಭೀಕರವಾದ ಬರಗಾಲ ಇಂದು ನಮ್ಮ ಪಾಲಿಗೆ ಬಂದಿದೆ. ಇದು ರಾಜ್ಯ ಸರ್ಕಾರಕ್ಕೂ ಜನತೆಗೂ ದೇವರಿಂದ ನಿರ್ಮಿತವಾದಂಥಹ ಒಂದು ಚಾಲೆಂಜ್ ಎನ್ನುವುದಕ್ಕೆ ಅಡ್ಡಿಯಿಲ್ಲ. ನಮ್ಮ ಸರ್ಕಾರದವರೂ ಸಹ ಈ ಬರಗಾಲ ನಿವಾರಣೆ ವಿಷಯದಲ್ಲಿ ವಿಶೇಷ ಆಸಕ್ತಿ ವಹಿಸಿ ಅನೇಕ ಕಾರ್ಯಕ್ರಮಗಳನ್ನು ಮಾಡಲಿಕ್ಕೆ ಉತ್ಸುಕರಾಗಿದ್ದಾರೆ. ನಮ್ಮ ರಾಜ್ಯದ ಕಾಂಗ್ರೆಸ್ ಪಾರ್ಲಿಮೆಂಟ್ ಸದಸ್ಯರೆಲ್ಲ ಕೇಂದ್ರ ಸರ್ಕಾರದ ಸಂಬಂಧಪಟ್ಟ ಸಚಿವರನ್ನು ಮತ್ತು ಪ್ರಧಾನಿಗಳನ್ನು ಭೇಟಿಯಾಗಿ ಸಹಾಯದ ಬಗ್ಗೆ ಹೋರಿದ್ದಾರೆ. ನಾನು ಸಹ ಆಹಾರ ಸಚಿವರೊಡನೆ ಮತ್ತು ಆರ್ಥಿಕ ಸಚಿವರೊಡನೆ ಮಾತನಾಡಿದಾಗ, ಕರ್ನಾಟಕ ರಾಜ್ಯಕ್ಕೆ ಸಮರ್ಪಕವಾದ ಸಹಾಯವನ್ನು ಮಾಡುವ ಭರವಸೆಯನ್ನು ಅವರು ನೀಡಿದ್ದಾರೆ. ರಾಜ್ಯ ಸರ್ಕಾರದ ಮಂತ್ರಿಗಳೂ ಸಹ ಅನೇಕ ಜಿಲ್ಲೆಗಳಲ್ಲಿ ಈಗಾಗಲೇ ಪ್ರವಾಸ ಮಾಡಿ ಅನುಭವವನ್ನು ಪಡೆದಿದ್ದಾರೆ. ನಮ್ಮ ಎದುರಿಗೆ ಇರತಕ್ಕಂಥ ಭೀಕರವಾದ ಸಮಸ್ಯೆಯನ್ನು ಹೇಗೆ ನಿವಾರಣೆ ಮಾಡಬೇಕು ಎನ್ನುವುದು ಮುಖ್ಯ. ಮಾನ್ಯ ಅಧ್ಯಕ್ಷರ ಮತದಾರರ ಕ್ಷೇತ್ರದಲ್ಲೂ ಸಹ ಭೀಕರವಾದ ವಾತಾವರಣವನ್ನು ನಾನು ಕಣ್ಣಾರೆ ಕಂಡಿದ್ದೇನೆ. ಮಾನ್ಯ ಮುಖ್ಯ ಮಂತ್ರಿಗಳು ನಿನ್ನೆಯ ದಿವಸ ಇದೇ ಸದನದಲ್ಲಿ ಮಾತನಾಡುವಾಗ ಕೇವಲ ಸರ್ಕಾರದಿಂದಲೇ ಸಂಪೂರ್ಣವಾಗಿ ಜನತೆಯನ್ನು ಸಮಾಧಾನ ಮಾಡುವುದು ಸಾಧ್ಯವಿಲ್ಲ. ಅದಕ್ಕೆ ಎಲ್ಲಾ ಶಾಸಕರ ಸಹಾಯವನ್ನು ಅವರು ಕೋರಿ ಬಹಳ ಉತ್ತಮವಾದಂಥ ವಾತಾವರಣವನ್ನು ನಿರ್ಮಾಣ ಮಾಡಿದ್ದಾರೆ. ಶಾಸಕರು ಅಷ್ಟೇ ಅಲ್ಲ ಈ ಸದನದ ಮುಖಾಂತರ ಸಮಸ್ತ ಕರ್ನಾಟಕ ರಾಜ್ಯದ ಜನತೆಯಲ್ಲಿ ಸಾಮಾನ್ಯ ಜನತೆಗೆ ನೈತಿಕ ಧೈರ್ಯವನ್ನು ತರುವುದಕ್ಕಾಗಿ ಸಹಕಾರವನ್ನು ಕೋರುವುದು ಅತ್ಯಂತ ಅವಶ್ಯಕವಾಗಿದೆ. ಇಂದು ನಮ್ಮಲ್ಲಿರುವ ಬರಗಾಲವನ್ನು 3-4 ವಿಭಾಗಗಳನ್ನಾಗಿ ಮಾಡಬಹುದು. ಮೊದಲನೆದಾಗಿ ಆಹಾರ ಸಮಸ್ಯೆ ಕೇಂದ್ರದಲ್ಲೂ ಸಾಕಷ್ಟು ಆಹಾರ ಧಾನ್ಯ ಇದೆ ರಾಜ್ಯದಲ್ಲೂ ಸಹ ಹಿಂದಿನದಕ್ಕಿಂತ ಸಾಕಷ್ಟು ಆಹಾರ ಇದೆ ಎಂದು ಹೇಳುತ್ತಾ ಇದ್ದೇವೆ. ಆದರೆ ಇಂದು ಹಂಚುವಿಕೆ ಪದ್ಧತಿ ಕೇವಲ ಷಹರುಗಳಿಗೆ ಮಾತ್ರ ಮೀಸಲಾಗಿಟ್ಟಿದೆ. ನಿನ್ನೆ ದಿವಸ ಮಾನ್ಯ ಮುಖ್ಯ ಮಂತ್ರಿಗಳು ಮಾತನಾಡುತ್ತ ಅನೇಕ ತಾಲ್ಲೂಕು ಮಾರ್ಕೆಟಿಂಗ್ ಸೊಸೈಟಿಗಳಿಗೆ ಆಹಾರವನ್ನು ಸರ್ಕಾರ ಕೊಟ್ಟರೂ ಅವು ಒಯ್ಯುಲ್ಪಟ್ಟಿಲ್ಲ ಎಂದು ಹೇಳಿದರು. ಈ ಪರಿಸ್ಥಿತಿಯನ್ನು ನೋಡಿದರೆ ನಿಜವಾಗಿಯೂ ನಮ್ಮ ಹಂಚುವಿಕೆ ಪದ್ಧತಿಯಲ್ಲಿ ತೀವ್ರ ಅಗತ್ಯವಾದ ಬದಲಾವಣೆಯಾಗಬೇಕು ಎನ್ನುವ ಮಾತು ಸ್ಪಷ್ಟವಾಗುತ್ತದೆ. ಆಹಾರವನ್ನು ಸಹಕಾರ ಸಂಘಗಳು ಹಂಚಲಿ, ಮತ್ತಿತರ ಮಾರ್ಕೆಟಿಂಗ್ ಸೊಸೈಟಿಗಳು ಹಂಚಲಿ, ಸರ್ಕಾರ ಹಾಗೂ ನಮ್ಮೆಲ್ಲರ ಕರ್ತವ್ಯ ಜನತೆಗೆ ಆಹಾರವನ್ನು ಮುಟ್ಟಿಸುವುದಾಗಿದೆ. ಒಂದು ವೇಳೆ ಸಹಕಾರ ಸಂಘಗಳು ತಮ್ಮ ಕರ್ತವ್ಯ ಮಾಡುವುದರಲ್ಲಿ ಲೋಪವಾದರೆ ಅಲ್ಲಿ ಬೇರೆ ರೀತಿಯ ಗ್ರಾಹಕರ ಸಂಘಗಳು ಮತ್ತು ಪಂಚಾಯಿತಿಗಳು ಏನು ಇರುತ್ತವೆ ಅವುಗಳಿಗೆ ಈ ಕಾರ್ಯವನ್ನು ವಹಿಸಿ ಎಲ್ಲಾ ಹಳ್ಳಿಗಳಲ್ಲೂ ಆಹಾರವನ್ನು ಹಂಚುವ ಪದ್ಧತಿಯನ್ನು ಅನುಸರಿಸುವುದು ಒಳ್ಳೆಯದು. ಈ ಕಡೆ ಮಾನ್ಯ ಮುಖ್ಯ ಮಂತ್ರಿಗಳು ಗಮನಹರಿಸುವುದು ಅಗತ್ಯ. ಚಿತ್ರದುರ್ಗ ಮುಂತಾದ ಕಡೆಗಳಲ್ಲಿನ ಆಹಾರದ

ವಿಸನದಿ: 13-11-1970

ಕೊರತೆಯನ್ನು ಮುಖ್ಯ ಮಂತ್ರಿಗಳ ಗಮನಕ್ಕೆ ನಾನು ತಂದಾಗ ಕೂಡಲೇ ಅದಕ್ಕೆ ಸೂಕ್ತ ವ್ಯವಸ್ಥೆ ಮಾಡಿ ನನ್ನ ಕೃತಜ್ಞತೆಗೆ ಪಾತ್ರರಾದರು. ಸುದೈವದಿಂದ ಭಾರತ ದೇಶದಲ್ಲಿ ಬಹಳ ಕಡೆಗೆ ಬರಗಾಲ ಇಲ್ಲ. ಕರ್ನಾಟಕ ರಾಜ್ಯದಲ್ಲಿ ಎಷ್ಟೇ ಬರಗಾಲವಿದ್ದರೂ ಅದನ್ನು ನಾವೆಲ್ಲಾ ಕೂಡಿ ಎದುರಿಸುವೆವು ಎನ್ನುವ ಆತ್ಮವಿಶ್ವಾಸ ನಮಗೆ ಇದೆ. ಇದನ್ನು ಪ್ರತಿಯೊಬ್ಬ ಸದಸ್ಯರು ಎಲ್ಲಾ ಜನತೆಗೂ ಮುಟ್ಟಿಸಬೇಕು ಎನ್ನುವುದೇ ನನ್ನ ಕಳಕಳಿಯ ಪ್ರಾರ್ಥನೆ. ಅನೇಕ ಹಳ್ಳಿಗಳಲ್ಲಿ ನೀರು ಇಲ್ಲದಂಥ ಪರಿಸ್ಥಿತಿ ಉಂಟಾಗಿದೆ. ಈ ದಿಶೆಯಲ್ಲಿ ನಾವು ನಿಯಮವನ್ನು ಹಾಕಿಕೊಂಡರೂ, ಪ್ರಣಾಳಿಕೆಯಲ್ಲಿ ಎಲ್ಲಾ ಕಡೆಗೂ ನೀರನ್ನು ಕೊಡುತ್ತೇವೆ ಎಂದು ಹೇಳಿದರೂ ಮನುಷ್ಯ ಪ್ರಯತ್ನಕ್ಕೆ ಹೊರತಾಗಿ ಅನೇಕ ಹಳ್ಳಿಗಳಲ್ಲಿ ನೀರು ಇಲ್ಲದಂತಾಗಿದೆ. ಮಾನ್ಯ ಮುಖ್ಯಮಂತ್ರಿಗಳು ಅವರ ಹೇಳಿಕೆಯಲ್ಲಿ ಇದಕ್ಕೆ ಉತ್ತರ ಕೊಡುತ್ತಾರೆ ಎಂದು ಭಾವನೆ ಮೂಡುತ್ತದೆ. ಏನಾದರೂ ಪ್ರಯತ್ನ ಮಾಡಿ ಯಾವ ಹಳ್ಳಿಯಲ್ಲೂ ನೀರಿನ ಅಭಾವ ಆಗದಂತೆ ಕಾರ್ಯಕ್ರಮ ಕೈಗೊಳ್ಳಬೇಕು. ಸಾಲವನ್ನು ಕೊಡುವುದರಿಂದಲೇ ಎಲ್ಲಾ ಮಾಡಿದಂತಾಗುತ್ತದೆ ಎಂದು ಮಾತನಾಡುವುದು ಅಲ್ಲ ಇದನ್ನು ಒಂದೇ ಯೋಜನೆಯಿಂದ ತೀವ್ರ ರೀತಿಯಲ್ಲಿ ಕಾರ್ಯಕ್ರಮ ತೆಗೆದುಕೊಂಡಾಗಲೇ ನಮಗೆ ಸಮಾಧಾನವಾಗುತ್ತದೆ ಎಂದು ಹೇಳದೆ ಗತ್ಯಂತರವಿಲ್ಲ. ಈ ಸ್ಕೇರ್ಸಿಟಿ ವರ್ಕ್ಸ್ ಬಗ್ಗೆ ಮಾನ್ಯ ರೆವಿನ್ಯೂ ಮಿನಿಸ್ಟರ್ ನಿನ್ನೆ ದಿವಸ ಬಹಳ ಸಮಾಧಾನಕರವಾದಂಥ ರೀತಿಯ ಆ ಹೇಳಿಕೆಯನ್ನು ಕೊಟ್ಟಿದ್ದಾರೆ. ನಾವು ಸಾಕಷ್ಟು ಕಾರ್ಯಗಳನ್ನು ಮಾಡುತ್ತಾ ಇದ್ದೇವೆ ಎಂದು ಹೇಳಿದ್ದಾರೆ. ಫೈನಾನ್ಸ್ ಮಿನಿಸ್ಟರ್ ಹಣದಕೊರತೆ ಆಗದಂತೆ ನೀಡುತ್ತೇವೆ ಎಂದು ಹೇಳಿದರು. ಇದು ನಿಜವಾಗಿಯೂ ಅಭಾವ ಪರಿಸ್ಥಿತಿ ಬಗ್ಗೆ ಸರ್ಕಾರ ತೋರಿಸುವಂಥ ಉತ್ಸುಕತೆಯಾಗಿದೆ. ಇದು ನಿಜವಾಗಿಯೂ ಜನತೆಗೆ ತೀವ್ರಗತಿಯಲ್ಲಿ ಮುಟ್ಟಬೇಕು. ತಡವಾದಷ್ಟೂ ನಮ್ಮ ಪರಿಸ್ಥಿತಿ ಪ್ರಕ್ಷುಬ್ದವಾಗುವ ಸಂಭವ ಇದೆ. ಶ್ರೀಮಾನ್ ಸನದಿಯವರು ಹೇಳಿದಂತೆ ಈ ಪರಿಸ್ಥಿತಿಯನ್ನು ಪ್ರಕ್ಷುಬ್ದಗೊಳಿಸಲಿಕ್ಕೆ ಪ್ರಯತ್ನ ಮಾಡುವುದು ಬೇಡ- ಅದನ್ನು ಹತೋಟಿಯಲ್ಲಿಡಲು ಎಲ್ಲರೂ ಸಹಕಾರ ನೀಡುವುದಕ್ಕೆ ಪ್ರಯತ್ನ ಮಾಡಬೇಕಾಗಿದೆ. ಮೈಸೂರು ಜಿಲ್ಲೆಯಲ್ಲಿ, ಚಿತ್ರದುರ್ಗ ಜಿಲ್ಲೆಯಲ್ಲಿ ಪ್ರತಿಯೊಂದು ತಾಲ್ಲೂಕುಗಳನ್ನು ನಾನು ಕಣ್ಣಾರೆ ಕಂಡಿರುವುದರಿಂದ ಅಲ್ಲಿನ ಪರಿಸ್ಥಿತಿ ತೀವ್ರ ಪ್ರಕ್ಷುಬ್ಧವಾಗಿದೆ. ಕೇವಲ ನೀರಾವರಿಯಿಂದ ಬೆಳೆಯತಕ್ಕ ಪ್ರದೇಶಗಳನ್ನು ಬಿಟ್ಟರೆ ಉಳಿದ ಪ್ರದೇಶಗಳು ತೀರ ಪ್ರಕ್ಷುಬ್ದವಾಗಿದೆ. ಧಾರವಾಡದ ಅನೇಕ ಜಿಲ್ಲೆಗಳು ಬರಗಾಲಕ್ಕೆ ತುತ್ತಾಗಿದ್ದರೂ ಈ ಪ್ರಕ್ಷುಬ್ಧದ ಕಹಿಯನ್ನು ನೋಡಿದಾಗ ಹಳೇ ಮೈಸೂರು ಪ್ರದೇಶದಲ್ಲಿ ಹೆಚ್ಚು ಪ್ರಕ್ಷುಬ್ದತೆ ಇದೆ ಎನ್ನುವುದನ್ನು ನಾನು ಮನಸಾರೆ ಕಂಡಿದ್ದೇನೆ, ಒಪ್ಪಿದ್ದೇನೆ. ಉಳಿದ ಜಿಲ್ಲೆಗಳು ಅಂದರೆ ಬಿಜಾಪುರ ಜಿಲ್ಲೆ ಮತ್ತು ಧಾರವಾಡದ ಕೆಲವು ಭಾಗಗಳಲ್ಲಿ ಆಗಾಗ ಬರಗಾಲದ ಪರಿಸ್ಥಿತಿ ಇರುತ್ತದೆ. ಮಾನ್ಯ ಸದಸ್ಯರು ಹೇಳಿದಂತೆ ಒಂದು ಪ್ರದೇಶಕ್ಕೆ ಒಂದು ರೀತಿ ಇನ್ನೊಂದು ಪ್ರದೇಶಕ್ಕೆ ಇನ್ನೊಂದು ರೀತಿ ಮಾಡುವುದು ಬೇಡ. ಸರ್ವರನ್ನೂ ಸಮನಾಗಿ ಕಾಣಬೇಕಾಗಿರುವುದರಿಂದ ಎಲ್ಲಾ ಕಡೆಯೂ ಒಂದೇ ರೀತಿ ಬರಗಾಲ ನಿವಾರಣೆ ಮಾಡುವಂಥ ಕಾರ್ಯಕ್ರಮವನ್ನು ಕೈಗೊಳ್ಳಬೇಕು. ಈಗ ನಮ್ಮೆದುರಿಗೆ ಇರುವಂಥ ಸಮಸ್ಯೆಗಳಿಗೆ ಹಲವಾರು ಸೂಕ್ತವಾದಂಥ ಯೋಜನೆಗಳನ್ನು ಹಾಕಿದ್ದೀರಿ. ಹೆಚ್ಚು ಹೆಚ್ಚಾಗಿ ನಿರಂತರವಾಗಿ ನೀರಾವರಿ ಯೋಜನೆಗಳನ್ನು ತೆಗೆದುಕೊಳ್ಳಬೇಕೆಂದು ನಾನು ಹೇಳುತ್ತೇನೆ. ಅದೇ ರೀತಿಯಲ್ಲಿ ಕೇಂದ್ರ ಸರ್ಕಾರಕ್ಕೆ ಈಗಾಗಲೇ ಅನೇಕ ಮನವಿಗಳನ್ನು ಸಲ್ಲಿಸಿದ್ದೇನೆ. ಅಷ್ಟಾದರೂ ಕೂಡ ಜನತೆಯ ಬರಗಾಲ ವಾತಾವರಣ ಮುಗಿಯುವುದಕ್ಕಾಗಿಲ್ಲ. ಆದರಿಂದಾಗಿ ಮಧ್ಯಮ

ತರಗತಿಯ ಜನಗಳು ಅಲ್ಲಿ ಇಲ್ಲಿ ಸಾಲಗಳನ್ನು ತೆಗೆದುಕೊಂಡು ತುಂಬಾ ಕಷ್ಟ ಪರಿಸ್ಥಿತಿಯಲ್ಲಿದ್ದಾರೆ. ತೆಗೆದುಕೊಂಡ ಸಾಲವನ್ನು ಸಹ ಕೊಡುವ ಪರಿಸ್ಥಿತಿಯಲ್ಲಿಯೂ ಅನೇಕರು ಇಲ್ಲ. ಈಗಿನ ಒಂದು ಸನ್ನಿವೇಶದಲ್ಲಿ ಕೆಲವಾರು ಕಾನೂನುಗಳ ಜಾರಿಯಿಂದ ಎಲ್ಲಿಯೂ ಸಾಲಗಳು ಹುಟ್ಟಲಾರದೆ ಜನಗಳಿಗೆ ಇಂತಹ ಒಂದು ಕಠಿಣ ಪರಿಸ್ಥಿತಿ ಈ ಅಭಾವ ಕಾಲದಲ್ಲಿ ಉಂಟಾಗಿದೆ. ಈ ರೀತಿಯಾದ ಒಂದು ಕಷ್ಟ ಪರಿಸ್ಥಿತಿ ನಿರ್ಮಾಣವಾಗಿ ಇರುವುದರಿಂದ ಇನ್ನು ಮುಂದೆ ಮಧ್ಯಮ ವರ್ಗದ ತರಗತಿಯವರಿಗೆ ಕೂಲಿಗಳನ್ನು ಹೆಚ್ಚಿಗೆ ಕೊಡಬೇಕಾಗಿದೆ. ಅದರಿಂದಾದರೂ ಅವರವರು ತಮ್ಮ ಸಂಸಾರಗಳನ್ನು ಬಿಟ್ಟು ಬೇರೆ ಕಡೆಗೆ ಹೋಗಿ ಹೊಟ್ಟೆ ಹೊರೆದುಕೊಳ್ಳುವ ಗೋಜಿಗೆ ಹೋಗುವ ಸಂದರ್ಭಗಳು ವಿರಳವಾಗುತ್ತವೆ. ಮೂರ ನಾಲ್ಕು ಮೈಲಿಗಳೊಳಗೇ ಜನರಿಗೆ ಕೂಲಿ ಸಿಗುವ ವ್ಯವಸ್ಥೆ ಮಾಡಬೇಕೆಂದು ನಾನು ಸರ್ಕಾರಕ್ಕೆ ಕಳಕಳಿಯಿಂದ ಮನವಿ ಮಾಡುತ್ತೇನೆ. ಅದರ ಜೊತೆಗೆ ನೀರಾವರಿ ಯೋಜನೆ ಎಲ್ಲೆಲ್ಲಿ ಸಾಧ್ಯವೋ ಅಲ್ಲಲ್ಲಿ ಕೂಡಲೇ ಮಾಡಿಸಬೇಕು. ಎಲ್ಲಿ ಸಾಧ್ಯವಿಲ್ಲವೋ ಅಲ್ಲಲ್ಲಿ ಅಂತಹ ಕಡೆಗಳಲ್ಲಿ ಬಾವಿಗಳನ್ನಾದರೂ ತೆಗೆಸಬೇಕು. ಓಪನ್ ವೆಲ್ ತೆಗೆಯಲು ಜನರಿಗೆ ಸಾಕಷ್ಟು ಸಾಲ ಕೊಡುವ ವ್ಯವಸ್ಥೆ ಮಾಡಬೇಕು. ಸಾಲ ಕೊಡುವ ವಿತರಣೆಯ ಕಾರ್ಯದಲ್ಲಿ ಹೆಚ್ಚಿಗೆ ಗಮನ ಇಡಬೇಕು. ಅಫಾರ್‌ಸ್ಟೇಶನ್ ಸಲುವಾಗಿ ಅನೇಕ ಕೆಲಸ ಕಾರ್ಯಗಳನ್ನು ಕೈಗೊಂಡಿದ್ದರೂ ಕೆಲವು ಕಡೆಗಳಲ್ಲಿ ಸರಿಯಾಗಿ ಕೆಲಸಗಳಾಗದೆ ಸ್ಥಗಿತವಾಗಿವೆ. ಅಫಾರಸ್ಟೇಷನ್ ಕೆಲಸ ಕಾರ್ಯಗಳು ಸರಿಯಾಗಿ ನಡೆಯದಿದ್ದರೆ ಮುಂದೆ ನಿಜವಾಗಿಯೂ ಬರಗಾಲ ಬವಣೆಯನ್ನು ಪುನಃ ಕಾಣುವ ಪರಿಸ್ಥಿತಿ ಬರುತ್ತದೆ ಜನಗಳಿಗೆ ಕೂಲಿಗಳು ಸರಿಯಾಗಿ ಸಿಗುವ ವ್ಯವಸ್ಥೆ ಮಾಡಬೇಕು. ನಮ್ಮ ಜಿಲ್ಲೆಯಲ್ಲಿ ಹೆಚ್ಚಿಗೆ ಅಫಾರಸ್ಟೇಷನ್ ಮಾಡುವುದಕ್ಕೆ ಹೆಚ್ಚಿನ ಅನುಕೂಲಗಳಿವೆ ಅದರಲ್ಲಿಯೂ ರಾಣೆಬೆನ್ನೂರ್ ತಾಲ್ಲೂಕಿನಲ್ಲಿ ಇಂತಹ ಬರಗಾಲ ಬಂದಾಗ ಹಿಂದೆ ಹೆಚ್ಚು ಹೆಚ್ಚಾಗಿ ಕಾಡಿನ ಸಂಪತ್ತು ಹೆಚ್ಚಿಸಲು ನಾನಾ ಪ್ರಯತ್ನಗಳನ್ನು ಮಾಡಿ ಸರ್ಕಾರ ನಾನಾ ಯೋಜನೆಗಳನ್ನು ಕೈಗೊಂಡು ಬರಗಾಲದ ಬವಣೆಯನ್ನು ನೀಗಿಸಲಾಯಿತು. ಅದೇ ರೀತಿಯಲ್ಲಿ ರಾಜ್ಯದ ಎಲ್ಲಾ ಕಡೆಗಳಲ್ಲಿ ಕಾಡಿನ ಸಂಪತ್ತನ್ನು ಹೆಚ್ಚಿಗೆ ಬೆಳಸಬೇಕು. ಬೆಂಗಳೂರು ಸುತ್ತಲೂ ಸುಮಾರು 20 ಮೈಲಿಗಳು ದೂರದಲ್ಲಿ ಒಳ್ಳೊಳ್ಳೆಯ ದೊಡ್ಡ ದೊಡ್ಡ ತೋಟಗಳನ್ನು ಮಾಡಲು ಹಾಗೂ ಉದ್ಯಾನವನಗಳನ್ನು ಬೆಳೆಸಲು ನಾನಾ ಯೋಜನೆಗಳನ್ನು ಹಾಕಿಕೊಂಡಿದ್ದರೂ ಅದು ಇದೂವರೆಗೆ ಇನ್ನೂ ಪೂರ್ತಿಯಾಗಿ ಕಾರ್ಯಗತವಾಗಿಲ್ಲ. ಮಾನ್ಯ ಮುಖ್ಯಮಂತ್ರಿಗಳು ಸ್ವತಃ ಇತ್ತ ಕಡೆಗೆ ತಮ್ಮ ಗಮನವನ್ನು ಹರಿಸಬೇಕು. ಬರಗಾಲದ ಅವಧಿಯಲ್ಲಿ ಜನಗಳಿಗೆ ಖಾಯಂ ಪರಿಹಾರ ಕಾರ್ಯಕ್ರಮಗಳನ್ನು ಕೈಗೊಳ್ಳಬೇಕು. ಇಲ್ಲದಿದ್ದರೆ ನಾವು ಏನು ಕೆಲಸ ಸಾಧಿಸಿದಂತಾಗುತ್ತದೆ. ಇನ್ನು ಬಹು ಮುಖ್ಯವಾಗಿ ಸರ್ಕಾರ ಮಾಡಬೇಕಾದ ಕೆಲಸವೆಂದರೆ ದನಗಳಿಗೆ ಹುಲ್ಲು ಸಾಕಷ್ಟು ಒದಗಿಸುವ ಕೆಲಸ ಮಾಡಬೇಕು. ಈಗಾಗಲೇ ನಾನಾ ಕಡೆಗಳಿಂದ ಸರ್ಕಾರಕ್ಕೆ ಹೆಚ್ಚು ಹುಲ್ಲು ಒದಗಿಸುವ ಕ್ರಮಗಳನ್ನು ಕೈಗೊಳ್ಳಬೇಕೆಂದು ಜನರಿಂದ ಮನವಿಗಳು ಬಂದಿವೆ. ಆದರೂ ದನಗಳಿಗೆ ಸಾಕಷ್ಟು ಮೇವು ದೊರಕುತ್ತಾ ಇಲ್ಲ. ಮಾನ್ಯ ಮುಖ್ಯಮಂತ್ರಿಗಳು ಹೇಳಿದಂತೆ ಈ ಒಂದು ವಿಚಾರದಲ್ಲಿ ಸರ್ಕಾರ ಅಸಮರ್ಥವಾಗದೆ ಎಲ್ಲಾ ಕಡೆಯೂ ಹೆಚ್ಚು ಹೆಚ್ಚಿಗೆ ಹುಲ್ಲು ಸರಬರಾಜು ಮಾಡುವ ಕ್ರಮವನ್ನು ಕೈಗೊಳ್ಳುತ್ತಿದ್ದಾರೆ. ಆದರೆ ಎಲ್ಲಾ ಕಡೆಯೂ ಒಂದೇ ಸಾರಿ ಹುಲ್ಲು ತಂದು ಹಾಕುತ್ತೇವೆಂದು ಆಶ್ವಾಸನೆಯನ್ನು ಈಗಲೇ ಕೊಡುವುದಕ್ಕಾಗುವುದಿಲ್ಲ.

ಸುದೈವದಿಂದ ಚೆನ್ನಾಗಿ ಮಳೆ ಕೆಲವು ಪ್ರದೇಶಗಳಲ್ಲಿ ಆಗಿದೆ. ಎಲ್ಲಾ ಕಡೆಯೂ ಚೆನ್ನಾಗಿ ಮಳೆಯಾದರೆ ಹುಲ್ಲು ಹೆಚ್ಚಿಗೆ ಬೆಳೆಯಲು ಅನುಕೂಲವಾಗುತ್ತದೆ. ದನಗಳಿಗೂ ಸಹ ಸಂತೃಪ್ತಿ ಸಿಗುತ್ತದೆ. ಇನ್ನು ಕೆಲವು ಫಾರೆಸ್ಟ್‌ಗಳ ಪ್ರದೇಶಗಳಲ್ಲಿ ಕೆಲವಾರು ಕೈಗಾರಿಕೆಗಳನ್ನು ಸ್ಥಾಪನೆ ಮಾಡುವ ಯೋಜನೆಯನ್ನು ಸರ್ಕಾರ ಕೂಡಲೇ ಕೈಗೊಳ್ಳಬೇಕು. ಅಗ್ರಿಕಲ್‌ಚರಲ್ ಫೈನಾನ್ಸ್ ಕಾರ್ಪೋರೇಷನ್ನಿಗೆ ಹಿಂದೆ ಒಂದು ಸೈಟನ್ನು ಮಂಜೂರು ಮಾಡಲಾಗಿತ್ತು. ಅದು ಈಗ ಏನಾಗಿದೆಯೆಂದು ನನಗೆ ಗೊತ್ತಾಗಲಿಲ್ಲ. ದಾಂಡೇಲಿ ಪ್ರದೇಶದಲ್ಲಿ ಬೆಳೆಯುವ ಹುಲ್ಲನ್ನು ಇಡೀ ರಾಜ್ಯಕ್ಕೆ ಹಂಚುವುದಕ್ಕಾಗುತ್ತದೆ. ಅದು ಹಾಗೆಯೇ ಅಲ್ಲಿ ಉಳಿದಿದೆ. ತೀವ್ರವಾಗಿ ಅದನ್ನೆಲ್ಲಾ ಎಲ್ಲಾ ಕಡೆಯೂ ಹಂಚಬೇಕೆಂದು ಅದಕ್ಕೆ ಸರಿಯಾದ ಹಾಗೂ ಸೂಕ್ತ ವ್ಯವಸ್ಥೆಯನ್ನು ಮಾಡಬೇಕೆಂದು ನಾನು ಅರಣ್ಯ ಶಾಖಾ ಸಚಿವರಿಗೆ ಹೇಳುತ್ತೇನೆ. ಆದರೆ ನನಗೆ ತಿಳಿದ ಮಟ್ಟಿಗೆ ದನಗಳಿಗೆ ಆಹಾರ ಒದಗಿಸುವ ಕಾರ್ಯ ಮಾತ್ರ ಬಹಳ ಕಠಿಣವಾದುದಾದರೂ ಅದರ ಬಗ್ಗೆ ಸರ್ಕಾರ ಹೆಚ್ಚಿಗೆ ಗಮನ ಕೊಡಬೇಕು. ಈ ವಿಚಾರ ಪ್ರತಿಯೊಬ್ಬ ಸದಸ್ಯರಿಗೂ ಸೇರಿದ್ದು ಅವರ ಜವಾಬ್ದಾರಿಯೂ ಇದರಲ್ಲಿದೆ. ಸದಸ್ಯರೆಲ್ಲರೂ ತಂತಮ್ಮ ತಾಲ್ಲೂಕುಗಳಲ್ಲಿ ಯಾವಾಗ ದನಗಳಿಗೆ ಮೇವಿನ ತೊಂದರೆಯಾಗುತ್ತದೆಯೋ ಅಂತಹ ಸಂದರ್ಭಗಳಲ್ಲಿ ಕೂಡಲೇ ಸರ್ಕಾರಕ್ಕೆ ತಿಳಿಸಿ ಸೂಕ್ತ ಕಾರ್ಯಕ್ರಮವನ್ನು ಅಲ್ಲಿ ತೆಗೆದುಕೊಳ್ಳಲು ಸಹಕಾರಿಯಾಗಬೇಕು. ಆದರೆ ಸರ್ಕಾರವೇ ಎಲ್ಲವನ್ನೂ ಮಾಡಬೇಕೆಂದರೆ ಬಹಳ ಕಷ್ಟವಾಗುತ್ತದೆ. ಅದಕ್ಕೆಲ್ಲಾ ಸದಸ್ಯರ ಸಹಕಾರವು ಅತ್ಯಗತ್ಯವಾಗಿದೆ. ದನಗಳಿಗೆ ಆಹಾರವನ್ನು ಒದಗಿಸುವ ವಿಷಯದಲ್ಲಿ ಸರ್ಕಾರ ಎಷ್ಟೇ ಆಸಕ್ತಿ ಪಡೆದರೂ ಇನ್ನೂ ಸಾಲದಾಗಿದೆ. ಹೆಚ್ಚು ಹೆಚ್ಚಾಗಿ ಮುತುವರ್ಜಿ ವಹಿಸಿ ಎಲ್ಲಾ ಕಡೆಗಳಲ್ಲಿಯೂ ಅವುಗಳ ಕಷ್ಟವನ್ನು ಪರಿಹಾರ ಮಾಡಬೇಕು. ಬಹಳ ಮುಖ್ಯವಾಗಿ ಎಲ್ಲೆಲ್ಲಿ ನೀರು ದೊರಕುತ್ತದೋ ಅಲ್ಲೆಲ್ಲಾ ಹುಲ್ಲನ್ನು ಬೆಳೆಸಬೇಕು. ದನಗಳ ಆಹಾರವನ್ನು ಬೆಳೆಸುವುದಕ್ಕೆ ಸೂಕ್ತ ಕ್ರಮ ಅಗತ್ಯ. ಯಾವ ರೀತಿಯಲ್ಲಿ ಜನಗಳಿಗೆ ಆಹಾರವನ್ನು ಸರಬರಾಜು ಮಾಡಲು ಸರ್ಕಾರ ಸೂಕ್ತ ಕ್ರಮಗಳನ್ನು ತೆಗೆದುಕೊಳ್ಳುತ್ತದೋ ಅದೇ ರೀತಿಯಲ್ಲಿ ದನಗಳಿಗೂ ಆಹಾರವನ್ನು ಒದಗಿಸಲು ತಕ್ಕ ಕ್ರಮಗಳನ್ನು ಕೂಡಲೇ ತೆಗೆದುಕೊಳ್ಳಬೇಕು. ಪರಿಪುಷ್ಟವಾದ ಆಹಾರವನ್ನು ಬೆಳೆಯುವುದಕ್ಕೆ ಸರ್ಕಾರ ಗಮನ ಕೊಡಬೇಕಾಗಿದೆ. ಪ್ರತಿಯೊಂದು ಜಿಲ್ಲೆಯಲ್ಲಿಯೂ ತಾಲ್ಲೂಕುಗಳಲ್ಲಿಯೂ ಹಾಗೂ ಹಳ್ಳಿಗಳಲ್ಲಿಯೂ ಆಹಾರ ಧಾನ್ಯಗಳ ವಿತರಣೆಯ ಕಾರ್ಯದಲ್ಲಿ ಸ್ವಲ್ಪ ಮಟ್ಟಿಗೆ ಲೋಪದೋಷಗಳು ಕಂಡು ಬರುತ್ತಿವೆ. ಅದನ್ನು ಸರಿ ಮಾಡಬೇಕು. ಬರಗಾಲ ಪರಿಸ್ಥಿತಿ ಉಂಟಾದಾಗ ಗ್ರಾಮಗಳಲ್ಲಿರತಕ್ಕ ಜನರಿಗೆ ಕೂಲಿ ಕೆಲಸವಾದರೂ ಸಿಗುವ ವ್ಯವಸ್ಥೆ ಮಾಡಬೇಕು. ಆಗ ಜನರಿಗೆ ಜೀವನಕ್ಕೆ ಒಂದು ದಾರಿ ಮಾಡಿಕೊಟ್ಟಂತಾಗುತ್ತದೆ. ಅಧಿಕಾರಿಗಳಿಗೆ ಹೆಚ್ಚಿಗೆ ಅಧಿಕಾರವನ್ನು ಕೊಟ್ಟು ಅವರ ಮೂಲಕ ಉತ್ತಮವಾಗಿ ಆಹಾರ ಹಂಚಿಕೆಯ ಕೆಲಸವನ್ನು ಮಾಡಬೇಕು. ಕೇವಲ 3-4-5 ಮೈಲುಗಳೊಳಗೆ ಕೂಲಿ ಕೆಲಸ ಸಿಗುವಂತೆ ಮಾಡಬೇಕು. ಇಲ್ಲದಿದ್ದರೆ ಅವರಿಗೆ ಬಹಳ ಕಷ್ಟವಾಗುತ್ತದೆ. ಆದ್ದರಿಂದ ಈ ಸದನದ ಸದಸ್ಯರೆಲ್ಲರೂ ಸರ್ಕಾರಕ್ಕೆ ಬೆಂಬಲವನ್ನು ಕೊಟ್ಟು ನಾನು ರೀತಿಯಲ್ಲಿ ಧನ ಸಹಾಯ ಮಾಡಲು ಸಂಘ ಸಂಸ್ಥೆಗಳ ಮೂಲಕ ಕೆಲಸ ಮಾಡಲು ಮುಂದೆ ಬರಬೇಕು. ಕೇಂದ್ರ ಸರ್ಕಾರದಿಂದಲೂ ರಾಜ್ಯ ಸರ್ಕಾರ ಇದಕ್ಕಾಗಿ ಹೆಚ್ಚಿನ ನೆರವನ್ನು ಪಡೆಯಬೇಕು. ಸುದೈವದಿಂದ ಇತ್ತೀಚಿಗೆ ಎಲ್ಲಾ ಸದಸ್ಯರೂ ಕೂಡ ತಂತಮ್ಮ ಶಕ್ತಿಮೀರಿ ಸಹಾಯ ಮಾಡಲು ಹತ್ತಿದ್ದಾರೆ.

ರಾಜ್ಯದಲ್ಲಿ ತಮ್ಮ ದಂಡನ್ನು ಕಳುಹಿಸಿದ್ದಾರೆ. ಎರಡನೆಯದಾಗಿ ಇನ್ನೂ ಈ ರೀತಿ ಕಳುಹಿಸುವ ಪ್ರಯತ್ನವನ್ನೂ ಸಹ ಮಾಡುತ್ತಿದ್ದಾರೆ. ಇಡೀ ದೇಶದಲ್ಲೆಲ್ಲಾ ಕೇರಳ ಸರ್ಕಾರಕ್ಕೆ ಅಲ್ಲಿನ ಜನತೆ ಸಂಪೂರ್ಣವಾಗಿ ಬೆಂಬಲ ಕೊಟ್ಟಂತೆ ಸರ್ಕಾರದ ಕೈ ಬಲಪಡಿಸಿ ಸರ್ಕಾರದಿಂದ ಬರಗಾಲ ನಿವಾರಣೆಗೋಸ್ಕರ ಸೂಕ್ತ ಕ್ರಮಗಳನ್ನು ತೆಗೆದುಕೊಂಡು ಈ ಕಾರ್ಯವನ್ನು ಸಫಲಗೊಳಿಸುವಂತೆ ಪ್ರಯತ್ನ ಮಾಡಬೇಕು. ಬರಗಾಲ ಪರಿಸ್ಥಿತಿಯನ್ನು ಸುಧಾರಿಸುವ ಕಾರ್ಯವನ್ನು ನಿಧಾನ ಮಾಡಬಾರದು. ಇನ್ನು ಮುಂದೆ ಎಲ್ಲಾ ಮನರಂಜನೆಯ ಕಾರ್ಯಕ್ರಮವನ್ನು ಕೈಗೊಳ್ಳುವುದನ್ನು ಬಿಟ್ಟು ಮುಂದೆಯಾದರೂ ಜನತಾ ಸೇವೆಯೇ ಜನಾರ್ಧನ ಸೇವೆಯೆಂಬುದಾಗಿ ಪ್ರಯತ್ನಿಸಿ ಇವರು ಕೀರ್ತಿಯನ್ನು ಪಡೆಯಲಿ ಎಂಬುದಾಗಿ ಹಾರೈಸಿ ಮಾನ್ಯ ಅಧ್ಯಕ್ಷರು ನನಗೆ ಇಲ್ಲಿ ಮಾತನಾಡಲು ಕಾಲಾವಕಾಶವನ್ನು ಕೊಟ್ಟದ್ದಕ್ಕಾಗಿ ಅವರಿಗೆ ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

# ಬಿಜಾಪುರ ಜಿಲ್ಲೆಗೆ ಕುಡಿಯುವ ನೀರು ಸರಬರಾಜು ಬಗ್ಗೆ ಚರ್ಚೆ

ಮಾನ್ಯ ಸದಸ್ಯರಾದ ಪಾಟೀಲ್ ಅವರು ಬಿಜಾಪುರ ಜಿಲ್ಲೆಯಲ್ಲಿರುವ ನೀರಿನ ತೊಂದರೆ ಬಗ್ಗೆ ಕಳವಳವನ್ನು ವ್ಯಕ್ತಪಡಿಸಿದ್ದಾರೆ. ಕೊಯ್ನಾ ನೀರಿನ ಬಗ್ಗೆ ಈಗಾಗಲೇ ಸದನದ ಎದುರಿಗೆ ಎರಡು ಮೂರು ಸಲ ಪ್ರಸ್ತಾಪವಾಗಿದೆ. ಇದಕ್ಕೆ ಸಂಬಂಧಪಟ್ಟ ಸಚಿವರು ಎಲ್ಲ ಸದಸ್ಯರಿಗೆ ಸಮಾಧಾನವಾಗುವ ರೀತಿಯಲ್ಲಿ ಹೇಳಿದ್ದಾರೆ. ಮಾನವೀಯತೆಯ ದೃಷ್ಟಿಯಿಂದ ಕುಡಿಯಲು ನೀರು ಬೇಕು ಎನ್ನುವ ಕಾರಣದಿಂದ ಮೈಸೂರು ಸರ್ಕಾರ ಮಹಾರಾಷ್ಟ್ರ ಸರ್ಕಾರದೊಂದಿಗೆ ಒಪ್ಪಂದ ಮಾಡಿಕೊಂಡಿದ್ದು, ಮಹಾರಾಷ್ಟ್ರ ಸರ್ಕಾರ ನೀರನ್ನು ಬಿಟ್ಟಿದೆ ಎಂದು ಅಧಿಕೃತವಾಗಿ ವರ್ತಮಾನ ಬಂದಿದೆ. 26ನೇ ತಾರೀಖಿನ ಒಳಗಾಗಿ ನೀರು ಬರುತ್ತದೆ ಎನ್ನುವ ನಿರೀಕ್ಷೆ ನಮಗೆ ಇತ್ತು. ಬಹುಶಃ ಸ್ವಲ್ಪ ಭೂಮಿ ಕಾಯ್ದಿರುವುದರಿಂದ ತಡವಾಗಿರಬಹುದು. ಏಕೆ ತಡವಾಗಿದೆ. ಎಲ್ಲಿ ತಡವಾಗಿದೆ ಎನ್ನುವುದರ ಬಗ್ಗೆ ಸಾಯಂಕಾಲದೊಳಗೆ ಪರಿಶೀಲನೆ ಮಾಡಿ ಏನೇನು ತ್ವರಿತವಾದ ಕ್ರಮಗಳನ್ನು ತೆಗೆದುಕೊಳ್ಳಲಿಕ್ಕೆ ಸಾಧ್ಯವಾಗುತ್ತದೆಯೋ ಆ ಕ್ರಮಗಳನ್ನು ತೆಗೆದುಕೊಳ್ಳುತ್ತೇವೆನ್ನುವ ಮಾತನ್ನು ಹೇಳುತ್ತೇನೆ.

ಒಂದು ವೇಳೆ ನೀರು ಬರುವುದು ತಡವಾದರೆ ಭಯಾನಕವಾದ ನೀರಿನ ಅಭಾವ ಉಂಟಾಗುತ್ತದೆ ಎಂದು ಹೇಳಿದ್ದಾರೆ. ನೀರಿನ ಅಭಾವ ಬಿಜಾಪುರದಲ್ಲಿ ಆಗುತ್ತದೆ ಎನ್ನುವ ಅರಿವು ಸರ್ಕಾರಕ್ಕೆ ಇದೆ. ಈಗಾಗಲೇ ಅಲ್ಲಿ ಟ್ರಕ್‌ಗಳ ಮೂಲಕ ನೀರನ್ನು ಅನೇಕ ಕಡೆಗಳಲ್ಲಿ ಒದಗಿಸಲಾಗುತ್ತಿದೆ. ಟ್ರಕ್‌ಗಳು ಸಾಲದೆ ಬಂದರೆ ಚಕ್ಕಡಿಗಳಲ್ಲಿ ನೀರನ್ನು ಎಲ್ಲಿಗೆ ಬೇಕೋ ಅಲ್ಲಿಗೆ ತಂದುಕೊಡಬೇಕೆಂದು ಹೇಳಿದ್ದೇವೆ.

ಆದುದರಿಂದ ಇದು ಬಹಳ ಪ್ರಮುಖವಾದ ಸರಕಾರದ ಕರ್ತವ್ಯ ಎಂದು ಹೆಚ್ಚು ಜನತೆಗೆ ಸಮಾಧಾನವಾಗುವಂತೆ ನಾವು ಮಾಡಬೇಕಾಗಿದೆ. ಇದಕ್ಕಾಗಿ ನಾವು ದೇವರನ್ನು ಪ್ರಾರ್ಥನೆ ಮಾಡಿ ಮಳೆ ಬರಲಿ ಎಂದು ಆಶಿಸಿ ಪರಮಾಮತ್ಮನು ಇಂತಹ ಕಷ್ಟ ಕಾಲದಲ್ಲಿ ಕೈ ಬಿಡುವುದಿಲ್ಲ ಎನ್ನುವ ನಂಬಿಕೆಯ ಮೇಲೆ ನಾವು ಇದನ್ನು ಮಾನವೀಯತೆಯ ದೃಷ್ಟಿಯಿಂದ ನೋಡಬೇಕಾಗಿದೆ. ಆದರೆ ಮಾನ್ಯ ಸದಸ್ಯರು ಹೇಳಿದಂತೆ ಈ ಭಾಗದ ಜನತೆಗೆ ನೀರು ಸಿಗುತ್ತಿಲ್ಲ ಎಂದು ಹೇಳಿದರು. ನೀವೇ ನಮ್ಮ ಸ್ಥಾನದಲ್ಲಿದ್ದರೆ ಎಷ್ಟು ಕಾರ್ಯ ಮಾಡುತ್ತಿದ್ದಿರೋ ಅದಕ್ಕಿಂತ ಹೆಚ್ಚಿನ ಕಾರ್ಯ ಮಾಡಲು ಸರಕಾರ ಪ್ರಯತ್ನ ಮಾಡುತ್ತಿದೆ ಮತ್ತು ತ್ವರಿತವಾಗಿ ಸರಕಾರ ಇದರ ಬಗ್ಗೆ ಏನೇನು ಕಾರ್ಯ ಕ್ರಮಗಳನ್ನು ತೆಗೆದುಕೊಳ್ಳಬೇಕೋ ಅದರ ಬಗ್ಗೆ ಸಂಬಂಧ ಪಟ್ಟ ಜಿಲ್ಲಾಧಿಕಾರಿಗಳಿಗೆ ಸೂಚನೆ ಕೊಟ್ಟು ಮಾಡಿಸುತ್ತೇನೆ ಎಂದು ಇಷ್ಟು ಭರವಸೆ ಕೊಡುತ್ತೇನೆ.

23.04.1973 ರಿಂದಲೇ ನೀರು ಕೊಡಬೇಕೆಂದು ವ್ಯವಸ್ಥೆ ಮಾಡಿ ನೀರು ಬಿಟ್ಟಿದ್ದಾರೆ. ನೀರು ಬರುವುದರಲ್ಲಿ ಒಂದೆರಡು ದಿನಗಳು ತಡವಾಗಿರಬಹುದು. ನೀರು ಬರಲಿಲ್ಲ ಎಂದು ಇಲ್ಲಿ ಸೆಕ್ಷನ್ 144 ಹಾಕಲಿಕ್ಕೆ ಬರುವುದಿಲ್ಲ. ನಾನಾಗಲೇ ಹೇಳಿದೆ. ಈ ಸಮಸ್ಯೆಯನ್ನು ಮಾನವೀಯತೆಯ ದೃಷ್ಟಿಯಿಂದ ನೋಡಬೇಕಾಗಿದೆ. ಸರಕಾರವೂ ಶಕ್ತಿ ಮೀರಿ ಪ್ರಯತ್ನ ಮಾಡುತ್ತಿದೆ. ಇದಕ್ಕೆ ಮಾನ್ಯ ಸದಸ್ಯರ ಸಹಕಾರ ಸಂಪೂರ್ಣವಾಗಿ ನಮಗೆ ಬೇಕು ನೀರನ್ನು

---

ವಿಸನದಿ: [illegible]-4-1973

ಮಹಾರಾಷ್ಟ್ರದ ಹಳ್ಳಿಗಳವರೇ ಉಪಯೋಗಿಸುತ್ತಾರೆ. ಇಲ್ಲವೇ ಬೇರೆ ಕಡೆಯಿಂದ ಅವರು ತಂದು ಉಪಯೋಗಿಸುತ್ತಾರೆ ಎಂದು ಇಲ್ಲಿ ಈ ರೀತಿಯಾಗಿ ಹೇಳಿದರೆ ಹಾಗೂ ಮಹಾರಾಷ್ಟ್ರದ ಬಗ್ಗೆ ಬೊಬ್ಬಾಟ ಮಾಡಿದರೆ ಸರಿಯಾಗುವುದಿಲ್ಲ. ಇದರ ಬದಲು ಸುಮ್ಮನೆ ಇದ್ದರೆ ಒಳಿತು. ಮಾನ್ಯ ಸದಸ್ಯರು ಹೇಳುವಂತೆ ನಾವು ಹೋಗಿ ಮಹಾರಾಷ್ಟ್ರದ ಹಳ್ಳಿಗಳಿಗೆ ಸೆಕ್ಷನ್ 144 ಹಾಕಿ ನೀರು ಕೊಡಬಾರದು ಎಂದು ಹೇಳಲಾಗುವುದಿಲ್ಲ. ಆದಷ್ಟು ಸರಕಾರ ಸಾಕಷ್ಟು ಮುಂಜಾಗರೂಕತೆ ವಹಿಸಿ ಬಿಜಾಪುರ ಜಿಲ್ಲೆಗೆ ಕೊಯ್ನಾ ನೀರನ್ನು ಬಹಳ ಬೇಗನೆ ಒದಗಿಸಲು ತ್ವರಿತವಾಗಿ ಪ್ರಯತ್ನ ಮಾಡುತ್ತೇವೆ ಮತ್ತು ತೀವ್ರವಾಗಿ ಕ್ರಮ ತೆಗೆದುಕೊಳ್ಳುತ್ತೇವೆ. ಇಷ್ಟರಿಂದ ಮಾನ್ಯ ಸದಸ್ಯರು ಸಮಾಧಾನ ಪಟ್ಟುಕೊಳ್ಳಬೇಕು. ಇದರಲ್ಲಿ ದೇವರ ಬಗ್ಗೆ ಏಕೆ ಹೇಳಿದರು ಎಂದು. ಯಾವಾಗಲೂ ಸತ್ಯದಿಂದ ಕೆಲಸ ಮಾಡುವಾಗ ಅದರ ಭಾರವನ್ನು ದೇವರ ಮೇಲೆ ಹಾಕಿದರೆ ಇದರಿಂದ ಏನೂ ತಪ್ಪಾಗುವುದಿಲ್ಲ. ನಮಗೆ ಇನ್ನೂ ಸಹಾಯವಾಗುತ್ತದೆ. ಈ ದೃಷ್ಟಿಯಿಂದ ಹೇಳಿದೆ. ಸರಕಾರ, ಮಾಡುವ ಕೆಲಸಗಳನ್ನು ತೀವ್ರವಾಗಿ ಮಾಡುತ್ತದೆ ಮತ್ತು ಮಾನ್ಯ ಸದಸ್ಯರ ಕಾಳಜಿಯೂ ಸರಕಾರಕ್ಕೆ ಅರ್ಥವಾಗಿದೆ. ತ್ವರಿತವಾದ ರೀತಿಯಲ್ಲಿ ಇಲ್ಲಿನ ಜನಕ್ಕೆ ನೀರಿನ ಲಾಭ ಸಿಗುವಂತೆ ತಕ್ಕ ವ್ಯವಸ್ಥೆ ಮಾಡುತ್ತೇವೆ ಎಂದು ಭರವಸೆ ಕೊಡುತ್ತೇನೆ.

# ಮೈಸೂರು ರಾಜ್ಯ ಕೃಷಿ ವಿಶ್ವವಿದ್ಯಾಲಯ ವಿಧೇಯಕ 1973ರ ಮೇಲಿನ ಚರ್ಚೆ

ಸ್ವಾಮಿ, ನಾನು ದೈನ್ಯದಿಂದ ಹೇಳುವುದು ಏನೆಂದರೆ ಮೈಸೂರು ಸ್ಟೇಟ್ ಎಗ್ರಿಕಲ್ಚರಲ್ ಯೂನಿವರ್ಸಿಟೀಸ್ ಬಿಲ್ಲು 1973ನ್ನು ಅವಗಾಹನೆಗೆ ತೆಗೆದುಕೊಳ್ಳಬೇಕು ಎಂದು.

ಮಾನ್ಯ ಸಭಾಪತಿಗಳೆ, ಇಂದು ಮೈಸೂರು ರಾಜ್ಯದ ಅಗ್ರಿಕಲ್ಚರಲ್ ಯುನಿವರ್ಸಿಟಿ ಬಿಲ್ಲನ್ನು ಈ ಸದನದಲ್ಲಿ ಮಂಡಿಸುವುದಕ್ಕೆ ಸಂತೋಷ ಮತ್ತು ಅಭಿಮಾನಪಡುತ್ತೇನೆ. ಕೆಲವು ದಿವಸಗಳ ಹಿಂದೆ ಬಿಲ್ಲನ್ನು ಸರಿಯಾದ ರೀತಿಯಲ್ಲಿ ಓದಲಾರದೆ ಅಥವಾ ಸರ್ಕಾರದ ಅಭಿಪ್ರಾಯವೇನೆಂಬುದನ್ನು ತಿಳಿಯದೆ ಕೆಲವು ಸದಸ್ಯರು ಈ ಬಿಲ್ಲನ್ನು ಪ್ರತಿಭಟಿಸಿದರು. ಅದಲ್ಲದೆ ಅನೇಕ ರೀತಿಯ ಕಟ್ಟು ಕತೆಗಳನ್ನು ಕಟ್ಟಿ ಈ ಬಿಲ್ಲಿನ ಬಗ್ಗೆ ನನ್ನ ಮೇಲೆ ಉಗ್ರವಾದ ಟೀಕೆಗಳನ್ನು ಈ ಮನೆಯ ಹೊರಗೂ ಮತ್ತು ಒಳಗೂ ಮಾಡಲಾಯಿತು. ನಾನು ಮಾನ್ಯ ಸದಸ್ಯರುಗಳಿಗೆ ನಿಜವಾದ ರೀತಿಯಲ್ಲಿ ಇವುಗಳನ್ನು ಮುದ್ರಿಸಿ ಕೊಟ್ಟಿದ್ದರೆ ಈ ಪ್ರಮಾದ ಆಗುತ್ತಾ ಇರಲಿಲ್ಲವೆಂದು ಕಾಣುತ್ತದೆ. ನಮ್ಮ ಶಾಸನವನ್ನು ಇಂಗ್ಲೀಷ್ ಭಾಷೆಯಲ್ಲಿ ಡ್ರಾಫ್ಟ್ ಮಾಡಿರುವುದರಿಂದ ಮತ್ತು ಅದನ್ನು ತರ್ಜುಮೆಗೊಳಿಸುವುದಕ್ಕೆ ಬೇಕಾದಂತಹ ಪರಿಣತರ ಅಭಾವವಿರುವುದರಿಂದ ಕೆಲವು ದಿವಸ ತೊಂದರೆಯಾಗುತ್ತದೆ.

ಈಗ ಇದ್ದಂತಹ ಆಕ್ಟ್ ಏನಿದೆ. ಅದರಲ್ಲಿ ಆಗಿರುವಂತಹ ಬದಲಾವಣೆಗಳನ್ನು ಮತ್ತು ಅದರಲ್ಲಿ ಆಗುವಂತಹ ಸುಧಾರಣೆಗಳು ಏನೆಂಬುದನ್ನು ನಾನು ಸ್ಪಷ್ಟವಾಗಿ ಮಾನ್ಯ ಸದಸ್ಯರ ಗಮನಕ್ಕೆ ತಂದಿದ್ದರೆ, ನನ್ನ ಮೇಲೆ ಯಾವ ದೋಷಾರೋಪಣೆಗಳನ್ನು ಮಾಡುತ್ತ ಇರಲಿಲ್ಲ ಎಂದು ತಿಳಿಯುತ್ತೇನೆ. ಕೆಲವು ಪತ್ರಿಕಾಕರ್ತರು ನನ್ನ ಹತ್ತಿರ ಬಂದು ಕೆಲವು ಪ್ರಶ್ನೆಗಳನ್ನು ಕೇಳಿದರು. ಅದಕ್ಕೆ ನಾನು ಈ ಸದನದಲ್ಲಿಯೇ ಹೇಳಬೇಕಲ್ಲದೆ, ಪತ್ರಿಕಾಕರ್ತರಿಗೆ ಹೇಳಬಾರದು ಎಂದು ಸುಮ್ಮನೆ ಕೂತಿದ್ದೆ. ಅದೇನೆಂದರೆ ಕೆ.ಎಚ್. ಪಾಟೀಲರೇ ಇದನ್ನು ಡ್ರಾಫ್ಟ್ ಮಾಡಿದ್ದಾರೆ. ಲಾ ಡಿಪಾರ್ಟ್‌ಮೆಂಟಿಗೆ ಸಹ ಇದು ಹೋಗಿಲ್ಲ ಮತ್ತು ತಜ್ಞರನ್ನು ಸಹ ಕನ್‌ಸಲ್ಟ್ ಮಾಡಿಲ್ಲವೆಂದು ಕೆಲವರು ಹೇಳಿದ್ದಾರೆ. ಕೇವಲ ಧಾರವಾಡದಲ್ಲಿ ಒಂದು ಯೂನಿವರ್ಸಿಟಿ ಮಾಡುವ ಉದ್ದೇಶದಿಂದ ಯಾರನ್ನೂ ಕನ್‌ಸಲ್ಟ್ ಮಾಡದೆ ಈ ರೀತಿ ಮಾಡಿದ್ದಾರೆಂದು ಟೀಕೆ ಮಾಡಿದ್ದಾರೆ. ಹಾಗೆ ಹೇಳುವ ಮಾನ್ಯ ಸದಸ್ಯರ ಅಭಿಪ್ರಾಯ ತಪ್ಪು ಎಂದು ಹೇಳುವುದಕ್ಕಿಂತ ಅವರು ನನ್ನನ್ನು ಸರಿಯಾಗಿ ಅರ್ಥ ಮಾಡಿಕೊಂಡಿಲ್ಲವೆಂದು ಹೇಳುತ್ತೇನೆ. ಒಕ್ಕಲುತನದ ಸಚಿವನಾಗಿ ನಾನು ನೇರವಾಗಿ ಬಿಲ್ಲನ್ನು ತಂದರೂ ಸಹ ತಪ್ಪಾಗುವುದಿಲ್ಲ. ಆದರೆ ನಾನು ಆ ರೀತಿ ಮಾಡುವುದಿಲ್ಲ. ಅಧಿಕಾರಕ್ಕೆ ಬಂದಂದಿನಿಂದ ಇಂದಿನ ತನಕ ಅಗ್ರಿಕಲ್ಚರಲ್ ಯೂನಿವರ್ಸಿಟಿಯಾದರೆ ಅದಕ್ಕೆ ಹೇರಳವಾದ ಹಣ ಖರ್ಚಾಗುತ್ತದೆ ಎಂದು ಕೆಲವರು ಹೇಳಿದ್ದಾರೆ. ಕೆಲವರು ಇಲ್ಲಿಯ ಹಣವನ್ನು ತೆಗೆದುಕೊಂಡು ಹೋಗಿ ಧಾರವಾಡಕ್ಕೆ ಸುರಿಯುತ್ತಿದ್ದಾರೆಂದು ಹೇಳಿದರು. ಧಾರವಾಡದಲ್ಲಿ ಯೂನಿವರ್ಸಿಟಿಯಾಗುವ ಪೂರ್ವದಲ್ಲಿಯೇ ಎಲ್ಲ ಸೌಕರ್ಯಗಳಿಂದ ಕೂಡಿದ ಯೂನಿವರ್ಸಿಟಿ ಪ್ರಿಮಿಸಸ್ ರೆಡಿಯಾಗಿ ನಿಂತಿದೆ. ಅಲ್ಲಿರತಕ್ಕಂತಹ ಸುತ್ತು ಮುತ್ತಲಿನ ಜಮೀನು ಮತ್ತು ವ್ಯಾಸಂಗಕ್ಕೆ

---

ವಿಸನದಿ: 21-8-1969

ಅರ್ಹವಾದ ವಾತಾವರಣ ಯೂನಿವರ್ಸಿಟಿ ಸ್ಥಾಪನೆಗೆ ಯೋಗ್ಯವಾಗಿದೆ. ಇದು ಐ.ಎ.ಆರ್. ನವರ ಒಪ್ಪಿಗೆಯನ್ನು ಸಹ ಪಡೆದಿದೆ. ಈ ಅಗ್ರಿಕಲ್ಚರಲ್ ಯೂನಿವರ್ಸಿಟಿ ರೈತನ ಸುಧಾರಣೆಗೋಸ್ಕರ ಮತ್ತು ಅವನಿಗೆ ಬೇಕಾಗುವಂತಹ ಸಲಕರಣೆ ಒದಗಿಸುವ ರಿಸರ್ಚಿಗಾಗಿ ಹೆಚ್ಚಿನ ಕೆಲಸವನ್ನು ಮಾಡಬೇಕಾಗಿದೆ. ನಾವು ಭಾರತಾದ್ಯಂತ ನೋಡಿದಾಗ ಮತ್ತು ಮಹಾರಾಷ್ಟ್ರವನ್ನು ತುಲನೆ ಮಾಡಿ ನೋಡಿದಾಗ ನಾವು ಅಷ್ಟು ಪ್ರಗತಿಯನ್ನು ಸಾಧನೆ ಮಾಡಿಲ್ಲ. ಇವೊತ್ತಿನ ದಿವಸ ರೈತರಿಗೆ ಬೇಕಾಗುವ ಬೇರೆ ಕಡೆಗಳಲ್ಲಿ 4-5 ಅಗ್ರಿಕಲ್ಚರಲ್ ಯೂನಿವರ್ಸಿಟಿಗಳನ್ನು ಮಾಡಿರುವಾಗ ನಮ್ಮಲ್ಲಿ ಒಂದು ಯೂನಿವರ್ಸಿಟಿ ಸಹ ಹೆಚ್ಚು ಆಗುತ್ತಾ ಇಲ್ಲ. ಹಾಗಿದ್ದರೆ ಒಂದು ಯೂನಿವರ್ಸಿಟಿ ಇದ್ದರೆ ಸಾಲದೇ ಎಂದು ಕೆಲವರು ಪ್ರಶ್ನೆ ಮಾಡಬಹುದು. ಆದರೆ ಒಂದು ಯೂನಿವರ್ಸಿಟಿ ಮಾಡಿದರೆ ಅದರಲ್ಲಿ ರಿಸರ್ಚ್ ಇರಬೇಕಾಗುತ್ತದೆ ಮತ್ತು ಕೆಲವು ಹೆಡ್ಸ್ ಆಫ್ ಡಿಪಾರ್ಟ್‌ಮೆಂಟ್ಸ್ ಇರಬೇಕಾಗುತ್ತದೆ. ಅವರು ನಿಮಿಷ ನಿಮಿಷಕ್ಕೂ ಸಲಹೆಯನ್ನು ಕೊಡಬೇಕಾಗುತ್ತದೆ. ಬೆಂಗಳೂರು ಅಗ್ರಿಕಲ್ಚರಲ್ ವಿಶ್ವವಿದ್ಯಾನಿಲಯದಲ್ಲಿ ಹಾರ್ಟಿಕಲ್ಚರ್ ವಿಭಾಗವನ್ನು ಮಾಡುವುದಕ್ಕಾಗಲಿಲ್ಲ. ಮಂಗಳೂರು ಫಿಶರೀಸ್ ಕಾಲೇಜು ಭವ್ಯವಾಗಿ ಬೆಳೆದು ಬರಬೇಕೆಂದು ನಾವು ಪ್ರಯತ್ನ ಮಾಡುತ್ತಿದ್ದೇವೆ. ಅದೇ ರೀತಿಯಲ್ಲಿ ರಾಯಚೂರಿನಲ್ಲಿರುವ ಪಾಲಿಟೆಕ್ನಿಕ್ಕನ್ನು ಇಂಜಿನಿಯರಿಂಗ್ ಕಾಲೇಜಾಗಿ ಮಾಡಬೇಕೆಂದು ಪ್ರಯತ್ನ ನಡೆದಿದೆ. ಹಾಗೆಯೇ ಫಾರೆಸ್ಟ್ರೀ ಕಾಲೇಜು ಮತ್ತು ಹೋಂ ಸಯನ್ಸ್ ಕಾಲೇಜು ಮಾಡಬೇಕೆಂದು ಇದೆ. ಇವೆಲ್ಲಕ್ಕೂ ಅಗ್ರಿಕಲ್ಚರಲ್ ಯೂನಿವರ್ಸಿಟಿಯ ಬೆಳವಣಿಗೆಗೆ ಲಕ್ಷ್ಯ ಕೊಡದಿದ್ದರೆ ಸಾಧ್ಯವಾಗುವುದಿಲ್ಲ. ಅಗ್ರಿಕಲ್ಚರಲ್ ಯೂನಿವರ್ಸಿಟಿ ರಿಸರ್ಚಿಗೆ ಬೇಕಾಗುವ ಸಂಪೂರ್ಣ ಹಣ ಐ.ಸಿ.ಎ.ಆರ್. ನವರು ಕೊಡುತ್ತಾರೆ. ನಾವು ಅದಕ್ಕೆ ಬೇಕಾದಂತಹ ಸ್ಕೀಮನ್ನು ಕಳುಹಿಸುತ್ತಾ ಇಲ್ಲವೆಂದು ಹೇಳುತ್ತಿದ್ದಾರೆ. ಇಷ್ಟು ದಿವಸ ನಮ್ಮ ಮೈಸೂರು ರಾಜ್ಯ ಎಲ್ಲದರಲ್ಲಿಯೂ ಪ್ರಗತಿ ಪಡೆದಿದ್ದರೂ ಇವತ್ತು ಕಾಟನ್ ರಿಸರ್ಚ್ ಲ್ಯಾಬೋರೇಟರಿ ನಮ್ಮಲ್ಲಿ ಇಲ್ಲ. ಹತ್ತಿಯ ಯೋಗ್ಯತೆಯನ್ನು ನೋಡಿ ಅದರ ಸ್ಟ್ರೆಂತ್, ಲೆಂತ್ ಲ್ಯಾಬೋರೇಟರಿಗೆ ಕಳುಹಿಸಬೇಕಾಗುತ್ತದೆ. ಮುಟ್ಟುಂಗ್ ಲ್ಯಾಬೋರೇಟರಿಯಲ್ಲಿ ನಮ್ಮ ಹತ್ತಿ ಬಹಳ ಉತ್ತಮವಾದುದು ಎಂದು ಹೇಳುತ್ತಿದ್ದಾರೆ. ಆದ್ದರಿಂದ ಇವತ್ತು ಯೂನಿವರ್ಸಿಟಿಯ ಅವಶ್ಯಕತೆ ಬಹಳ ಇದೆ. ಪ್ರತಿಯೊಬ್ಬ ರೈತನ ಮನೆ ಮನೆಗೂ ಮುಟ್ಟುವಂತಹ ರೀತಿಯಲ್ಲಿ ಈ ಕೇಂದ್ರಗಳು ಕೆಲಸ ಮಾಡಬೇಕಾಗಿದೆ. ಇವತ್ತು ಗುಲ್ಬರ್ಗಕ್ಕೆ ಬೇಕಾದಂತ ಬೇಳೆ ಕಾಳು ಬೆಳೆಯಬೇಕಾದರೆ ಅದಕ್ಕೆ ಬೇಕಾಗುವಂತಹ ರಿಸರ್ಚ್ ಮಾಡಬೇಕಾಗುತ್ತದೆ. ಅದರ ಬಗ್ಗೆ ಯೂನಿವರ್ಸಿಟಿಯವರು ಕಣ್ಣು ತೆರೆಯುತ್ತಾ ಇಲ್ಲ. ಇಲ್ಲಿ ಹಾರ್ಟಿಕಲ್ಚರ್ ಬಗ್ಗೆ ಇನ್ನೂ ಸುಧಾರಣೆಯಾಗಬೇಕಾಗಿದೆ. ಶ್ರೀಮಾನ್ ಮರಿಗೌಡರ ಶ್ರಮದಿಂದ ಹೆಚ್ಚು ಕೆಲಸ ನಡೆದಿದ್ದರೂ ಸಮೃದ್ಧಿಯಾಗಿ ರೈತರಿಗೆ ಲಾಭದಾಯಕವಾಗುವಂತಹ ಬದಲಾವಣೆ ಮಾಡಿ ವಸ್ತುಗಳನ್ನು ಯಾವ ರೀತಿಯಲ್ಲಿ ರೂಪಾಂತರಿಸಿಕೊಳ್ಳಬೇಕೆಂಬುದರ ಬಗ್ಗೆ ನಾವು ಹೆಚ್ಚು ಗಮನ ಹರಿಸಿಲ್ಲ ಈಗ ಯೂನಿವರ್ಸಿಟಿ ಎಕ್ಸ್‌ಟೆನ್‌ಷನ್ ವಿಭಾಗದವರು ಒಳ್ಳೆಯ ಕಾರ್ಯಗಳನ್ನು ಸ್ಥಾಪನೆ ಮಾಡಬೇಕೆಂಬ ನಿಶ್ಚಯವನ್ನು ನಾನು ಮಾಡಿದೆ ನನ್ನ ಸಹೋದ್ಯೋಗಿಗಳು ಕ್ಯಾಬಿನೆಟ್‌ನಲ್ಲಿ ಬಹಳ ವರ್ಷಗಳಿಂದ ಈ ವಿಚಾರವನ್ನು ತೆಗೆದುಕೊಂಡರೂ ಇದುವರೆಗೆ ತೀರ್ಮಾನವಾಗದೆ ಇತ್ತು. ಆದರೂ ನಾನು ಸುಮ್ಮನೆ ಕುಳಿತುಕೊಳ್ಳಲಿಲ್ಲ. ನಾವು ಇಂತಹ ಆಕ್ಟನ್ನು ತರಬೇಕಾದರೆ ಇದನ್ನು ನಾವು ಮೊದಲು ಪರೀಕ್ಷೆ ಮಾಡೋಣವೆಂದು ಹೇಳಿ ಒಂದು ತಜ್ಞರ ಸಮಿತಿಗೆ ಕೊಟ್ಟು ಆ ತಜ್ಞರ ಸಮಿತಿಯವರು

ವರದಿಯನ್ನು ಕೊಟ್ಟರು. ಆ ವರದಿಯನ್ನು ನೋಡಿದ ಮೇಲೆ, ಯೂನಿವರ್ಸಿಟಿ ತಜ್ಞರು ನಮ್ಮ ತಜ್ಞರು ಪರದೇಶದ ಎಲ್ಲಾ ಯೂನಿವರ್ಸಿಟಿಗಳ ಆಕ್ಟನ್ನು ಪರಾಂಬರಿಸಿ ಕೊನೆಗೆ ಒಂದು ನಿರ್ಣಯಕ್ಕೆ ಬಂದಿದ್ದಾರೆ. ಅದರಲ್ಲಿ ಅನೇಕ ಲೋಪದೋಷಗಳಿವೆ. ಆದರೆ ಲೋಪದೋಷಗಳು ಇದರಲ್ಲಿ ಏನೂ ಇಲ್ಲವೆಂದು ನಾನು ಹೇಳುವುದಿಲ್ಲ ಕೆಲವು ಕಡೆಗಳಲ್ಲಿ ಅಸಮರ್ಪಕವಾದ ರೀತಿಯಲ್ಲಿ ಡ್ರಾಫ್ಟ್ ಕಾಣುತ್ತಾ ಇರಬಹುದು. ಇವೆಲ್ಲ ವಿಚಾರಣೆಯಾದ ಮೇಲೆ ಇದಕ್ಕೆ ಒಂದು ಹೆಸರನ್ನು ಇಡುವುದು ಸೂಕ್ತವೆಂದಾಗ ಒಬ್ಬ ಮಾನ್ಯ ಸದಸ್ಯರು ಕೆ.ಎಚ್. ಪಾಟೀಲ್ ಅವರ ಕಾಯಿದೆಯೆಂದು ಇಡೋಣವೆಂದರು. ಅದರಲ್ಲಿ ನನ್ನ ಪರಿಶ್ರಮ ಇವತ್ತು ಇರಬಹುದು. ನಾಳೆ ಇರಲಿಕ್ಕಿಲ್ಲ. ಈಗ ನಾವು ಈ ದೇಶದ, ರಾಜ್ಯದ, ರಾಷ್ಟ್ರದ ರಾಜಕೀಯಕ್ಕೋಸ್ಕರ ಇರುತ್ತೇವಷ್ಟೆ. ವ್ಯವಸಾಯಾಭಿವೃದ್ಧಿಯನ್ನು ರಾಜಕೀಯಕ್ಕಾಗಿ ಮಾಡುವುದಿಲ್ಲವೆಂಬ ಮಾತನ್ನು ಹೇಳುತ್ತಿದ್ದೇನೆ. ಯಾವ ಸರಕಾರವೇ ಆಗಲೀ, ಆ ಕಡೆಯವರು ಆಗಲೀ, ಈ ಕಡೆಯವರೇ ಆಗಲೀ ಮೂರನೆಯವರು ಯಾರೇ ಆಗಲೀ ಅವರಿಗೆ ನಾನು ಪ್ರಾರ್ಥನೆ ಮಾಡುವುದಿಷ್ಟೇ. ನಾನು ಈಗಾಗಲೇ ಈ ಕಾಯಿದೆಯ ಬಗ್ಗೆ ಮೊದಲಿದ್ದ ಕಾಯಿದೆ ಮತ್ತು ಅನಂತರ ಈ ಬಿಲ್ಲಿಗೆ ಬಂದಂಥ ತಿದ್ದುಪಡಿಗಳನ್ನು ಸೇರಿಸಿ ಒಂದು ಪುಸ್ತಕದ ರೂಪದಲ್ಲಿ ಎಲ್ಲ ಸದಸ್ಯರ ಕೈಗೆ ಕೊಟ್ಟಿದ್ದೇನೆ. ನಾಳೆಯ ದಿವಸ ಇದರ ಅವಶ್ಯಕತೆಯ ಬಗೆಗೆ ಒಂದು ಪುಸ್ತಕವನ್ನು ಹಂಚುತ್ತೇನೆ. ಇದರಲ್ಲಿ ಪ್ರಾಮುಖ್ಯವಾದ 10-11 ಸೆಕ್ಷನ್‌ಗಳಲ್ಲಿ ಅಲ್ಪಸ್ವಲ್ಪ ಬದಲಾವಣೆಗಳು ಆಗುತ್ತದೆ. ಉಳಿದುದು ಹಾಗೆಯೇ ಇರುತ್ತವೆ. ಅಂತಹ ಎರಡು ಮೂರು ಬದಲಾವಣೆಗಳಿಂದ ನಿಜವಾಗಿ ಇದು ಒಳ್ಳೆಯ ಪ್ರೋಗ್ರೆಸಿವ್ ಬಿಲ್ ಆಗುತ್ತದೆಂದು ಆಗ್ರಿಕಲ್‌ಚರಲ್ ಯೂನಿವರ್ಸಿಟಿ ಚಾನ್ಸಲರ್ ಅವರು ಹೇಳಿದ್ದಾರೆ. ಇದು ರೈತರ ದೃಷ್ಟಿಯಿಂದ ಬಹಳ ಅತ್ಯುತ್ತಮವಾದುದೆಂದು ಹೋದ ವರ್ಷ...
ಯೂನಿವರ್ಸಿಟಿಯಲ್ಲಿ ಮಾಡಿದನ್ನು ಮಾನ್ಯ ಸದಸ್ಯರಲ್ಲಿ ಅನೇ...
ಸಾಕ್ಷಿಭೂತವಾಗಿ ನೋಡಿದ್ದಾರೆ. ನಮಗೆ ಆಗ್ರಿಕಲ...
ಸಿಗುವುದಿಲ್ಲವೆಂದು ಹೇಳಿದಂಥ ಮಾತು ನೆನಪಿನ...
ಪ್ರಯತ್ನ ಮಾಡಿದರೂ ಸಹ ಆಗ್ರಿಕಲ್‌ಚರಲ್...
ರೈತರಿಗೇ ಆಗಲೀ, ಇತರರಿಗೆ ಆಗಲೀ ರ...
ಆಗಲೂ ಸ್ವಯಂ ಪ್ರಯತ್ನ ಮಾಡಿ ನೂರಾರು...
ಮಾಡಿದಂಥ ಸುಮಾರು 20-30 ಜನಗ...
ಸಾಧ್ಯವಾಯಿತು. ಈಗ ಈ ಕಾ...
ಯೋಗ್ಯವಾದಂಥ ನಿರ್ದಿಷ್ಟವಾದ ರೂ...
ಹಿಂದುಳಿದ ವರ್ಗದವರಿಗೆ ಮತ್ತು...
ಮಾಡಿರುವ ಹಾಗೆ ಈಗಾಗಲೇ...
ಕೊಟ್ಟು ಅವರಿಗೆ ಬೇಕಾದಂಥ...
ಸಫರರ್ಸ್‌ಗೆ ಕೆಲವು ಸ್ಥಾನಗ...
ಮೊದಲಿನಿಂದಲೂ ಇದ...
ಅಸೋಸಿಯೇಷನ್ನಿನವ...

ಟೀಕೆ ಮಾಡಿದರು. ಈ ವಿಚಾರದಲ್ಲಿ ನಾನು ಒಂದು ಕಮಿಟಿಯನ್ನು ಕರೆದು ಇದರ ಬಗ್ಗೆ ವಿಚಾರಮಾಡಿದ ಮೇಲೆ ಇವತ್ತು ಒಂದು ಈ ಕಾಯಿದೆ ಬಹಳ ಚೆನ್ನಾಗಿದೆಯೆಂದು ಹೇಳಿ ಕೇವಲ 4 ಸೆಕ್ಷನ್‌ಗಳಲ್ಲಿ ಮಾತ್ರ ಅಲ್ಪ ಸ್ವಲ್ಪ ಬದಲಾವಣೆಗಳನ್ನು ಸೂಚಿಸಿದ್ದಾರೆ. ಅದನ್ನೂ ಸಹ ಸರ್ಕಾರ ಒಪ್ಪುವುದಕ್ಕೆ ಯಾವುದೇ ರೀತಿಯಲ್ಲಿ ಏನೂ ಅಭ್ಯಂತರವಿಲ್ಲವೆಂದು ನಾನು ಹೇಳುವುದಕ್ಕೆ ಇಚ್ಛೆಪಡುತ್ತೇನೆ. ಒಟ್ಟಿನಲ್ಲಿ ಈ ಕಾಯಿದೆಯನ್ನು ಸೂಕ್ಷ್ಮವಾಗಿ ಪರಿಶೀಲಿಸಿ, ಪರಾಂಬರಿಸಿದರೆ, ನಿಜವಾಗಿಯೂ ಇದರಲ್ಲಿ ಯಾವುದೇ ರೀತ್ಯ ಸಂಶಯವಿಲ್ಲ ಚಾನ್ಸಲರಿಗೆ ಇರುವ ಅಧಿಕಾರವನ್ನು ಪ್ರೊಚಾನ್ಸಲರಿಗೆ 3-4 ಸೆಕ್ಷನ್‌ಗಳಲ್ಲಿ ಕೊಡಲಾಗಿದೆ. ಚಾನ್ಸಲರ್ ಒಬ್ಬರನ್ನು ಸರ್ಕಾರದಿಂದ ನೇಮಿಸುವಂಥಾದ್ದು. ಅದು ಆಗಬಹುದು. ಆದರೆ ಪ್ರೊಚಾನ್ಸಲರ್ ಎಲೆಕ್ಟೆಡ್ ಪ್ರತಿನಿಧಿಯಾಗಬಹುದು ಅದಕ್ಕೆ ಶ್ರೀ ಕೆ.ಎಚ್. ಪಾಟೀಲರೇ ಇರಬಹುದು. ಅಥವಾ ಇನ್ನು ಯಾರಾದರೂ ಇರಬಹುದು. ಅವರು ನಮ್ಮಿಂದ ಚುನಾಯಿತ ಪ್ರತಿನಿಧಿಯಾಗಿ ಅವರಿಗೆ ಇರುವ ಅಧಿಕಾರವನ್ನು ಇವರಿಗೆ ವರ್ಗಾಯಿಸಬಹುದಷ್ಟೆ. ಅದರಿಂದೇನು ಅಷ್ಟೊಂದು ಪ್ರಮಾದವಾಯಿತು?

ನನ್ನ ಬಗ್ಗೆ ಮಾನ್ಯ ಸದಸ್ಯರಿಗೆ ಸಾಕಷ್ಟು ಪರಿಚಯವಿರಬೇಕು. ಮಂತ್ರಿ ಪದವಿ ಹೋದರೆ ನಾನು ನನ್ನ ಇತಿಹಾಸಕ್ಕೆ ತಿಲಾಂಜಲಿಯನ್ನು ಕೊಡುವವನಲ್ಲ. ಉತ್ತಮರಾರೂ ಈ ಕಾಲದಲ್ಲಿ ರಾಜೀನಾಮೆ ಕೊಡುವುದಿಲ್ಲ. ಈ ಮಾತನ್ನು ನಾನು ಹಿಂದೆ ಎದುರು ಪಕ್ಷದಲ್ಲಿ ಕೂತುಕೊಂಡು ಟೀಕೆ ಮಾಡಿದ್ದೇನೆ. ಎದುರು ಪಕ್ಷದಲ್ಲಿದ್ದಾಗ ನಾವೇ ಟೀಕೆ ಮಾಡುವಾಗ ಇಲ್ಲದಸಲ್ಲದ ನುಡಿಗಳಲ್ಲಿ ರೀತಿನೀತಿಗಳಲ್ಲಿ ಇಂತಹ ಅನೇಕ ಕಾಯಿದೆಗಳನ್ನು ವಿರೋಧ ಮಾಡುತ್ತಿದ್ದೆವು. ರೈತರಿಗೆ ...ಕವಾದ ರೀತಿಯಲ್ಲಿ ಕಾಯಿದೆಗಳನ್ನು ತರದಿದ್ದರೆ ನಾವೇ ಹಿಂದೆ ವಿರೋಧವಾಗಿದ್ದೆವು.
...ಂದೆ ಬರಲಿಲ್ಲವೇ? ಆದ್ದರಿಂದ ಈಗ 63 ಸೆಕ್ಷನ್‌ಗಳನ್ನೊಳಗೊಂಡ ಈ
...ದು ಸಾರಿಯಲ್ಲ, ಎರಡು ಸಾರಿಯಲ್ಲ, ಅನೇಕ ಸಾರಿ ನೋಡಿ
...ಚನೆಗಳನ್ನು ಮಾಡಿ ಕಳುಹಿಸಿದ್ದೇವೆ. ಇಲ್ಲದಿದ್ದರೆ ಅಂತಹ
...ಷ್ಟೋ ಸಾರಿ ಯೋಗ್ಯವಾದ ಸೂಚನೆಗಳು ಇದ್ದರೂ
...ವಾರು ಸಂದರ್ಭಗಳಲ್ಲಿ ತಿರಸ್ಕರಿಸುತ್ತೇವೆಂದು
...ರೂ ಮಾಡಲಿಲ್ಲ. ನಾನು ಯಾವ ಪುಸ್ತಕವನ್ನು
... ಯೂನಿವರ್ಸಿಟಿಯ ಪ್ರತಿಯೊಂದು ಕ್ಲಾಸಿಗೂ
...ಟೀಕೆ ಮಾಡುವಂಥ ಟೀಕೆ ಆಗಬಾರದು.

...ಟಿ ಬಿಲ್‌ನಲ್ಲಿ ಒಂದು ಬದಲಾವಣೆಯನ್ನು
...ಧಾಭಿಪ್ರಾಯ ಇದೆಯೆಂದು ನಾನು ಭಾವನೆ
...ಣೆಯನ್ನು ಮಾಡಲು ಅಪೇಕ್ಷೆ ಮಾಡುತ್ತೇನೆ.
...ದ್ದಾರೆಂದು ಹೇಳಿದ್ದೇವೆ. ಇದನ್ನು ಏಕೆ ಹಾಕಿದಿರಿ
...ವರು ಯೂನಿವರ್ಸಿಟಿ ಅಧಿಕಾರಿಗಳಲ್ಲಿ ಇಂದು
...ಗ ಅವರಿಗೆ ಅಲ್ಲಿ ರಿಪಾಟ್ರಿಯೇಟ್ ಮಾಡುವುದಕ್ಕೆ

ಎಲ್ಲಿಯೂ ಸ್ಥಾನವಿಲ್ಲ. ಅವರು ಅಂತಹ ಅಂತರ್ಗತ ಸ್ಥಿತಿಯಲ್ಲಿದ್ದಾರೆ. ಹೈಕೋರ್ಟು ಕಳುಹಿಸಿರುವ ಆಜ್ಞೆ, ತಪ್ಪು ಎಂದು ಹೇಳಿದರು. ಹೀಗೆ ಅಲ್ಲಿ ಅನೇಕ ಜನ ಸರ್ಕಾರದ ನೌಕರರು ಇದ್ದಾರೆ. ಅವರು ಸರ್ಕಾರದ ನೌಕರರೋ ಅಥವಾ ಯೂನಿವರ್ಸಿಟಿ ನೌಕರರೋ ಎಂಬುದು ಏನೂ ತಿಳಿಯದೇ ಇರುವ ಸಮಸ್ಯೆ ಇರುವಾಗ ನಾನು ಆ ರೀತಿಯಾಗಿ ಸಲಹೆ ಮಾಡಿದೆ. ಮಾನ್ಯ ಸದಸ್ಯರು ಆ ಸಲಹೆ ಬೇಡವೆಂದು ಹೇಳಿದರೆ ಅದನ್ನು ಬದಲಾವಣೆ ಮಾಡುವುದಕ್ಕೆ ನನ್ನ ...್ಯಂತರವಿಲ್ಲ. ನಾನು ಅದಕ್ಕೆ ಅಡ್ಡಿ ಬರುವುದಿಲ್ಲ. ನನ್ನ ಒಟ್ಟು ಅಭಿಪ್ರಾಯ, ಯೂನಿವರ್ಸಿಟಿ ತನ್ನ ಅಟಾನಮಸ್ ನೇಚರನ್ನು ಕಳೆದುಕೊಳ್ಳಬಾರದು. ಅದು ಇರಬೇಕು. ಅದರ ಜೊತೆಗೆ ...ಗದವರೂ ಕೂಡ ಯೂನಿವರ್ಸಿಟಿಗೆ ಪೂರೈಸುವಂಥ ಹೇರಳವಾದ ಹಣದ ವಿತರಣೆಯಲ್ಲಿ, ...ತ್ರಿ... ಅವ್ಯವಹಾರ, ಅಪಚಾರ ಮಾಡದಂತೆ ಸೂಕ್ತ ಮಾರ್ಗಗಳನ್ನು ಅನುಸರಣೆ ...ರಬೇಕೆಂದು ನನ್ನ ಅಭಿಪ್ರಾಯ. ಹಿಂದಿನ ಆಕ್ಟ್‌ನೊಳಗೆ ಯಾವ ರೀತಿಯಾದಂಥ ...ಲಾವಣೆಗಳನ್ನು ಮಾಡಿದ್ದಾರೆ? ಹಿಂದಿನ ಆಕ್ಟ್‌ನಲ್ಲಿ ಪ್ರೊಛಾನ್ಸಲರಿಗೆ ಯೂನಿವರ್ಸಿಟಿ ... ಮ್ಯಾನೇಜ್‌ಮೆಂಟಿನ ಬದಲಾವಣೆ ಇಲ್ಲವೆಂದು ಕಾನೂನು ಇಲ್ಲವೇ? ನೋಟೀಸ್ ಪೇಪರ್ಸ್ ತರಿಸುವ ಅಧಿಕಾರವಿಲ್ಲವೇ? ಆದ್ದರಿಂದ ದೊಡ್ಡ ದೊಡ್ಡ ಯೂನಿವರ್ಸಿಟಿಗಳನ್ನು ...ಮಾಡಬೇಕೆಂಬ ಕಾನೂನು ಇರುವುದು ಸಮರ್ಪಕವಲ್ಲ. ಅದಕ್ಕಿಂತ ಮೊದಲು ಯಾವಾಗ ...ೂನಿವರ್ಸಿಟಿಗಳು ಹೆಚ್ಚಿಗೆ ಬೆಳೆಯತಕ್ಕ ಯೋಚನೆ ಮಾಡುವಂತಹ ಅಗತ್ಯವಿರುವಾಗ, ಇದನ್ನು ...ೀವು ಏಕೆ ವಿಚಾರ ಮಾಡಬೇಕು? ಇನ್ನು ತಮ್ಮ ಎದುರಿಗೆ ಪ್ರೊಛಾನ್ಸಲರ್ ಇಬ್ಬರು ಇರುವುದು ಬೇಡ. ಅದನ್ನು ಬದಲಾವಣೆ ಮಾಡಿ, ಅದನ್ನೂ ಛಾನ್ಸಲರಿಗೆ ಕೊಡಿ ಎಂದು ಹೇಳಿದರೆ, ಆ ವಿಚಾರವನ್ನು ಸರ್ಕಾರದ ಮುಂದೆ ಇಡೋಣವೆಂದು ನಾನು ಹೇಳುತ್ತೇನೆ. ಅದಕ್ಕೆ ನನ್ನ ಅಭ್ಯಂತರವಿಲ್ಲ. ನಾನು ಈ ವಿಚಾರದಲ್ಲಿ ಸರ್ಕಾರದಲ್ಲಿ ಯಾವ ರೀತಿಯಾದ ಒಂದು ನಿರ್ಣಯ ಬರುತ್ತದೋ ಆ ಒಂದು ನಿರ್ಣಯವನ್ನು ಪಾಲನೆ ಮಾಡುವುದಕ್ಕೆ ನಾನು ಸಮರ್ಥನಿದ್ದೇನೆಂದು ಹೇಳುವುದಕ್ಕೆ ಇಚ್ಛಿಪಡುತ್ತೇನೆ. ಇನ್ನು ಈಗಿನ ಯೂನಿವರ್ಸಿಟಿಯ ಹೊಸ ಕಾಯಿದೆಯಲ್ಲಿ ಯೂನಿವರ್ಸಿಟಿಯಲ್ಲಿ ಕೆಲಸ ಮಾಡುವ ಅಧಿಕಾರ ವರ್ಗದ ರೂಪು ರೇಖೆಗಳನ್ನು ಹೆಚ್ಚು ಬಲವತ್ತರಗೊಳಿಸಲಾಗಿದೆ.

ಈ ಮಸೂದೆಯ ಬಗ್ಗೆ ವೈಸ್ ಛಾನ್ಸಲರಾಗಿ ಎಲ್ಲಾ ಅಧಿಕಾರಿಗಳೂ ತಮ್ಮ ಒಪ್ಪಿಗೆಯನ್ನು ವ್ಯಕ್ತಪಡಿಸಿದ್ದಾರೆ. ಇಂಥ ಮಹತ್ವದ ಒಂದು ಮಸೂದೆಯನ್ನು ಈ ಮಹಾಸದನದವರು ಒಂದೇ ದಿನದಲ್ಲಿ ಒಪ್ಪಬಹುದಾಗಿತ್ತು. ಆದರೆ ಈಗಲೂ ಸಹಿತ ವೇಳೆ ಮೀರಿಲ್ಲ. ಇದನ್ನು ವಿಚಾರ ಮಾಡುವುದು ಅನಂತರ ಅನುಮೋದಿಸತಕ್ಕದ್ದು ಇನ್ನೂ ಉತ್ತಮವಾದದ್ದು. ನಾನು ಈಗ ಈ ಬಿಲ್ಲನ್ನು ಈ ಸದನದ ಎಲ್ಲ ಸದಸ್ಯರ ಮುಂದೂ ಮಂಡನೆ ಮಾಡುತ್ತಿದ್ದೇನೆ. ಈ ಮಸೂದೆಯನ್ನು ಅಗ್ರಿಕಲ್ಚರಲ್ ರಿಸರ್ಚ್ ಇನ್‌ಸ್ಟಿಟ್ಯೂಟಿನವರ ಮಾರ್ಗದರ್ಶನದಲ್ಲಿ ಇದನ್ನು ನಡೆಸುತ್ತಿದ್ದೇವೆ. ನಮ್ಮ ದೇಶದಲ್ಲಿ ರೈತರಿಗೆ ಇನ್ನೂ ನಾವು ಇಲ್ಲಿಯ ತನಕ ಆಧುನಿಕ ಮಟ್ಟದ ಸಲಕರಣೆಗಳನ್ನು ಒದಗಿಸುವುದಕ್ಕಾಗಿಲ್ಲ. ರೈತರಿಗೆ ಆಧುನಿಕ ಸಲಕರಣೆಗಳನ್ನು ಒದಗಿಸಬೇಕು. ನಮ್ಮಲ್ಲಿ ಈ ಉತ್ಪನ್ನ ಆದಷ್ಟು ಬೇಗನೆ ಒಂದಕ್ಕೆ ನಾಲ್ಕರಷ್ಟು ಹೆಚ್ಚಬೇಕಾಗಿದೆ. ಇಷ್ಟೆಲ್ಲಾ ಉದ್ದೇಶಗಳನ್ನು ಇಟ್ಟುಕೊಂಡು ನಾನು ಇದನ್ನು ಮಾಡುತ್ತಿದ್ದೇನೆ. ಆದರೆ ಒಂದು ಅನಿವಾರ್ಯಕ್ಕಾಗಿ ಈ ದಿವಸ ಈ

ಯೂನಿವರ್ಸಿಟಿ ಧಾರವಾಡದಲ್ಲಿ ಸ್ಥಾಪನೆಯಾಗಬೇಕಾಗಿದೆ. ಅದಕ್ಕೆ ಕಾರಣ ಅಲ್ಲಿ ಈ ಯೂನಿವರ್ಸಿಟಿಗೆ ಅಗತ್ಯವಾಗಿ ಬೇಕಾದ ಅನೇಕ ಸಲಕರಣೆಗಳು ಸಾಮಾನುಗಳು ಅಲ್ಲಿವೆ. ಇದರಿಂದ ಸರ್ಕಾರಕ್ಕೆ ಬಹಳ ಕಡಿಮೆ ಖರ್ಚು ಬರುತ್ತದೆ. ನಮಗೆ ಅಲ್ಲಿ ಇದನ್ನು ಸ್ಥಾಪನೆ ಮಾಡುವುದರಿಂದ ಅಂದಾಜು 4.49 ಲಕ್ಷ ರೂಪಾಯಿಗಳ ಖರ್ಚು ಬರುತ್ತೆಂದು ನಿರೀಕ್ಷಿಸಲಾಗಿದೆ. ಮುಂದೆ ಇನ್ನೂ ರಾಜ್ಯದಲ್ಲಿ ಇಂಥ ಯೂನಿವರ್ಸಿಟಿಗಳನ್ನು ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ತೆರೆಯಬೇಕಾದ ಅವಶ್ಯಕತೆ ಬರಬಹುದು. ಆಗ ಮಂಗಳೂರಲ್ಲಿ ಒಂದು ಗುಲ್ಬರ್ಗಾದಲ್ಲಿ ಒಂದು ಹೀಗೆ ತೆರೆಯಬಹುದು. ಹೀಗೆ ಇನ್ನು ಮುಂದೆ ಮಂಜೂರಾಗತಕ್ಕ ಯೂನಿವರ್ಸಿಟಿಗಳು ಎಲ್ಲಿಗಾದರೂ ಹೋಗಬಹುದು. ಈಗ ಇದು ಸಾಕಷ್ಟು ಪ್ರಗತಿಯನ್ನು ಮುಟ್ಟಿರುವಾಗ ಇದಕ್ಕೆ ಯಾ ದಯವಿಟ್ಟು ಅಡ್ಡ ಬರಬಾರದು ಎಂದು ತಮ್ಮೆಲ್ಲರಲ್ಲೂ ಬಹಳ ನಮ್ರಪೂರ್ವಕವಾಗಿ ವಿನ ಮಾಡಿಕೊಳ್ಳುತ್ತೇನೆ. ಇನ್ನು ರಾಜ್ಯದಲ್ಲಿ ಯಾವುದೇ ಒಂದು ಅಭಿವೃದ್ಧಿ ಕಾರ್ಯವಾಗಲಿ ಅದ ವಿದ್ಯೆಯೇ ಆಗಲಿ, ವ್ಯವಸಾಯದಲ್ಲಾಗಲೀ ಒಂದು ಔದ್ಯೋಗಿಕ ರಂಗದಲ್ಲಾಗಲೀ ಹೀಗೆ ಯಾವುದೇ ಬರಲಿ ನಾವೆಲ್ಲರೂ ಒಂದು ಗೂಡಿ ರಾಜ್ಯದ ಪ್ರಗತಿಯನ್ನು ಸಾಧಿಸೋಣ. ಇಂದು ನಮಗೆ ಒಂದು ಒಳ್ಳೆಯ ಸಮಯ ಕೂಡಿ ಬಂದಿದೆ. ಇಂಥ ಸಮಯವನ್ನು ಕಳೆದುಕೊಂಡ ನಂತರ ಇಂಥಾ ಒಂದು ಅನುಕೂಲ ನಮಗೆ ದೊರೆಯಲಿಲ್ಲವಲ್ಲಾ ಎಂದು ಅನಂತರ ಯಾರೂ ಮರುಗುವುದು ಬೇಡ. ಧಾರವಾಡದಲ್ಲಿ ಅಲ್ಲಿಯ ಯೂನಿವರ್ಸಿಟಿಯ ಬೆಳ್ಳಿ ಹಬ್ಬಕ್ಕೆ ಬಂದಿದ್ದ ಅಗ್ರಿಕಲ್ಚರಲ್ ರಿಸರ್ಚ್ ಇನ್‌ಸ್ಟಿಟ್ಯೂಟಿನವರು ಅಲ್ಲಿನ ಅನುಕೂಲತೆಗಳನ್ನು ನೋಡಿ ಅಲ್ಲಿ ಈ ಯೂನಿವರ್ಸಿಟಿಯನ್ನು ಸ್ಥಾಪನೆ ಮಾಡುವುದಕ್ಕೆ ಅವರಾಗಿ ಅವರೇ ಉತ್ತೇಜನ ಕೊಟ್ಟರು. ಅದೇ ರೀತಿ ಅವರು ಕೂಡ ನಮಗೆ ಬಹಳ ಉತ್ತೇಜನಕರವಾಗತಕ್ಕ ರೀತಿಯಲ್ಲಿ ಬರೆದಿದ್ದಾರೆ. ಶ್ರೀ ಆರುಮ್ಗಂರವರು ಯೂನಿವರ್ಸಿಟಿ ಗ್ರಾಂಟ್ ಕಮಿಷನ್ನಿನವರಿಂದ ನಾವು ಗ್ರಾಂಟನ್ನು ಏಕೆ ಪಡೆಯಲಿಲ್ಲ ಎಂದು ಕೇಳಿದ್ದಾರೆ. ಆದರೆ ಹಾಗೆ ಗ್ರಾಂಟನ್ನು ಪಡೆಯತಕ್ಕ ಪ್ರಶ್ನೆ ನಾವು ಇಲ್ಲಿ ಯೂನಿವರ್ಸಿಟಿಯನ್ನು ಸ್ಥಾಪನೆ ಮಾಡಿದ ಮೇಲೆ ಉದ್ಭವವಾಗುತ್ತದೆಯೇ ವಿನಾ ಅದಕ್ಕೆ ಮೊದಲು ಆ ಪ್ರಶ್ನೆ ಬರುವುದಿಲ್ಲ. ನಮಗೆ ಈಗ ಇದಕ್ಕೆ ಐ.ಸಿ.ಆರ್. ನವರಿಂದ ಗ್ರಾಂಟ್ ಸಿಕ್ಕುತ್ತದೆ. ಈಗ ನಾವು ಇದನ್ನು ಮಾಡದೆ ಕೈಬಿಟ್ಟರೆ ಮುಂದೆ ಗ್ರಾಂಟನ್ನು ಕ್ಲೈಂ ಮಾಡುವುದಕ್ಕೆ ಬರುವುದಿಲ್ಲ. ನಾವು ಈ ದಿವಸ ಇದನ್ನು ಸ್ಥಾಪನೆ ಮಾಡುವುದಕ್ಕೆ ಪ್ರಯತ್ನ ಮಾಡಿದರೂ ಇದನ್ನು ಪ್ರಾರಂಭ ಮಾಡುವುದಕ್ಕೆ ಒಂದು ವರ್ಷದ ಮೇಲೆ ಹಿಡಿಯುತ್ತದೆ. ಅಂದಾಗ ಈಗ ಈ ಮಸೂದೆಗೆ ಅಡೆತಡೆಗಳನ್ನು ಉಂಟು ಮಾಡುವುದು ಸಾಧ್ಯವಾದದ್ದೇ ಅನ್ನುವುದನ್ನು ಮಾನ್ಯ ಸದಸ್ಯರೇ ಆಲೋಚಿಸಬೇಕು. ಆದರೆ ನನ್ನ ಉದ್ದೇಶ ನಾಳೆಗೆ ಬರುವುದು ಇಂದೇ ಬರಲಿ ಅನ್ನುವುದು. ನಮಗೆ ಬಹಳ ಕಾಲದವರೆಗೆ ಈ ಐ.ಸಿ.ಆರ್. ಮತ್ತು ಯೂನಿವರ್ಸಿಟಿ ಗ್ರಾಂಟ್ಸ್ ಕಮಿಷನ್ನಿನವರಿಂದ ನಮ್ಮ ಅಭಿವೃದ್ಧಿ ಸಾಧನೆಗೆ ಬೇಕಾದ ಸಹಾಯ ಸಹಕಾರಗಳು ಇಲ್ಲಿ ಈ ಯೂನಿವರ್ಸಿಟಿಯನ್ನು ಸ್ಥಾಪಿಸುವುದರಿಂದ ಇಲ್ಲಿ ಅನೇಕ ಬಾಬುಗಳ ಹೈಯರ್ ಎಜುಕೇಶನನ್ನು ಪ್ರಾರಂಭ ಮಾಡುವುದಕ್ಕೆ ಸಾಧ್ಯವಾಗುತ್ತದೆ. ಡೈರಿ ರಿಸರ್ಚಿಗೂ ಅನುಕೂಲವಾಗುತ್ತದೆ. ಈ ನಾನಾ ಕಾರಣಗಳಿಂದ ಮಾನ್ಯ ಸಭೆಯ ಎಲ್ಲಾ ಸದಸ್ಯರು ಅಂತಃಕರಣಪೂರ್ವಕವಾದ ಸಹಕಾರ ನೀಡಬೇಕೆಂದು ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ಆದರೆ ಇಂಥ ಒಂದು ಯೂನಿವರ್ಸಿಟಿ

ಸ್ಥಾಪನೆಯಾಗುವುದರಲ್ಲಿ ಅನೇಕ ಕಾರಣಗಳಿಂದ ನಿಧಾನವಾಗಿರಬಹುದು. ಅದಕ್ಕೆ ನನ್ನಲ್ಲೇ ಅನೇಕ ಲೋಪದೋಷಗಳಿರಬಹುದು. ಅದನ್ನು ತಾವೆಲ್ಲರೂ ಮನ್ನಿಸಿ ಇದಕ್ಕೆ ಅನುಮತಿ ಕೊಡಬೇಕಾಗಿದೆ. ಈ ದೊಡ್ಡ ಸದನಕ್ಕೆ ಈ ಕಾರ್ಯವಾದರೂ ಬಹಳ ಸಣ್ಣದು. ಆದಾಗ್ಯೂ ಇದು ರಾಜ್ಯದಲ್ಲಿ ಬಹಳ ಕಾಲ ಉಳಿಯತಕ್ಕದ್ದಾಗಿದೆ. ಆದುದರಿಂದ ಇದಕ್ಕೆ ಎಲ್ಲರೂ ಬೆಂಬಲ ನೀಡಬೇಕೇ ವಿನಾ ಇದಕ್ಕೆ ಅಡ್ಡಗಾಲನ್ನು ಕೊಡಬಾರದು. ಆದರೆ ಇಂದು ಕರ್ನಾಟಕ ರಾಜ್ಯದಲ್ಲಿ ಧಾರವಾಡ ಯೂನಿವರ್ಸಿಟಿ ಗಳಿಸುತ್ತಿರುವ ಪ್ರಗತಿಯನ್ನು ತಡೆಯುವುದಕ್ಕೆ ತಮ್ಮಗಳ್ಯಾರಿಂದಲೂ ಸಾಧ್ಯವಿಲ್ಲ. ಅಲ್ಲಿಯ ಪ್ರಗತಿ ಅದು ಆಗಲೇಬೇಕು. ಅದೇ ಆಗುತ್ತದೆ. ಈ ವಿಷಯವನ್ನು ನಾನು ತಮ್ಮಲ್ಲಿ ಬಹಳ ನಮ್ರತೆಯಿಂದ ಹೇಳುತ್ತಿದ್ದೇನೆ. ಇಂಥ ಒಂದು ಶುಭ ಮುಹೂರ್ತದಲ್ಲಿ ಮಂಗಳ ಹಾಡತಕ್ಕ ಕಾಲದಲ್ಲಿ ಯಾರೂ ಇದಕ್ಕೆ ಅಮಂಗಳ ಹಾಡಬಾರದೆಂದು ನನ್ನ ಪ್ರಾರ್ಥನೆ. ತಮ್ಮೆಲ್ಲರ ವಿವರಣೆಗಳು ಬಂದ ನಂತರ ನಾನು ಇದಕ್ಕೆ ಸುಧೀರ್ಘವಾದ ಉತ್ತರವನ್ನು ಕೊಡುತ್ತೇನೆ. ತಾವು ಈ ಮಸೂದೆಯ ಮೇಲೆ ಹೆಚ್ಚಿನ ಬೆಳಕನ್ನು ಚೆಲ್ಲಿ ನನಗೆ ತಿದ್ದಿಕೊಳ್ಳುವುದಕ್ಕೆ ಅವಕಾಶ ಮಾಡಿಕೊಡಿ. ಇದು ಲಾ ಇಲಾಖೆಯಿಂದ ಪರಿಶೋಧಿಸಲ್ಪಟ್ಟು ಅನಂತರ ಇಲ್ಲಿ ಬಂದಿದೆ. ಲಾ ಇಲಾಖೆ ಮಂತ್ರಿಗಳಿಗೆ ಆರೋಗ್ಯ ಸರಿಯಾಗಿಲ್ಲದೆ ಅವರು ಬಾರದೆ ಇದ್ದುದರಿಂದ ಈ ಬಿಲ್ಲನ್ನು ಇಲ್ಲಿ ತರಲು ಒಂದು ಒಂದೂವರೆ ತಿಂಗಳು ತಡವಾಯ್ತು. ಈ ಅಧಿವೇಶನದ ಪ್ರಾರಂಭದಲ್ಲೇ ಬರಬೇಕಾಗಿದ್ದ ಬಿಲ್ಲು ಈಗ ಬಂದಿದೆ. ಇದು ವ್ಯಸನಕರವಾದ ವಿಷಯ ತೀವ್ರವಾಗಿ ಈ ವಿಧೇಯಕವನ್ನು ಪಾಸು ಮಾಡಬೇಕೆಂದು ಪ್ರಾರ್ಥನೆ ಮಾಡಿ ನನ್ನ ಮಾತನ್ನು ಮುಗಿಸುತ್ತೇನೆ.

## ರಾಸಾಯನಿಕ ರಸ ಗೊಬ್ಬರದ ಬಗ್ಗೆ ಚರ್ಚೆ

ಗೊಬ್ಬರದ ಬಗ್ಗೆ ಮಾನ್ಯ ಅನೇಕ ಸದಸ್ಯರು ಬಹಳ ಸೂಕ್ತವಾದ ಸಲಹೆಗಳನ್ನು ಮತ್ತು ಅದರ ಅಭಿಪ್ರಾಯಗಳನ್ನು ಕೊಟ್ಟಿದ್ದಾರೆ. ಇನ್ನು ಕೆಲವರು ಟೀಕೆಗಳನ್ನು ಉಗ್ರವಾಗಿ ಮಾಡಿದ್ದಾರೆ. ಆದರೆ ಅವರು ಸ್ವಲ್ಪ ಟೀಕೆ ಮಾಡಿದರೂ ಕೂಡ ನಿಜವಾಗಿಯೂ ಗೊಬ್ಬರದ ಅಭಾವವನ್ನು ನೀಗಲು ಸಮರ್ಪಕವಾಗಿ ಆಗಿಲ್ಲವೆಂದು ಅವರ ಅಭಿಪ್ರಾಯವಾಗಿದೆ. ಮಾನ್ಯ ಸದಸ್ಯರು ಒಂದು ಮಾತನ್ನು ಗಮನಿಸಬೇಕು ಹೇಳುವ ದರದಲ್ಲಿ ಯಾವುದೂ ಸಮರ್ಪಕವಾಗಿಲ್ಲವೆಂದು ಹೇಳಿದರೆ ನಾನು ಒಪ್ಪಿಕೊಳ್ಳುವುದಕ್ಕೆ ಸಾಧ್ಯವಿಲ್ಲ. ಮಾನ್ಯ ಸದಸ್ಯರನ್ನು ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ಯಾವಾಗಲೂ ಟೀಕೆಗಳನ್ನು ಮಾಡಬೇಕಾದರೆ ಅದರಲ್ಲಿರುವ ಅಂಶಗಳನ್ನು ಪರಿಶೀಲನೆ ಮಾಡಿ ಅದರ ಸಾಧ್ಯಾಸಾಧ್ಯತೆಗಳನ್ನು ಪರಿಶೀಲನೆ ಮಾಡಿ ಹಿಂದೆ ಆಗಿರುವುದು ಏನು? ಈಗ ಯಾವ ಸ್ಥಿತಿಯಲ್ಲಿವೆಯೆಂದು ನೋಡಿ ಸೂಕ್ತವಾದ ಸಲಹೆ ಮಾಡಿದರೆ ಒಳ್ಳೆಯದು. ಇಲ್ಲದೆ, ಸರಿಯಾಗಿ ವಿವೇಚನೆ ಮಾಡದೆ, ನನ್ನ ಮತ್ತು ಅವರ ಅಮೂಲ್ಯವಾದ ಸಮಯವನ್ನು ಹಾಳು ಮಾಡಿಕೊಂಡರೆ ಏನು ಉಪಯೋಗವಾಗುತ್ತದೆ ಎಂಬುದನ್ನು ಯೋಚನೆ ಮಾಡಿ ತಮ್ಮ ಅಮೂಲ್ಯವಾದ ಸಲಹೆಗಳನ್ನು ಮಾಡಿದರೆ ಅದನ್ನು ಸ್ವಾಗತಿಸುತ್ತೇನೆ. ಮಾನ್ಯ ಸದಸ್ಯರು ಮೂರು ವಿಷಯಗಳನ್ನು ಹೇಳಿದರು. ಗೊಬ್ಬರ ಎಲ್ಲರಿಗೂ ಬೇಕು, ರೇಷ್ಮೆಗೂ ಬೇಕು, ಕಬ್ಬಿಗೂ ಬೇಕು ಎಲ್ಲದಕ್ಕೂ ಬೇಕು. ಗೊಬ್ಬರವಿಲ್ಲದೆ ಯಾವ ಬೆಳೆಯನ್ನೂ ಬೆಳೆಯಲು ಸಾಧ್ಯವಿಲ್ಲವೆನ್ನುವುದನ್ನು ನಾನು ತಿಳಿದುಕೊಂಡಿದ್ದೇನೆ. ಆದರೆ ನಮ್ಮ ಸ್ಟೇಟಿಗೆ ಮೂರು ಕೋಟಿ ಎಕರೆ ಭೂಮಿ ಇದೆ. ಅದರಲ್ಲಿ ಒಂದು ಎಕರೆಗೆ ಅರ್ಧ ಚೀಲ ಗೊಬ್ಬರ ಕೊಡಿ ಎಂದು ಆರ್ಡರ್ ಮಾಡಿದರೆ ಸುಮಾರು ನಮಗೆ ಒಂದೂವರೆ ಕೋಟಿ ಅಥವಾ ಒಂದು ಕೋಟಿ 5 ಲಕ್ಷ ಟನ್‌ಗೊಬ್ಬರ ಬೇಕಾಗುತ್ತದೆ. ಅದು ಸಾಧ್ಯವಿಲ್ಲ. ನಮಗೆ ಗೊಬ್ಬರದ ಅಭಾವ ಇರುವಾಗ ಇರುವುದನ್ನು ನಾವು ಉಪಯೋಗ ಮಾಡಿಕೊಳ್ಳಬೇಕಾದರೆ ಯಾವು ಯಾವುದಕ್ಕೆ ಗೊಬ್ಬರ ಕೊಡುವುದು ಎನ್ನುವುದೇ ಒಂದು ಸಮಸ್ಯೆಯಾಗಿದೆ ಶುಗರ್‌ಕೇನ್ ಬೆಳೆಗೆ ಕೊಡಬೇಕು, ಫುಡ್‌ಗ್ರೈನ್ಸ್ ಬೆಳೆಯಲು ಕೂಡ ಕೊಟ್ಟರೆ ಅಧಿಕ ಬೆಳೆ ತೆಗೆಯಬಹುದು ಎಂದು ಹೇಳುತ್ತಾರೆ. [illegible] ರಾಜ್ಯದಲ್ಲಿ ಜನರ ಅವಶ್ಯಕತೆಗೆ ಎಷ್ಟು ಕೊಡಬೇಕೋ ಅಷ್ಟನ್ನೂ ಕೊಡಲು ಸಾಧ್ಯವಾಗು[illegible]ಲ್ಲ ಆದ್ದರಿಂದ ಎಲ್ಲೆಲ್ಲಿ ಗೊಬ್ಬರದ ಜರೂರಾದ ಅವಶ್ಯಕತೆ ಇದೆ, ಗೊಬ್ಬರವಿಲ್ಲದೆ ಬೆಳೆಯನ್ನು ತೆಗೆಯಲು ಸಾಧ್ಯವಿಲ್ಲವೆಂದು ಬೆಳೆಯನ್ನು ಇಡದೆ ಇದ್ದಾರೆ. ಅದನ್ನು ನೋಡಿ ಸೂಕ್ತವಾಗಿ ನಿಮ್ಮ ವಿವೇಚನೆ ಉಪಯೋಗಮಾಡಿ ಗೊಬ್ಬರವನ್ನು ಕೊಡಬೇಕೆಂದು ಆರ್ಡರ್ ಮಾಡಿದ್ದೇವೆ. ಎಲ್ಲಾ ಡಿಸ್ಟ್ರಿಕ್ಟುಗಳಲ್ಲಿ ಡೆಪ್ಯುಟಿ ಕಮಿಷನರ್‌ರವರನ್ನು ಚೇರ್‌ಮೆನ್ ಆಗಿ ಮಾಡಿ ತಾಲ್ಲೂಕು ವೈಸ್ ಅಲಾಟ್ ಮಾಡಿದ್ದೇವೆ. ಸಣ್ಣ ಸಣ್ಣ ಅಧಿಕಾರಿಗಳು ಇದ್ದರೆ ದುರುಪಯೋಗವಾಗಬಹುದು ಎಂದು ಡೆಪ್ಯುಟಿ ಕಮಿಷನರ್‌ನವರನ್ನು ಉದ್ದೇಶಪೂರ್ವಕವಾಗಿ ಹಾಕಿದ್ದೇವೆ. ಇವರನ್ನು ಕಮಿಟಿಯ ಚೇರ್‌ಮೆನ್ ಆಗಿ ಮಾಡಿದರೆ ಇನ್ನು ಎಫಿಷಿಯೆಂಟ್ ಆಗಿ ಕೆಲಸ ಕಾರ್ಯಗಳು ಆಗಬಹುದು ಎಂದು ಕಮಿಟಿಗಳನ್ನು ಮಾಡಿದ್ದೇವೆ. ಕೆಲವು ಮಾನ್ಯ ಸದಸ್ಯರು ಆ ಕಮಿಟಿಗಳಲ್ಲಿ ನಾನ್ ಅಫಿಷಿಯಲ್ಸ್ ಹಾಕಬೇಕೆಂದು ಸಲಹೆ ಮಾಡಿದ್ದಾರೆ. ಇದನ್ನು ನಾವು ಮಾಡಿದರೆ ಆ ಮೇಲೆ ಒಂದು ಪಕ್ಷದವರನ್ನೇ ಹಾಕಿದ್ದಾರೆಂದು ಅದರ ಮೇಲೆ ಟೀಕೆಗಳು ಬರಬಹುದು ಎಂದು ಆಫೀಸರ್ಸ್ ಟಿ.ಡಿ.ಬಿ. ಪ್ರೆಸಿಡೆಂಟ್ ಮತ್ತು ಡಿಸ್ಟ್ರಿಕ್ಟ್ ಸೆಂಟ್ರಲ್

---

ವಿಸನದಿ: 5-9-1973

ಕೋ-ಆಪರೇಟಿವ್ ಬ್ಯಾಂಕ್ ಪ್ರೆಸಿಡೆಂಟರನ್ನು ಕಮಿಟಿಯ ಸದಸ್ಯರನ್ನಾಗಿ ಹಾಕಿದ್ದೇವೆ. ಮೂರನೆಯದಾಗಿ ಸಾಲಗಾರರಿಗೆ ಮಾತ್ರ ಕೊಡುತ್ತಿದ್ದಾರೆಂದು ಮಾನ್ಯ ಸದಸ್ಯರಾದ ಶ್ರೀಮಾನ್ ಕಾಗೋಡ್ ತಿಮ್ಮಪ್ಪನವರು ಮತ್ತು ಇನ್ನು ಇತರರು ಹೇಳಿದ್ದಾರೆ. ಮತ್ತೆ ಅಧಿಕಾರಿಗಳನ್ನು ಹಾಕಿದರೆ ತಮ್ಮ ಪವರನ್ನು ಚಲಾಯಿಸಬಹುದು ಎಂದು ಹೇಳಿ ಆ ರೀತಿ ಹಾಕಿದ್ದಾರೆಂದು ಹೇಳಿರುವುದನ್ನು ಕೇಳಿ ಅದರ ಬಗ್ಗೆ ನಾನು ವಿಷಾದಪಡುತ್ತೇನೆ. ಈ ಸದನದ ಮೂಲಕ ಹೇಳುವುದೇನೆಂದರೆ ಮೈಸೂರು ರಾಜ್ಯದಲ್ಲಿ ಯಾವುದೇ ರೀತಿಯ ಅಭಿವೃದ್ಧಿಯ ಕೆಲಸ ಕಾರ್ಯಗಳಲ್ಲಿ ಮಾನ್ಯ ಸದಸ್ಯರು ಯಾವುದೇ ಸಲಹೆ ಮಾಡಿದರೆ ಅದಕ್ಕೆ ಪುರಸ್ಕಾರ ಕೊಡಬಾರದೆಂದು ಇಲ್ಲ. ಪ್ರತಿಯೊಂದನ್ನು ತೀವ್ರವಾದ ರೀತಿಯಲ್ಲಿ ಪರಿಶೀಲಿಸಬೇಕಾಗುತ್ತದೆ. ಮಾನ್ಯ ಸದಸ್ಯರು ಹೇಳಿದಂತೆ ಸಮಸ್ತರಿಗೂ ಗೊಬ್ಬರ ಸಿಗಬೇಕು ಮತ್ತು ಪರ್ಮಿಟ್ ಸಿಗಬೇಕು ಎಂದು ಗ್ರಾಮಸೇವಕರು ಪ್ರತಿಯೊಂದು ಮನೆ ಮನೆಗೂ ಹೋಗಿ ಕೇಳಬೇಕು ಎಂದು ಇದೆ. ದುರ್ದೈವ ನಮ್ಮ ಅಧಿಕಾರಿಗಳು ಆ ರೀತಿ ಮಾಡದೆ ಇದ್ದರೆ ಮಾನ್ಯ ಸದಸ್ಯರು ನನಗೆ ಸಹಕಾರಕೊಟ್ಟು ಯಾವುದಾದರೂ ಕುಂದುಕೊರತೆಗಳು. ಲೋಪ ದೋಷಗಳು ಕಂಡುಬಂದರೆ ಅವುಗಳನ್ನು ನನ್ನ ಗಮನಕ್ಕೆ ತಂದರೆ ಅದನ್ನು ಸರಿಪಡಿಸಲು ಸಾಧ್ಯವಾಗುತ್ತದೆ ಎಂದು ಹೇಳುತ್ತೇನೆ. ಕೆಲವು ಸಂಘಗಳು ಮಾತ್ರ ಗೊಬ್ಬರವನ್ನು ಕೊಡುತ್ತಿದ್ದಾರೆ ಇನ್ನು ಕೆಲವು ಕಡೆಗಳಲ್ಲಿ ಸರಿಯಾಗಿ ಕೊಡುತ್ತಿಲ್ಲವೆಂದು ಹೇಳುತ್ತಿದ್ದಾರೆ. ಅಂಥ ಕಡೆಗಳಲ್ಲಿ ಸರಿಯಾಗಿ ಹಂಚಿಕೆಯಾಗುವಂತೆ ಮಾಡುತ್ತೇವೆ. ಕೆಲವು ತಾಲ್ಲೂಕುಗಳಲ್ಲಿ 1-2 ಟನ್ನುಗಳನ್ನು ಕೊಡುತ್ತಿದ್ದಾರೆ. ನಾನು ಹೋದ ಕಡೆಯಲ್ಲಿ ಡೈರೆಕ್ಟರ್‌ಗಳನ್ನು ಕೇಳಿ ಸರಿಯಾಗಿ ಹಂಚಿಕೆಯಾಗುತ್ತಿದೆಯೇ ಎಂದು ವಿಚಾರಿಸಿ ಅದಕ್ಕೆ ಸರಿಯಾದ ವ್ಯವಸ್ಥೆಗಳನ್ನು ಮಾಡಿದ್ದೇನೆ. ಯಾವ ತಾಲ್ಲೂಕಿನಲ್ಲಿ ಅವಶ್ಯಕತೆ ಜಾಸ್ತಿಯಿದೆಯೆಂದು ನೋಡಿ. ನಿಮ್ಮ ವಿವೇಚನೆ ಉಪಯೋಗ ಮಾಡಬೇಕೆಂದು ಹೇಳಿದ್ದೇನೆ ಜಮಖಂಡಿ, ಬಿಜಾಪುರ್, ಇಂಥ ಕಡೆಗಳಲ್ಲಿ ಅವಶ್ಯಕತೆ ಜಾಸ್ತಿ ಇದ್ದರೆ ಅಲ್ಲಿಗೆ ಕೊಡಲು ಆದೇಶ ಕೊಡಲಾಗಿದೆ. ಆ ರೀತಿ ಮಾಡದೆ ಇದ್ದರೆ ಅದನ್ನು ನನ್ನ ಗಮನಕ್ಕೆ ತಂದರೆ ಮತ್ತೆ ಅದನ್ನು ಚುರುಕು ಮಾಡುವ ಹಾಗೆ ಮಾಡುತ್ತಿದ್ದೇವೆ. ಗೊಬ್ಬರ ಸಿಕ್ಕದೆ ಇದ್ದರೆ ಬ್ಲಾಕಿನಲ್ಲಿ ಕೊಂಡುಕೊಳ್ಳಬೇಕಾಗುತ್ತದೆ ಎಂದು ಹೇಳಿದ್ದಾರೆ. ಬ್ಲಾಕಿನಲ್ಲಿ ಗೊಬ್ಬರ ಸಿಕ್ಕುತ್ತದೆ. ಆದರೆ ಕಂಟ್ರೋಲ್ ರೇಟಿನಲ್ಲಿ ಸಿಕ್ಕುತ್ತಾ ಇಲ್ಲವೆಂದು ಹೇಳಿದರು. ಇದಕ್ಕೆ ನಾನು ಒಂದು ಮಾತು ಹೇಳಬೇಕಾಗುತ್ತದೆ. ಈ ವಿಷಯದಲ್ಲಿ ಅವರವರ ಹೃದಯವನ್ನು ಬಿಚ್ಚಿನೋಡಿ ಹೇಳಬೇಕು. ಗೌರ್ನಮೆಂಟ್ ಏಜೆನ್ಸಿ ಮುಖಾಂತರ ಏನಾದರೂ ತಪ್ಪು ನಡೆದಿದ್ದರೆ ಹೇಳಬೇಕು.

ಫರ್ಟಿಲೈಸರ್ ಕಂಪೆನಿಯವರು ಖಾಸಗಿಯಾಗಿ ಮಾರುವುದಕ್ಕೆ ಅವಕಾಶವಿದೆ ಫ್ಯಾಕ್ಟರಿಯವರು ಮಾರುವುದಕ್ಕೆ ಅವಕಾಶವಿದೆ. ಎಫ್.ಸಿ.ಐ. ನವರು ಮಾರುತ್ತಿದ್ದಾರೆ. 100 ಕ್ಕೆ 70 ರಷ್ಟು ಫರ್ಟಿಲೈಸರ್ಸ್‌ನ್ನು ಅವರು ಮಾರಬಹುದು. ನಮ್ಮ ಹತೋಟಿಯಲ್ಲಿ 30 ರಷ್ಟು ಮಾತ್ರ ಇದೆ. ಯಾರಿಗೆ ಕೊಡುವುದು? ಅದನ್ನು ಖಾಸಾಗಿಯವರಿಗೆ ಕೊಡಬೇಕೆ? ನಮಗೆ ಇರುವುದನ್ನು ಆಗ್ರೋ ಇಂಡಸ್ಟ್ರೀಸ್ ಕಾರ್ಪೊರೇಷನ್‌ನವರಿಗೆ ಮತ್ತು ಸಹಕಾರ ಸಂಘಗಳಿಗೆ ಕೊಡಬೇಕು ಎಂದು ತಿಳಿಸಿದ್ದೇವೆ. ಆಗ್ರೋ ಕಾರ್ಪೊರೇಷನ್ ಕೋ ಆಪರೇಟೀವ್ ಸೊಸೈಟಿಗಳಲ್ಲಿ ಖರೀದಿದಾರರು ಇಲ್ಲ ಎಂದು ಹೇಳುವುದಿಲ್ಲ. ಅದಕ್ಕೆ ತಮ್ಮೆಲ್ಲರ ಸಹಕಾರಬೇಕೆಂದು ಕೇಳಿಕೊಳ್ಳುತ್ತೇನೆ ಅನೇಕ ಸದಸ್ಯರು ಅಲ್ಲಿ ಇಲ್ಲಿ ಬ್ಲಾಕ್ ಮಾರ್ಕೆಟ್ ಮಾಡುತ್ತಿದ್ದಾರೆಂದು ಹೇಳಿದ ಕಡೆ ಹೋಗಿದ್ದೇನೆ ಎಲ್ಲಿ

ಆ ರೀತಿ ಆಗಿದೆ ಎಂದು ನನ್ನ ಗಮನಕ್ಕೆ ಬಂದಿದೆ. ಆ ಗಳಿಗೆಯಲ್ಲಿ ಅದನ್ನು ಪತ್ತೆ ಹಚ್ಚಿ ಹಿಡಿದಿದ್ದೇನೆ. ಅವರಿಗೆ ಗೊಬ್ಬರದ ಲೈಸೆನ್ಸ್ ಇದ್ದರೆ ಅದನ್ನು ರದ್ದು ಮಾಡಿದ್ದೇನೆ. ತಾವು ಹೇಳಿರುವ ಸಲಹೆಗಳನ್ನು ಮತ್ತು ಟೀಕೆಗಳನ್ನು ನಾನು ಗಮನದಲ್ಲಿಟ್ಟುಕೊಂಡು ಯಾವುದಾದರೂ ಉಗ್ರವಾದ ತಪ್ಪುಗಳನ್ನು ಮಾಡಿದ್ದು ಕಂಡು ಬಂದರೆ ಅವರಿಗೆ ಉಗ್ರವಾದ ಶಿಕ್ಷೆಗಳನ್ನು ಕೊಡುವುದರಲ್ಲಿ ಹಿಂದೆ ಮುಂದೆ ನೋಡದೆ ನನಗೆ ಇರುವ ಅವಕಾಶವನ್ನು ಉಪಯೋಗ ಮಾಡುತ್ತೇನೆಂದು ಹೇಳುತ್ತೇನೆ. 71 ಸಾವಿರ ಟನ್ ಬಂದಿರುವುದರಲ್ಲಿ 69 ಸಾವಿರ ಟನ್ ಹಂಚಿಕೆಯಾಗಿದೆ. ನಮಗೆ ಬಂದಿರುವ ಗೊಬ್ಬರ ರಬಿಕ್ರಾಪಿಗೆ 68 ಸಾವಿರ ಟನ್ ಯೂರಿಯಾ ಮತ್ತು 69 ಸಾವಿರ ಟನ್ ನೈಟ್ರೋಜನ್ ಕೊಟ್ಟಿದ್ದಾರೆ. ಖರೀಫ್‌ಗಾಗಿ 60 ಸಾವಿರ ಟನ್ ಕೊಟ್ಟಿದ್ದಾರೆ. ಪೂಲ್‌ಫರ್ಟಿಲೈಸರ್ ಮತ್ತು ನಾನ್ ಪೂಲ್‌ಫರ್ಟಿಲೈಸರ್ ನಮ್ಮ ಕಂಟ್ರೋಲಿಗೆ ಬಂದಿದೆ. ಇನ್ನು ಕೆಲವು ದಿವಸಗಳಲ್ಲಿ ಎಲ್ಲೆಲ್ಲಿ ಗೊಬ್ಬರ ಕಡಿಮೆಯಾಗುತ್ತದೆ ನೋಡಿ ಒಂದು ಕಡೆಗೆ ಹೆಚ್ಚಿಗೆ ಆಗಿರಬಹುದು ಇನ್ನೊಂದು ಕಡೆಗೆ ಕಡಿಮೆಯಾಗಿರಬಹುದು. ಎಷ್ಟು ಉಪಯೋಗ ಮಾಡಿದ್ದಾರೆ ನೋಡಿ, ಅದಕ್ಕೆ ಸರಿಯಾದ ರೀತಿಯಲ್ಲಿ ಹಂಚಿಕೆಯಾಗುವಂತೆ ಮಾಡುತ್ತೇವೆ. ಇಲ್ಲಿಯ ತನಕ ಗೊಬ್ಬರದ ಹೆಚ್ಚು ಉಪಯೋಗವನ್ನು ಮಾಡದೇ ಇರುವುದು ಎಂದರೆ ಬೀದರ್. ಅಲ್ಲಿಯ ಜನತೆಗೆ ಗೊಬ್ಬರ ಹಾಕುವುದು ಅಷ್ಟು ಅವರ ಮನಸ್ಸಿಗೆ ಬಂದಿರಲಿಲ್ಲ. ಈಗ ಅವರು ಗೊಬ್ಬರ ಉಪಯೋಗ ಮಾಡುವುದನ್ನು ಕಲಿತಿದ್ದಾರೆ.

ಆಗ್ರೋ ಇಂಡಸ್ಟ್ರೀಸ್ ಕಾರ್ಪೊರೇಷನ್‌ಗೆ ಹೆಚ್ಚು ಗೊಬ್ಬರವನ್ನು ಕೊಟ್ಟಿಲ್ಲ. ಹೆಚ್ಚು ಮಾಡೋಣ. ಬೇರೆ ಯಾವ ಮಾರ್ಗದಿಂದ ಫರ್ಟಿಲೈಸರ್ ಅನ್ನು ಪಡೆಯಬಹುದೋ ಅವೆಲ್ಲದರಿಂದಲೂ ಪಡೆಯುವುದಕ್ಕೆ ಪ್ರಯತ್ನ ಮಾಡುತ್ತೇನೆ. ಮಾನ್ಯ ಸದಸ್ಯರುಗಳು ನಮ್ಮ ತಾಲ್ಲೂಕಿನಲ್ಲಿ ನನ್ನ ಕ್ಷೇತ್ರದಲ್ಲಿ ಗೊಬ್ಬರ ಕಡಿಮೆಯಾಗಿದೆ ಎಂದು ನನಗೆ ಪತ್ರ ಬರೆದರೆ, ನನ್ನ ಕಡೆಯಿಂದ ಎಷ್ಟು ಸಾಧ್ಯವಿದೆಯೋ ಅಷ್ಟನ್ನು ರೀ-ಅಲಾಟ್‌ಮೆಂಟ್ ಮಾಡಲಿಕ್ಕೆ ಪ್ರಯತ್ನ ಮಾಡುತ್ತೇನೆ.

ಇನ್ನು ಡೈರೆಕ್ಟರ್ ಆಫ್ ಆಗ್ರಿಕಲ್ಚರ್ ಅವರು 70 ಸಾವಿರ ಟನ್ ಗೊಬ್ಬರವನ್ನು ಒಂದೇ ಸೊಸೈಟಿಗೆ ಕೊಟ್ಟಿದ್ದಾರೆ ಎಂದು ಮಾನ್ಯ ಸದಸ್ಯರೊಬ್ಬರು ಹೇಳಿದ್ದಾರೆ. ಅದನ್ನು ನಾನು ಪರಿಶೀಲನೆ ಮಾಡುತ್ತೇನೆ. ಇವತ್ತಿನ ದಿವಸ ಫರ್ಟಿಲೈಸರ್ ಅನ್ನು ಕೊಡುವಾಗ, ಕೆಲವು ಸೊಸೈಟಿಗಳವರು ಒಯ್ದಿದ್ದಾರೆ. ಕೆಲವು ಸೊಸೈಟಿಗಳವರು ಗೊಬ್ಬರವನ್ನು ಒಯ್ಯುವುದಿಲ್ಲ. ನಮ್ಮ ಸರ್ಕಾರದ ಏಜೆನ್ಸಿಯಿಂದ ಈ ಕೆಲಸ ನಡೆಯುತ್ತಾ ಇರುವುದರಿಂದ ಸ್ಟಾಕ್ ಇರುವ ತನಕ ಗೊಬ್ಬರವನ್ನು ಮಾರಾಟ ಮಾಡಬೇಕು. ಫೇರ್‌ಬೋರ್ಡ್ ಹಚ್ಚಿ ಫರ್ಟಿಲೈಸರ್ ಅನ್ನು ಡಿಸ್ಟ್ರಿಬ್ಯೂಟ್ ಮಾಡಬೇಕು.

ಮಾನ್ಯ ಸದಸ್ಯರನೇಕರು, ಕೆಲವು ಸೊಸೈಟಿಯವರು ಪರ್ಮಿಟ್ ಒಯ್ದು ಬೇರೆಯವರಿಗೆ ಮಾರುತ್ತಾರೆ ಎಂದು ಉಗ್ರವಾಗಿ ಹೇಳಿದರು. ಇವರ ಬಗ್ಗೆ ನಾನು ವಿಷಾದದಿಂದ ಹೇಳುತ್ತೇನೆ. ಮುಂದೆಯಾದರೂ ಇಂಥ ಫರ್ಟಿಲೈಸರ್ ಡೀಲರ್ಸ್ ನಮ್ಮ ದೇಶದಲ್ಲಿ ಇಲ್ಲದಂತೆ ಮಾಡಲು ತಮ್ಮ ಸಹಾಯ ಮತ್ತು ಸಹಕಾರವನ್ನು ನಾನು ಸ್ವಾಗತ ಮಾಡುತ್ತೇನೆ. ಮತ್ತೆ ಕೆಲವು ಸದಸ್ಯರು

ಗೊಬ್ಬರವನ್ನು ವಿತರಣೆ ಮಾಡುವಲ್ಲಿ 3 ಟೈರ್ ಸಿಸ್ಟಂ ಇದೆ, 2 ಟೈರ್ ಸಿಸ್ಟಂ ಇದೆಯೆಂದು ಹೇಳಿದರು. ಈ ಬಗ್ಗೆ ಮಾನ್ಯ ಸದಸ್ಯರು ಗವರ್ನಮೆಂಟ್ ಆರ್ಡರ್ ಓದಿದರೆ ಗೊತ್ತಾಗಬಹುದು. 3 ಟೈರ್ ಸಿಸ್ಟಂ ಮಾಡಿ ಎಂದು ನಾನು ಎಲ್ಲಿಯೂ ಹೇಳಿಲ್ಲ. ಸ್ಟೇಟ್ ಮಾರ್ಕೆಟಿಂಗ್ ಸೊಸೈಟಿಯವರು 3 ಟೈರ್ ಸಿಸ್ಟಂನಲ್ಲಿ ಗೊಬ್ಬರವನ್ನು ವಿತರಣೆ ಮಾಡುತ್ತಾರೆ. ಅದಕ್ಕೆ ನಮ್ಮದು ಏನೂ ಅಭ್ಯಂತರವಿಲ್ಲ. ಆದರೆ ಗೊಬ್ಬರ ರೈತನಿಗೆ ಮುಟ್ಟಬೇಕು. ಇದರ ಬಗ್ಗೆ ನಾವು ರೇಟನ್ನೂ ನಿಗದಿ ಮಾಡಿದ್ದೇವೆ ಸೊಸೈಟಿಗಳವರು ಅವರ ಅನುಕೂಲ ನೋಡಿಕೊಂಡು 4 ಟೈರ್ ಸಿಸ್ಟಂ ಮಾಡುತ್ತೇವೆಂದರೆ ನಾವು ಬೇಡ ಎಂದು ಹೇಳುವುದಿಲ್ಲ. ಮತ್ತೆ ಈ ಬಗ್ಗೆ ಏನಾದರೂ ಸಲಹೆಗಳು ಇದ್ದರೆ, ಈ ಹೌಸ್‌ನಲ್ಲಿಯೇ ಹೇಳಬೇಕು ಎಂದು ನಾನು ಇಷ್ಟಪಡುವುದಿಲ್ಲ. ಡಿಪಾರ್ಟ್‌ಮೆಂಟ್ ಮೆಷಿನರಿಯಲ್ಲಿ ನ್ಯೂನತೆಗಳು ಇದ್ದರೆ, ಮಂತ್ರಿಯಾದ ನಾನು ಹಾಕಿದಂಥ ಪಾಲಿಸಿಯಲ್ಲಿ ನ್ಯೂನತೆಗಳು ಇದ್ದರೆ, ಅವುಗಳನ್ನು ನನ್ನ ಗಮನಕ್ಕೆ ತಂದರೆ ನಾನು ಹೆಚ್ಚು ಸಮಯವನ್ನು ಕಳೆಯದೆ ತಿದ್ದಿಕೊಳ್ಳುತ್ತೇನೆಂದು ಹೇಳುತ್ತೇನೆ.

ಮಾನ್ಯ ಹಿರಿಯ ಸ್ನೇಹಿತರು, ಬಹಳ ಸೊಗಸಾದಂಥ ಅತ್ಯಂತ ಮಹತ್ವವಾದಂಥ ಪ್ರಶ್ನೆಯನ್ನು ಎತ್ತಿದರು. ಸ್ಟೇಟ್ ಮಾರ್ಕೆಟಿಂಗ್ ಸೊಸೈಟಿಗಳಲ್ಲಿ ಬಹಳ ದಿವಸಗಳವರೆಗೆ ಗೊಬ್ಬರ ಉಳಿದಿದ್ದು, ಅದಕ್ಕೆ ಸ್ಟೆಬಿಲಿಟಿ ಇಲ್ಲದೆ, ಸರ್ಕಾರಕ್ಕೆ ಕೋಟ್ಯಾಂತರ ರೂಪಾಯಿಗಳ ಬಾಕಿ ಉಳಿದು, ಅವರಿಂದ ಸಮರ್ಪಕವಾಗಿ ಈ ಕೆಲಸ ನಡೆದಿಲ್ಲ. ಆದ್ದರಿಂದ ಗೊಬ್ಬರದ ವಿತರಣೆಯನ್ನು ಆಗ್ರೊ ಇಂಡಸ್ಟ್ರೀಸ್ ಕಾರ್ಪೊರೇಷನ್‌ಗೆ ಒಪ್ಪಿಸಿದರು. ಅದಕ್ಕಿಂತ ಮೊದಲು ಡಿಪಾರ್ಟ್‌ಮಂಟಿನವರೇ ಗೊಬ್ಬರವನ್ನು ಖರೀದಿ ಮಾಡುವಂಥ ಯೋಚನೆ ಇತ್ತು. ನಾವು ಬಂದ ನಂತರ ಇದನ್ನು ಬರೀ ಆಗ್ರೋ ಇಂಡಸ್ಟ್ರೀಸ್ ಕಾರ್ಪೊರೇಷನ್‌ವರು ಮಾಡಿ, ಆಗ್ರೋ ಇಂಡಸ್ಟ್ರೀಸ್ ಕಾರ್ಪೊರೇಷನ್ ಮುಖಾಂತರ ಸ್ಟೇಟ್ ಮಾರ್ಕೆಟಿಂಗ್ ಸೊಸೈಟಿಗಳು ಸಹಕಾರಿ ರಂಗದೊಳಗೆ ಇರುವುದರಿಂದ, ಅವೂ ಬೆಳೆಯಬೇಕು ಎನ್ನುವ ದೃಷ್ಟಿಯಿಂದ ನಾವು ಅವರೂ ಅರ್ಧ ಭಾಗ ವಿತರಣೆ ಮಾಡಬೇಕು ಎಂದು ಮಾಡಿದ್ದೇವೆ. ಮಾರ್ಕೆಟಿಂಗ್ ಸೊಸೈಟಿ ಫೆಡರೇಷನ್ ಅನ್ನು ಪೂರ್ತಿಯಾಗಿ ತೆಗೆದುಕೊಂಡಾಗ, ನಮ್ಮ ಮನಸ್ಸಿನಲ್ಲಿ ಅವರು ಸಮರ್ಪಕವಾಗಿ ಕೆಲಸ ಮಾಡುತ್ತಾರೆ ಎಂದು ಇದ್ದರೂ ಸಹಿತ, ಸಧ್ಯದ ಪರಿಸ್ಥಿತಿಯಲ್ಲಿ ಆಗ್ರೋ ಇಂಡಸ್ಟ್ರೀಸ್ ಸಂಸ್ಥೆಗೆ, ಇದು ಅನಿವಾರ್ಯವಾಗಿ ಬಂದಿದೆ. ಆಗ್ರೋ ಇಂಡಸ್ಟ್ರೀಸ್ ಸಂಸ್ಥೆ, ತಮಗೆ ಗೊತ್ತಿರುವಂತೆ, ಇನ್ನೂ ಸ್ವಲ್ಪ ಕಾಲಾವಧಿಯ ಮೇಲೆ ಒಂದೊಂದು ಕ್ಷೇತ್ರಕ್ಕೂ ಅದರ ಒಂದು ಕೇಂದ್ರವನ್ನು ತೆಗೆಯಬೇಕು ಎಂದು ನಮ್ಮ ಉದ್ದೇಶ ಇದೆ ನಿರುದ್ಯೋಗಿ ಇಂಜಿನಿಯರ್‌ಗೆ ತರಬೇತಿ ಕೊಟ್ಟು, ಎಲ್ಲಿ ಆಗ್ರೋ ಇಂಡಸ್ಟ್ರೀಸ್ ಕೇಂದ್ರಗಳನ್ನು ತೆಗೆಯಬೇಕು ಎಂದು ಯೋಚನೆ ಮಾಡುತ್ತಿದ್ದೇನೆ. ಎಲ್ಲಿ ಕೋ-ಆಪರೇಟೀವ್ ಸೊಸೈಟಿಗಳು ಯಾವ ಕೊರತೆಯಿಂದಾಗಲೀ ಸಮರ್ಪಕವಾಗಿ ಕೆಲಸ ಮಾಡುತ್ತಿಲ್ಲವೋ ಅಂಥಕಡೆ ಆಗ್ರೋ ಇಂಡಸ್ಟ್ರೀಸ್ ಕೇಂದ್ರಗಳನ್ನು ಪ್ರಾರಂಭ ಮಾಡಬೇಕು ಎಂದು ಹೇಳಿದ್ದೇವೆಯೇ ವಿನಹ ಕೋ-ಆಪರೇಟೀವ್ ಸೊಸೈಟಿಗಳ ಕೂಡ ಕಾಂಪೀಟ್ ಮಾಡಬೇಕು ಎಂದು ನಾನು ಸಲಹೆ ಕೊಟ್ಟಿಲ್ಲ, ಕೊಡುವುದೂ ಇಲ್ಲ.

# ಕುಂಕಿ ಮತ್ತು ಪುಂಜ ಭೂಮಿ ಹಾಗೂ ಶಿವಮೊಗ್ಗದಲ್ಲಿ ವಿಶ್ವವಿದ್ಯಾನಿಲಯ ಪ್ರಾರಂಭದ ಕುರಿತು ಖಾಸಗೀ ನಿರ್ಣಯದ ಮೇಲೆ ಚರ್ಚೆ

ಕುಂಕಿ ಜಮೀನು ಸರ್ಕಾರಕ್ಕೆ ಸೇರಿದ್ದು. ಆದರೆ ಇದರಲ್ಲಿರತಕ್ಕ ಸೊಪ್ಪನ್ನು ಉಪಯೋಗಿಸುವುದಕ್ಕೆ ಅವಕಾಶ ಇದೆ. ಆದರೆ ಅವನಿಗೆ ಆ ಭೂಮಿಯ ಹಕ್ಕು ಇಲ್ಲ. ಈ ಸವಲತ್ತನ್ನು ಮುಂದೆ ಒದಗಿಸಿಕೊಡಬೇಕಾದ್ದು ಅಗತ್ಯ. ಜಮೀನನ್ನು ಅವರಿಗೆ ಖಾಯಂ ಮಾಡಿಕೊಡಬೇಕೆಂದು ಶ್ರೀಮಾನ್ ಕಕ್ಕಿಲ್ಲಾಯ ಅವರು ಹೇಳಿದ್ದಾರೆ ಅದನ್ನು ರೈತರಿಗೆ ಖಾಯಂಗೊಳಿಸದ್ದಿರೂ ಕೂಡ ಆ ಸವಲತ್ತನ್ನು ಮುಂದುವರಿಸುವುದಕ್ಕೆ ಸಾಧ್ಯ. ಆ ರೀತಿ ಸರ್ಕಾರದ ಆಲೋಚನೆ ಇದೆ. ಪುಂಜ ಭೂಮಿಯಲ್ಲಿ ವ್ಯವಸಾಯ ಚೆನ್ನಾಗಿ ಆಗುವುದಿಲ್ಲ ಎನ್ನುವ ದೃಷ್ಟಿ ಇದೆ.

ಇನ್ನೊಂದು ವಿಷಯ. ಮಾನ್ಯ ಸದಸ್ಯರು ಪುಂಜ ಭೂಮಿ ಮತ್ತು ಕುಂಕಿ ಭೂಮಿಯಲ್ಲಿ ಮನೆ ಕಟ್ಟಿದ್ದರೆ ಗತಿ ಏನು ಎಂದು ಕೇಳಿದರು. ಸರ್ಕಾರ ಭೂಮಿಯಲ್ಲಿ ಕಂಡೋ ಕಾಣದೆಯೋ ಮನೆಯನ್ನು ಕಟ್ಟಿದ್ದರೆ ಅದನ್ನು ಖಾಯಂ ಮಾಡಬೇಕು ಎಂದು ಮಾನ್ಯ ಸದಸ್ಯರು ಹೇಳಿದ್ದಾರೆ. ಪುಂಜ ಭೂಮಿಯಲ್ಲಿ ಮನೆಯನ್ನು ಕಟ್ಟಿದ್ದರೆ ಅಂಥಾದ್ದರ ಬಗ್ಗೆ ಗೇಣಿದಾರರಿಗೆ ಸೇರುವ ಹಾಗೆ ಲಗತ್ತು ಮಾಡುವಂತೆ ಮಾಡುವಾಗ ಈ ಸಂಬಂಧದಲ್ಲಿ ಒಂದು ತಿದ್ದುಪಡಿಯನ್ನು ತಂದಾಗ ಈ ಸಮಸ್ಯೆಯು ಬಗೆಹರಿಯುತ್ತದೆ. ಕುಂಕಿ ಭೂಮಿಯಲ್ಲಿ ಮನೆಯನ್ನು ಕಟ್ಟಿದ್ದರೆ ಅಂಥಾದ್ದರ ಬಗ್ಗೆ ಗೇಣಿದಾರರಿಗೆ ಸೇರುವ ಹಾಗೆ ಲಗತ್ತು ಮಾಡುವಂತೆ ಮಾಡುವಾಗ ಈ ಸಂಬಂಧದಲ್ಲಿ ಒಂದು ತಿದ್ದುಪಡಿಯನ್ನು ತಂದಾಗ ಈ ಸಮಸ್ಯೆಯು ಬಗೆಹರಿಯುತ್ತದೆ. ಕುಂಕಿ ಭೂಮಿಯಲ್ಲಿ ಮನೆಯನ್ನು ಕಟ್ಟಿದ್ದರೆ ಅದನ್ನು ಹೇಗೆ ಮಾಡಬೇಕು ಎನ್ನುವುದರ ಬಗ್ಗೆ ಹೇಳುವುದಾದರೆ ಅದನ್ನೂ ಕೂಡ ಸರ್ಕಾರಕ್ಕೆ ಸೇರಿಸದೆ ಅವನಿಗೆ ಸವಲತ್ತನ್ನು ಕೊಡುವ ದೃಷ್ಟಿಯಿಂದ ಯಾವ ರೀತಿ ಮಾಡಬೇಕೆಂಬ ಬಗ್ಗೆ ಯೋಚನೆ ಮಾಡಿ ಅದನ್ನು ಗೇಣಿದಾರನಿಗೆ ಕೊಡುವ ರೀತಿಯಲ್ಲಿ ಆಲೋಚನೆ ಮಾಡುತ್ತೇನೆ.

ಆ ಮೇಲೆ ಶ್ರೀಮತಿ ರಾಧಾಭಟ್ ಅವರು ಹೇಳಿದರು, ದ್ರವ ಫಸಲು ತೆಂಗು, ಮಾವು ಬೆಳೆದ ಮರಗಳು ಇದ್ದರೆ ಆ ಭೂಮಿಯನ್ನು ಆತನಿಗೆ ಖಾಯಂ ಮಾಡಬೇಕು ಎಂದು ಹೇಳಿದ್ದಾರೆ. ಈ ಬಗ್ಗೆ ನಿನ್ನೆಯ ದಿವಸ ಚರ್ಚೆಯಾಗಿ ನಾನು ಇದಕ್ಕೆ ಉತ್ತರವನ್ನು ಈಗಾಗಲೇ ಹೇಳಿದ್ದೇನೆ. ರೈತ ಸರ್ಕಾರಕ್ಕೆ ಸೇರಿದ ತನ್ನ ಜಮೀನಿನ ಪಕ್ಕದಲ್ಲಿದ್ದ ಜಮೀನಿನಲ್ಲಿ ವ್ಯವಸಾಯದ ಬಾವಿಯನ್ನು ತೆಗೆದಿದ್ದರೆ, ದ್ರವಫಲವನ್ನು ಬೆಳೆದಿದ್ದರೆ, ಮನೆ ಕಟ್ಟಿದ್ದರೆ ಅಂಥವರಿಗೆ ವಿನಾಯ್ತಿಯನ್ನು ಕೊಡುವುದು ಸರ್ಕಾರದ ಆಲೋಚನೆಯಲ್ಲಿದೆ ಎಂದು ನಾನು ಈಗಾಗಲೇ ತಿಳಿಸಿದ್ದೇನೆ. ಪ್ರತಿಯೊಂದನ್ನೂ ನಾವು ತರತಕ್ಕ ತಿದ್ದುಪಡಿ ಚರ್ಚೆಯಾಗುವಾಗ ವಿವರವಾಗಿ ಈ ಸಭೆಗೆ ತಿಳಿಸುವುದಕ್ಕೆ ಮಾನ್ಯ ಸದಸ್ಯರಿಗೆ ಅವಕಾಶ ಇದೆ. ಆಗ ಪೂರ್ಣವಾಗಿ ಇದಕ್ಕೆಲ್ಲಾ ಸಮಜಾಯಿಸಿ ಕೊಡುವುದಕ್ಕೆ ಅವಕಾಶ ಇದೆ. ಆದ್ದರಿಂದ ಈಗ ನಿರ್ಣಯ ಇರುವ ಹಾಗೆ ಒಪ್ಪಿಕೊಳ್ಳುವುದಕ್ಕಾಗುವುದಿಲ್ಲ. ಈ ಭೂಮಿಯನ್ನು ದುರ್ಬಲ ವರ್ಗದವರಿಗೆ, ಹರಿಜನ ಗಿರಿಜನರಿಗೆ ಭೂಮಿ ಇಲ್ಲದವರಿಗೆ

---

ವಿಸನದಿ: 8-6-1977

ಕ್ಕ ಆಲೋಚನೆ ಸರ್ಕಾರಕ್ಕೆ ಇರುವುದರಿಂದ ಈ ನಿರ್ಣಯವನ್ನು ಮಾನ್ಯ ಸದಸ್ಯರು ಸು ತೆಗೆದುಕೊಳ್ಳಬೇಕು. ಈ ನಿರ್ಣಯು ಇರುವ ಹಾಗೆಯೇ ಇದನ್ನು ಪ್ಪಕೂಳ್ಳುವುದಕ್ಕಾಗುವುದಿಲ್ಲ ಎಂದು ನಾನು ಅರಿಕೆ ಮಾಡಿಕೊಳ್ಳುತ್ತೇನೆ.

ಆಹಾರ ಮತ್ತು ಅರಣ್ಯ ಶಾಖೆಗಳ ಮಂತ್ರಿಗಳು- ಮಾನ್ಯ ವಿದ್ಯಾಶಾಖೆಯ ಮಂತ್ರಿಗಳ ಪರವಾಗಿ ನಾನು ಈ ನಿರ್ಣಯದ ಮೇಲೆ ಮಾತನಾಡುತ್ತೇನೆ. ಮಾನ್ಯ ಸಭಾಧ್ಯಕ್ಷಿಣಿಯವರೇ, ಶಿವಮೊಗ್ಗ ಜಿಲ್ಲೆಯಲ್ಲಿ ವಿಶ್ವವಿದ್ಯಾಲಯ ಪ್ರಾರಂಭ ಮಾಡುವುದಕ್ಕೆ ಮತ್ತು ಅದಕ್ಕೆ ಹೆಸರಿಡುವ ಬಗ್ಗೆ ಮಾನ್ಯ ಸದಸ್ಯರು ಮಾತನಾಡುತ್ತಿದ್ದಾರೆ. ಅನೇಕ ವರ್ಷಗಳಿಂದ ಕರ್ನಾಟಕ ರಾಜ್ಯ ಸರ್ಕಾರದ ಎದುರಿಗೆ ಈ ವಿಷಯ ಇದೆ. ಹೊಸದಾಗಿ ವಿಶ್ವವಿದ್ಯಾನಿಲಯಗಳನ್ನು ಮಾಡಬೇಕಾದರೆ ಯೂನಿವರ್ಸಿಟಿ ಗ್ರಾಂಟ್ ಕಮಿಷನ್ನಿನವರು ಒಪ್ಪಿಗೆ ಕೊಡಬೇಕು. ಆದರೆ ಹೊಸದಾಗಿ ಪ್ರಾರಂಭ ಮಾಡುವುದಕ್ಕೆ ಯು.ಜಿ.ಸಿ. ಒಪ್ಪಿಗೆ ಇತ್ತಿಲ್ಲ ಎಂಬುದು ಮಾನ್ಯ ಸದಸ್ಯರಿಗೆ ಗೊತ್ತಿದೆ. ಈಗಾಗಲೇ ಯೂನಿವರ್ಸಿಟಿ ಬಗ್ಗೆ ಅನೇಕ ರೀತಿಯ ಸಲಹೆಗಳನ್ನು ಕರ್ನಾಟಕ ರಾಜ್ಯ ಯೂನಿವರ್ಸಿಟಿ ಗ್ರಾಂಟ್ ಕಮಿಷನ್ನಿಗೆ ಕಳಿಸಿದರೂ ಸಹ ಅದಕ್ಕೆ ಮನ್ನಣೆ ದೊರೆತಿಲ್ಲ. ಅದೆಲ್ಲಾ ಪೂರ್ತಿಯಾದ ನಂತರ ಶಿವಮೊಗ್ಗದಲ್ಲಿ ವಿಶ್ವವಿದ್ಯಾನಿಲಯವನ್ನು ಸ್ಥಾಪನೆ ಮಾಡುವ ಬಗ್ಗೆ ಸ್ಥಳ ಪರಿಶೀಲನೆ ಮಾಡಿ ಯೋಗ್ಯವಾದ ಕಾರ್ಯಕ್ರಮವನ್ನು ತೆಗೆದುಕೊಳ್ಳುವ ಬಗ್ಗೆ ಸಮಯ ಸಂದರ್ಭಗಳಿಗನುಸಾರವಾಗಿ ವಿಚಾರ ಮಾಡೋಣ ಮತ್ತು ಯೂನಿವರ್ಸಿಟಿ ಮಾಡಿದ ನಂತರ ಅದಕ್ಕೆ ಹೆಸರು ಇಡುವ ಬಗ್ಗೆ ಆಲೋಚನೆ ಮಾಡೋಣ. ಮಾನ್ಯ ಸದಸ್ಯರ ಅಭಿಪ್ರಾಯ ಸೂಕ್ತವಾಗಿದೆ. ಶಿವಮೊಗ್ಗ ಜಿಲ್ಲೆಯಲ್ಲಿ ವಿಶ್ವವಿದ್ಯಾನಿಲಯ ಸ್ಥಾಪನೆ ಮಾಡುವ ಬಗ್ಗೆ ಅವರ ಆತುರತೆ, ಕಳಕಳಿ ಸರ್ಕಾರ ಅರಿತಿದೆ. ಆದರೂ ಸದ್ಯಕ್ಕೆ ಅಲ್ಲಿ ಯೂನಿವರ್ಸಿಟಿ ಪ್ರಾರಂಭ ಮಾಡುವುದು ಸಾಧ್ಯವಾಗಿಲ್ಲದಿರುವುದರಿಂದ ಮಾನ್ಯ ಸದಸ್ಯರು ಇದನ್ನು ಗಮನಿಸಿ ತಮ್ಮ ಠರಾವನ್ನು ವಾಪಸ್ ಪಡೆಯಬೇಕೆಂದು ಪ್ರಾರ್ಥನೆ ಮಾಡಿಕೊಳ್ಳುತ್ತೇನೆ.

# ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯ ಬೇಡಿ ಮೇಲಿನ ಚರ್ಚೆ

ನಮ್ಮ ಕರ್ನಾಟಕದಲ್ಲಿ ವಿಶೇಷ ನೈಸರ್ಗಿಕ ಸಂಪತ್ತು ಇದೆ. ಒಂದು ಕಡೆ ಬರ ಬಂ ಇನ್ನೊಂದು ಕಡೆ ಹೆಚ್ಚಾಗಿ ಧಾನ್ಯಗಳನ್ನು ಬೆಳೆಯುತ್ತಿದ್ದಾರೆ. ಮತ್ತು ಬೆಳೆದು ಕೊಡುತ್ತೇವೆ ಎಂದು ಎದೆ ತಟ್ಟಿ ಹೇಳುವಂಥ ರೈತರು ನಮ್ಮಲ್ಲಿದ್ದಾರೆ. ಅದಕ್ಕಾಗಿ ನಾವು ಇದ್ದ ಆಹಾರವನ್ನು ಬಹಳ ಮಟ್ಟಿಗೆ ಬಳಸೋಣ. ಇವತ್ತಿನ ದಿವಸ ಆಹಾರ ಸಂಗ್ರಹಣೆ ವಿಷಯದಲ್ಲಿ ಹೆಚ್ಚು ಸೂಕ್ತವಾದ ಸಲಹೆಗಳನ್ನು ಅನೇಕ ಸದಸ್ಯರು ಹೇಳಿದ್ದಾರೆ. ನಮ್ಮ ಸಂಗ್ರಹಣೆ ಕಾಗದದಲ್ಲಿ ಹೆಚ್ಚು ಕಾಣುತ್ತದೆ. ನಿಜವಾಗಿ ಅಷ್ಟು ಇದೆಯೋ ಇಲ್ಲವೋ ಎನ್ನುವ ಶಂಕೆಯನ್ನು ಮಾನ್ಯ ಸದಸ್ಯರು ವ್ಯಕ್ತ ಮಾಡುವುದಕ್ಕೆ ಮೊದಲೇ ನಾನು ಇರುವುದನ್ನು ಅನೇಕ ರೀತಿಯಿಂದ ಎನ್‌ಕ್ವಯರಿ ಮಾಡಿಸಿದ್ದೇನೆ. ಅದರಿಂದ ಸ್ಟಾಕ್ ಸರಿಯಾಗಿದೆ ಎನ್ನುವುದು ಗೊತ್ತಾಗಿದೆ. ಆದರೆ ಇದು ನೂರಕ್ಕೆ ನೂರರಷ್ಟು ಸತ್ಯ ಎಂದು ಹೇಳುವುದಕ್ಕೆ ನಾನು ಹೋಗುವುದಿಲ್ಲ. ಮಾನ್ಯ ಸದಸ್ಯರಿಗೆ ನಮ್ಮ ಆಹಾರ ಸಂಗ್ರಹಣೆ ವಿಷಯದಲ್ಲಿ ಅಪನಂಬಿಕೆ ಕಂಡುಬಂದರೆ. ಎಲ್ಲಾ ದಾಖಲೆಗಳನ್ನು ಸರಿಯಾಗಿ ಉಪಯೋಗ ಮಾಡಿ ವರದಿಯನ್ನು ಸದನದ ಮುಂದೆ ಇಡುವುದಕ್ಕೆ ಇಷ್ಟಪಡುತ್ತೇನೆ. ಆದರೆ ಮಾನ್ಯ ಸದಸ್ಯರುಗಳೂ ನಮ್ಮ ಸಂಕಷ್ಟವನ್ನು ಅರಿಯಬೇಕು. ಆಹಾರ ಇಲಾಖೆಯ ಕೆಲಸಗಳೂ ಹೆಚ್ಚಿವೆ. ನಮಗೆ ಅಭಾವವಾಗಿರುವುದು ಗೋಡೌನುಗಳು. ಶಿವಮೊಗ್ಗದಲ್ಲಿ ತಯಾರಾದಂಥ ಎರಡು ಗೋಡೌನುಗಳು ನಮ್ಮಲ್ಲಿವೆ. ಆದರೆ ಇದಕ್ಕಾಗಿ ನಾವು ಎರಡನೆಯವರನ್ನು ಹೆಚ್ಚು ನಂಬಬೇಕಾಗಿದೆ.

ನಾನು ಅದನ್ನು ಸರಿ ಎಂದು ಹೇಳುವುದಿಲ್ಲ. ಕೋ-ಆಪರೇಟಿವ್ ಸೊಸೈಟಿಯವರಿಗೆ ಸ್ಟಾಕನ್ನು ಇಡಲು ಸ್ಥಳ ಇಲ್ಲ ಎಂದು ತಿಳಿದು ಕೆಲವು ಸಂದರ್ಭಗಳಲ್ಲಿ ಗೋಡೌನುಗಳನ್ನು ಟೆಂಪರರಿಯಾಗಿ ಉಪಯೋಗ ಮಾಡಿದ್ದಾರೆ. ಇದನ್ನೂ ಕೂಡ ನಾನು ಒಪ್ಪುವುದಿಲ್ಲ. ಕರ್ನಾಟಕ ರಾಜ್ಯದಲ್ಲಿ ತಾಲ್ಲೂಕು ಮಾರ್ಕೆಟಿಂಗ್ ಸೊಸೈಟಿಗಳಲ್ಲಿರತಕ್ಕ ಗೋಡೌನುಗಳು ಸರ್ಕಾರದಿಂದಲೇ ಉಪಯೋಗವಾಗಬೇಕು. ಈ ದೃಷ್ಟಿಯಿಂದ ತಾಲ್ಲೂಕು ಮಾರ್ಕೆಟಿಂಗ್ ಸೊಸೈಟಿಗಳ ನಮ್ಮ ಏಜೆನ್ಸಿಯವರು ಎಲ್ಲೆಲ್ಲಿ ಮುಂದೆ ಬರುತ್ತಾರೋ ಅಲ್ಲಿ ಗೋಡೌನುಗಳನ್ನು ಕೊಟ್ಟಿದ್ದೇವೆ.

ಆಹಾರ ವಿತರಣೆಯ ವಿಷಯದಲ್ಲಿ ಮಾನ್ಯ ಸದಸ್ಯರನೇಕರು ಹೇಳಿದ್ದಾರೆ. ವ್ಯಕ್ತಿಗತವಾಗಿ ಆಹಾರ ಧಾನ್ಯವನ್ನು ಹಂಚುವುದಕ್ಕೆ ಅವಕಾಶವಿಲ್ಲ. ವ್ಯಕ್ತಿಗತವಾಗಿ ಆಹಾರ ಧಾನ್ಯವನ್ನು ಕೊಡುವ ಉದ್ದೇಶ ಸರ್ಕಾರಕ್ಕಿಲ್ಲ ಈಗಾಗಲೇ ಸರ್ಕಾರದವರು ಹೊರಡಿಸಿರುವಂಥ ಆಜ್ಞೆಯನ್ನು ತಾವುಗಳು ನೋಡಿರಬಹುದು. ಮೊದಲನೆಯದಾಗಿ, ನಾವು ಕೋ-ಆಪರೇಟೀವ್ ಸೊಸೈಟಿಗಳವರಿಗೆ ಪ್ರಾಶಸ್ತ್ಯ ಕೊಡುತ್ತೇವೆ. ಕೋ-ಆಪರೇಟಿವ್ ಸೊಸೈಟಿಗಳವರು ಮುಂದೆ ಬರಲು ಸಾಧ್ಯವಿಲ್ಲದಾಗ ಅನಿವಾರ್ಯವಾಗಿ ನಮ್ಮ ರಿಜಿಸ್ಟಾರ್ ಅವರು ವಿಲೇಜ್ ಪಂಚಾಯತಿಯವರಿಗೆ ಕೊಡುವಂತೆ ತಿಳಿಸಿದ್ದಾರೆ. ಅವರು ಮುಂದೆ ಬರುವುದಿಲ್ಲ ಎಂದರೆ ಯಾವುದಾದರೂ ಗ್ರೂಫ್ ಆಫ್ ಪರ್ಸನ್ಸ್‌ಗೆ ಮತ್ತು ರಿಜಿಸ್ಟರ್ಡ್ ಅಸೋಸಿಯೇಷನ್ಸ್‌ಗೆ ಕೊಡಬೇಕು ಎಂದು ಹೇಳಿದ್ದಾರೆ. ಅವರೂ ಇದಕ್ಕೆ ಮುಂದೆ ಬರದಿದ್ದರೆ ಅಂಥ ಪ್ರಸಂಗದಲ್ಲಿ ಇಂಡಿವಿಜುಯಲ್ಸ್‌ಗೆ ಕೊಡಬೇಕು ಎನ್ನುವುದು ಇದೆ. ನಾವು ಯಾವ ಕಾನೂನನ್ನಾಗಲೀ ಬದಲಾವಣೆ ಮಾಡುವಂಥ ಅಧಿಕಾರವನ್ನು ಈಗ

ವಿಸನದಿ: 14-6-1977

ಹಾಕಿಕೊಂಡಿರತಕ್ಕ ಪಾಲಿಸಿಯಲ್ಲಿ ಇಟ್ಟುಕೊಂಡಿಲ್ಲ. ಮೊದಲಿನಿಂದಲೂ ಬಂದಂಥ ಇಂಡಿವಿಜುಯಲ್ಸ್ ಕೆಲವರು ಇದ್ದಾರೆ. ಇವರು 1969 ರಿಂದಲೂ ಬಂದಿದ್ದಾರೆ. ಇವರಲ್ಲಿ ಕೆಲವರನ್ನು ನಾವು ತೆಗೆದು ಬಿಟ್ಟಿದ್ದೆವು. ಅವರು ಹೈಕೋರ್ಟಿಗೆ ಅಪೀಲು ಹೋದರು. ಪುನಃ ಅವರಿಗೆ ವಿತರಣೆಯನ್ನು ಕೊಡಬೇಕು ಎಂದು ಹೈಕೋರ್ಟಿನವರ ವಾದವಾಗಿದೆ. ಹೀಗಾದರೆ ನಾವು ಏನು ಮಾಡಬೇಕು ಎಂದು ನಾನು ಸೌಜನ್ಯದಿಂದ ಮಾನ್ಯ ಸದಸ್ಯರನ್ನು ಕೇಳುವುದಕ್ಕೆ ಅಪೇಕ್ಷೆಪಡುತ್ತೇನೆ. ನಮ್ಮ ಸ್ನೇಹಿತರು ಎಲ್ಲರೂ ಸಂಗ್ರಹಣೆ ವಿಷಯದಲ್ಲಿ ಹೇಳಿರುವುದನ್ನು ನಾನು ಗಮನಿಸಿದ್ದೇನೆ. ಪ್ರಕ್ಯೂರ್‌ಮೆಂಟನ್ನು ಬಂದ್ ಮಾಡುವಂಥ ಉದ್ದೇಶ ಸರ್ಕಾರಕ್ಕೆ ಇಲ್ಲ. ಮಾನ್ಯ ತಿಮ್ಮಪ್ಪನವರು ಮಾತನಾಡುತ್ತಾ ಬಹಳ ಉಗ್ರವಾಗಿ ಇವತ್ತಿನ ದಿವಸ ಲೆವಿ ಪ್ರೆಕ್ಯೂರ್‌ಮೆಂಟ್ ಮಾಡಲಿಕ್ಕೆ ಹತ್ತಿದ್ದಾರೆ ಎಂದು ಹೇಳಿದರು. ಎಲ್ಲಿ ಕಾಳುಕಡ್ಡಿಗಳು ಇಲ್ಲ, ಎಲ್ಲಿ ಬರಗಾಲ ಇದೆ ಅಂಥಾಕಡೆ ತೊಂದರೆ ಕೊಟ್ಟು ಕಾಳು ತೆಗೆದುಕೊಳ್ಳುವುದರ ಸಲುವಾಗಿ ಖಟ್ಲೆ ಹಾಕಲಿಕ್ಕೆ ಹೋಗಬೇಡ್ರಿ ಎಂದು ನಾವು ಹೇಳಿದ್ದೇವೆ. ನೀರಾವರಿ ಯೋಜನೆಯಿಂದ ಆಹಾರ ಧಾನ್ಯ ಬೆಳೆಯತಕ್ಕ ಕಡೆ ಲೆವಿಯನ್ನು ಬಂದ್ ಮಾಡಬೇಕು ಎಂದಲ್ಲ. ವಿತರಣೆ ಮಾಡುವಾಗ ಕೆಲವು ಅಧಿಕಾರಿಗಳು, ಜನತೆಯ ಹತ್ತಿರ ಇರತಕ್ಕ ಅಧಿಕಾರಿಗಳು ಅವರ ಅಭಿಪ್ರಾಯವನ್ನು ಬದಲಾವಣೆ ಮಾಡಿಕೊಂಡು ಕೆಲಸ ಮಾಡುವುದರಿಂದ ಕೆಲವು ಕಡೆ ವಿಪರ್ಯಾಸವಾಗುತ್ತದೆ. ಶ್ರೀಮಾನ್ ತಿಮ್ಮಪ್ಪನವರು ಗಮನ ಕೊಡಲೆಂದು 13ನೇ ಮೇ 1977 ರಲ್ಲಿ ಕೊಟ್ಟ ಆಜ್ಞೆಯ ಒಂದೇ ಒಂದು ವಾಕ್ಯವನ್ನು ನಾನಿಲ್ಲಿ ಓದುತ್ತೇನೆ.

"ಭತ್ತವನ್ನು ಸಂಗ್ರಹಿಸುವಾಗ ಯಾವುದೇ ರೀತಿಯ ಅಹಿತಕರವಾದ ತೊಂದರೆಗಳು ಸಂಗ್ರಹಣೆ ಕಾಲದಲ್ಲಿ ಆಗದಂತೆ ಅಗತ್ಯ ಕ್ರಮಗಳನ್ನು ದಯವಿಟ್ಟು ತೆಗೆದುಕೊಳ್ಳಬೇಕು. ಇದು ಒಂದು ಸರ್ಕ್ಯುಲರ್, ಇದಕ್ಕಿಂತ ಹೆಚ್ಚನ್ನು ನಾವು ಏನನ್ನೂ ಹೇಳಿಲ್ಲ. ಇವತ್ತು ಜನರು ಲೆವಿ ಕೊಡಲಿಲ್ಲ ಎಂದರೆ ನಮ್ಮಲ್ಲಿ ಕಾಳು ಇರುವುದಿಲ್ಲ, ಲೆವಿಯನ್ನು ಬಂದ್ ಮಾಡಿ ಎಂದು ಒಂದು ಹೊಸ ಪರಂಪರೆಯನ್ನು ಹಾಕಿದರೆ ನಮ್ಮದೇನೂ ಇಲ್ಲ. ಆದರೆ ಮುಂದೆ ಆಹಾರ ಸಾಮಗ್ರಿಗಳನ್ನು ಒದಗಿಸುವುದು ತೊಂದರೆಯಾಗುತ್ತದೆ. ಆಹಾರ ಧಾನ್ಯವನ್ನು ಹೆಚ್ಚು ಹೆಚ್ಚಾಗಿ ರೈತರು ಬೆಳೆಯಬೇಕು ಎಂದು ನಾನು ಆಶೆ ಮಾಡುತ್ತೇನೆ. ಆದರೆ ನಮಗೆ ಏನಾಗುತ್ತದೆಂದರೆ, ರೈಸ್ ಮಿಲ್ ಆಕ್ಟ ಪ್ರಕಾರ ಅಕ್ಕಿಯನ್ನು 5 ಪರ್ಸೆಂಟ್‌ಗಿಂತ ಹೆಚ್ಚು ಪಾಲಿಷ್ ಮಾಡಲಿಕ್ಕೆ ಬರುವುದಿಲ್ಲ ಎನ್ನುವ ನಿಯಮ ಇರುತ್ತದೆ. ಇದರಿಂದ ನಮ್ಮ ಅಕ್ಕಿ ಕೆಂಪಾಗಿಯೇ ಉಳಿಯುತ್ತದೆ. ಕಾನೂನು ಮೀರಿ ನಡೆಯುವವರ ಅಕ್ಕಿ ಬಿಳಿ ಆಗುತ್ತದೆ. ಈ ನಿಯಮ ಬದಲಾವಣೆಗೆ ಕೇಂದ್ರ ಸರ್ಕಾರಕ್ಕೆ ನಾವು ಬರೆಯಬೇಕಾಗಿದೆ. ಮಾನ್ಯ ಸ್ನೇಹಿತರು ಎಲ್ಲರೂ ಸೇರಿ ಇದಕ್ಕೆ ಒತ್ತಾಯ ಮಾಡಬೇಕು ಮತ್ತು ಎಲ್ಲಾರಿಗೂ ಒಂದೇ ತರಹದ ಅಕ್ಕಿಯನ್ನು ಪಡೆಯಲಿಕ್ಕೆ ಅನುಕೂಲ ಮಾಡಲಿ ಎಂದು ನಾನು ಆಶೆ ಮಾಡುತ್ತೇನೆ.

ಇನ್ನು ಮಾನ್ಯ ಸದಸ್ಯರುಗಳು ಅನೇಕ ಕಡೆಗಳಲ್ಲಿ ರೇಷನ್ ಅಂಗಡಿಗಳಲ್ಲಿ ಸರಿಯಾಗಿ ಸಕ್ಕರೆ ವಿತರಣೆಯಾಗುವುದಿಲ್ಲ. ಅನ್ನುವ ಮಾತನ್ನು ಹೇಳಿದ್ದಾರೆ. ಅದು ನಿಜ. ಕೆಲವು ರೇಷನ್ ಅಂಗಡಿಗಳಲ್ಲಿ ಸರಿಯಾಗಿ ಸಕ್ಕರೆ ವಿತರಣೆಯಾಗುತ್ತಾ ಇಲ್ಲ ಎನ್ನುವ ದೂರು ಬರುತ್ತಾ ಇದೆ. ಆದುದರಿಂದ ನಾನು ಈ ವಿಚಾರದಲ್ಲಿ ಈಗಾಗಲೇ ಡೆಪ್ಯೂಟಿ ಕಮೀಷನರಿಗೆ ತಿಳಿಸಿದ್ದೇನೆ.

ಏನೆಂದರೆ ನೀವು ಜಿಲ್ಲೆ ಜಿಲ್ಲೆಗೆ ಟೂರ್ ಹೋಗುತ್ತಿರೋ ಅಲ್ಲಲ್ಲಿ ಪ್ರತಿ ಹಳ್ಳಿಗೂ ಹೋಗಿ ಅವರು ಸಕ್ಕರೆಯನ್ನು ವಿತರಣೆ ಮಾಡುತ್ತಿದ್ದಾರೆಯೇ ಇಲ್ಲವೇ ಅಂತ ಕೇಳಿರಿ. ಎಲ್ಲಿಯಾದರೂ ತಪ್ಪು ನಡೆದಿದ್ದರೆ ಎಲ್ಲಿಯಾದರೂ ವಿತರಣೆ ಬಗ್ಗೆ ಲೋಪದೋಷಗಳು ಇದ್ದರೆ ಅಂಥಾವರ ಲೈಸನ್ಸ್ ಅನ್ನು ರದ್ದು ಮಾಡುವುದಕ್ಕೆ ತಕ್ಕ ಕಾರ್ಯಕ್ರಮವನ್ನು ತೆಗೆದುಕೊಳ್ಳಿ ಎಂದು ಹೇಳಿದ್ದೇನೆ ಎಂದು ಈ ಸಂದರ್ಭದಲ್ಲಿ ನಾನು ಹೇಳುವುದಕ್ಕೆ ಬಯಸುತ್ತೇನೆ.

ಈಗ ಕಂಟ್ರೋಲ್ ಕ್ಲಾತ್ ಏನು ಇದೆ. ಅದನ್ನು ಎಲ್ಲರಿಗೂ ವಿತರಣೆ ಮಾಡುವುದಕ್ಕೆ ಕೊಟ್ಟಿಲ್ಲ ಅಂತ ಮಾನ್ಯ ಸದಸ್ಯರು ಹೇಳುವುದು ನಿಜ. ಏತಕ್ಕೆಂದರೆ ಅದು ಜನತಾ ಬಜಾರ್ ಮುಖಾಂತರ ವಿತರಣೆಯಾಗುತ್ತದೆ ನಾನು ಈ ಬಗ್ಗೆ ಹೇಳುವುದು ಇಷ್ಟೆ. ಹಳ್ಳಿಯವರಲ್ಲಿ ಯಾರಾದರೂ ಇದನ್ನು ವಯ್ಯಲು ಮುಂದೆ ಬಂದರೆ ಅವರಿಗೂ ಕೊಡಲು ನನ್ನ ಅಭ್ಯಂತರವೇನೂ ಇಲ್ಲ. ಆದರೆ ಅವರುಗಳು ಇದನ್ನು ವಯ್ಯಲು ಮುಂದೆ ಬಂದಿಲ್ಲ ಎಂದು ಹೇಳುತ್ತಾರೆ ಆದುದರಿಂದ ನಾನು ಹೇಳುವುದು ಇದನ್ನು ವಯ್ಯಲು ಮಾರಾಟ ಮಾಡುವ ಅಂಗಡಿಗಳು ಮುಂದು ಬರಲಿ ಎಂದು ನಾನು ಈ ಸಂದರ್ಭದಲ್ಲಿ ಹೇಳಬಯಸುತ್ತೇನೆ.

ಮಾನ್ಯ ಸಭಾಧ್ಯಕ್ಷಿಣಿಯವರೇ, ಸುಮಾರು 3 ವರ್ಷಗಳ ಈ ಸದನದ 2 ಭಾಗ ಮಾನ್ಯ ಸದಸ್ಯರು ಆಹಾರ ಮತ್ತು ಅರಣ್ಯ ಇಲಾಖೆಗಳ ಬಗ್ಗೆ ಸಾಕಷ್ಟು ಸಲಹೆಗಳನ್ನು ಕೊಟ್ಟಿದ್ದಾರೆ. ಹಿಂದಿನ ಹಾಗೂ ಈಗಿನ ಅವರ ವಾಖ್ಯಾನವನ್ನು ಗಮನಿಸಿದರೆ ಟೀಕೆಗಿಂತಲೂ ಹೆಚ್ಚು ಸಕ್ರಿಯವಾದ ಸಲಹೆಗಳನ್ನು ಅವರು ಮಾಡಿದ್ದಾರೆ. ಆದಕ್ಕಾಗಿ ನಾನು ಉಭಯ ಪಕ್ಷದ ಸದಸ್ಯರಿಗೂ ಅಭಿನಂದನೆಗಳನ್ನು ಸಲ್ಲಿಸುತ್ತಿದ್ದೇನೆ. ಅರಣ್ಯ ಮತ್ತು ಆಹಾರ, ಇವೆರಡು ಖಾತೆಗಳಲ್ಲಿ ಆ ಪಕ್ಷ ಈ ಪಕ್ಷ ಅನ್ನುವಂತಹ ಸಮಸ್ಯೆ ಬರಲಾರದು. ಇವೆರಡೂ ಜನತೆಗೆ ಉಪಯುಕ್ತವಾದ ಖಾತೆಗಳಾಗಿರುವುದರಿಂದ ಯಾರೇ ಸಲಹೆ ಮಾಡಿದರೂ ಆ ಸಲಹೆಯನ್ನು ಕ್ರಿಯಾತ್ಮಕವಾದ ದೃಷ್ಟಿಯಿಂದ ಪರಿಶೀಲಿಸುವುದು ನಮ್ಮ ಪ್ರಮುಖವಾದ ಕರ್ತವ್ಯ. ನಾನು ಮೊದಲನೆಯದಾಗಿ ಆಹಾರ ಶಾಖೆಯ ಬಗ್ಗೆ ಉತ್ತರವನ್ನು ಹೇಳಲಿಕ್ಕೆ ಇಷ್ಟಪಡುತ್ತೇನೆ. ಆಹಾರ ಮತ್ತು ಅರಣ್ಯ ಶಾಖೆಯ ಬಗ್ಗೆ ಕಟ್ ಮೋಷನ್ ಕಳುಹಿಸಿದಂತಹ ಮಾನ್ಯ ಸದಸ್ಯರಾದ ಶಾಮಣ್ಣನರು ಹಾಗೂ ಇಲ್ಲಿ ಉಗ್ರವಾದ ಟೀಕೆಗಳನ್ನು ಮಾಡಿದಂತಹ ಅನೇಕ ಸದಸ್ಯರು ಕೂಡ, ಈಗ ಈ ಸದನದಲ್ಲಿ ಈ ವಿಷಯದ ಬಗ್ಗೆ ಅವರಲ್ಲಿ ಹೆಚ್ಚು ಆಸ್ಥೆ ಇರುವುದರಿಂದ ಅವರು ಈ ಉತ್ತರವನ್ನು ಕೇಳಿ ಸಮಾಧಾನ ಹೊಂದಿದ ನಂತರ ತಮ್ಮ ಅಭಿಪ್ರಾಯವನ್ನು ಹೊರಗಿನ ಜನತೆಗೂ ಸಹ ಮುಟ್ಟಿಸುವ ಹವ್ಯಾಸ ಮಾಡುವುದು ಇಂಥ ಖಾತೆಗಳಲ್ಲಿ ಉಚಿತ ಎಂದು ನನ್ನ ಅಭಿಪ್ರಾಯ ಕಡಲೆಕಾಯಿ ಎಣ್ಣೆಯ ಬೆಲೆ ಮೊದಲು 8-25 ಇದ್ದರೆ ಮಾರ್ಚ್‌ನಲ್ಲಿ 10-25 ಆಯಿತು. ಅದು ಏತಕ್ಕೆ. ಹಾಗಾಯಿತೆಂಬದು ಮಾನ್ಯ ಸದಸ್ಯರಿಗೆ ಚೆನ್ನಾಗಿ ಗೊತ್ತಿದೆ. ಕಡಲೆಕಾಯಿಯನ್ನು ಕರ್ನಾಟಕ, ಆಂಧ್ರ, ತಮಿಳುನಾಡು ಮತ್ತು ಗುಜರಾತ್ ಪ್ರದೇಶಗಳಲ್ಲಿ ಬೆಳೆಯುತ್ತಾರೆ. ಆದರೆ ಗುಜರಾಜತನ್ನು ಬಿಟ್ಟು ಉಳಿದ ಎಲ್ಲ ಕಡೆಗಳಲ್ಲೂ ಕಡಲೆಕಾಯಿ ಬೆಳೆ ಕಡಿಮೆಯಾದ್ದರಿಂದ ಎಣ್ಣೆಯ ಅಭಾವ ಉಂಟಾಗಿದೆ. ಈ ಎಣ್ಣೆಯ ಅಭಾವವನ್ನು ನಿವಾರಣೆ ಮಾಡುವ ಸಲುವಾಗಿ ಹೊರಗಿನಿಂದ ಎಣ್ಣೆಯನ್ನು ತರಿಸುವ ಅನೇಕ ಯೋಜನೆಗಳನ್ನು ನಾವು ಹಾಕಿಕೊಂಡೆವು. ವ್ಯಾಪಾರಸ್ಥರಿಂದಲೂ ತರಿಸಿದೆವು. ಹೀಗೆ, ಜನರಿಗೆ ಸವಿಸ್ತಾರವಾದ ರೀತಿಯಲ್ಲಿ ಎಣ್ಣೆ

ಸಿಗಬೇಕೆಂದು ಮಾಡಿದ್ದರಿಂದ ಗಗನಕ್ಕೆ ಹೋಗುವ ಬೆಲೆಯನ್ನು ಹಿಡಿತದಲ್ಲಿಡಲು ಸಾಧ್ಯವಾಯಿತು. ಒಟ್ಟಿನಲ್ಲಿ ಎಣ್ಣೆಯ ಬೆಲೆ ಕೆ.ಜಿಗೆ ರೂ. 8-26 ಕ್ಕಿಂತಲೂ ಕಡಿಮೆಯಾಗಬೇಕೆಂದು ನನ್ನ ಅಭಿಪ್ರಾಯ. ಅದು ಸೆಪ್ಟೆಂಬರ್‌ವರೆಗೆ ಆಗುವುದಕ್ಕೆ ಸಾಧ್ಯವಿಲ್ಲ. ಆದರೂ ಸಹ ಎಲ್ಲೆಲ್ಲಿ ಎಣ್ಣೆ ಕಾಳುಗಳು ಸಿಗುತ್ತವೆ. ಅವುಗಳನ್ನು ಅಲ್ಲಲ್ಲಿ ಫೂಡ್ ಕಾರ್ಪೊರೇಷನ್ನಿನವರ ಮೂಲಕ ಸಂಗ್ರಹ ಮಾಡುವ ಕಾರ್ಯಕ್ರಮವನ್ನು ಹಾಕಿಕೊಂಡಿದ್ದೇವೆ. ಹೀಗೆ ಸಂಗ್ರಹಿಸಿದ ಕಡಲೆಕಾಳನ್ನು ಖರ್ಚು ಮಾಡುವಾಗ ವ್ಯಕ್ತಿಗತವಾಗಿ ಖರ್ಚು ಮಾಡುವುದಿಲ್ಲ. ಮಾನ್ಯ ಕಾಗೋಡು ತಿಮ್ಮಪ್ಪನವರು ಹೇಳಿದ ಹಾಗೆ ಪ್ರೊಸೆಸಿಂಗ್ ಸೊಸೈಟಿಗಳನ್ನು ಆಯ್ಕೆ ಮಾಡಿ ಅವುಗಳ ಮೂಲಕ ಕಡಲೆಕಾಯಿಯನ್ನು ಖರೀದಿ ಮಾಡಿಸಿ ಅದರಿಂದ ಎಣ್ಣೆಯನ್ನು ತೆಗೆದು ಆ ಎಣ್ಣೆಯನ್ನು ಕೊ ಆಪರೇಟಿವ್ ಮುಖಾಂತರ ವಿತರಣೆ ಮಾಡಬೇಕೆಂಬ ಯೋಚನೆ ಮಾಡಿದ್ದೇವೆ. ಖಾಸಗೀ ವ್ಯಾಪಾರಸ್ಥರ ಮೇಲೆ ಎಣ್ಣೆ ಲೆವಿ ಎಂದು ಹಾಕಿ ಅವರಿಂದ ಎಣ್ಣೆಯನ್ನು ತೆಗೆದುಕೊಂಡು ಹಂಚಿದ್ದು ಆಯಿತು. ಅದು ತಮಗೆ ಗೊತ್ತಿದೆ. ಹೀಗೆಲ್ಲ ಅನೇಕ ರೀತಿಯ ಪ್ರಯತ್ನಗಳನ್ನು ಮಾಡುತ್ತಿದ್ದೇವೆ. ಇದರ ಜೊತೆಗೆ ನಾವು ರೈತರಿಂದ ಲೆವಿಯನ್ನು ಸಂಗ್ರಹಿಸುವಾಗ ಅವರಿಗೆ ಹೆಚ್ಚು ಬೆಲೆಯನ್ನು ಕೊಡಬೇಕೆಂಬ ಅಭಿಲಾಷೆ ಕರ್ನಾಟಕ ಸರ್ಕಾಕರಕ್ಕೆ ಇರುವಷ್ಟು ಬೇರೆ ಯಾರಿಗೂ ಇಲ್ಲ ಎಂದರೆ ತಪ್ಪಾಗಲಾರದು. ಕೇಂದ್ರ ಸರ್ಕಾರ ಸಹ ಚುನಾವಣೆ ಪ್ರಣಾಲಿಕೆಯಲ್ಲಿ ನಮೂದಿಸಿದ್ದ ದರವನ್ನು ಜಾರಿಗೆ ತರಬೇಕೆಂದು ಪ್ರಯತ್ನಿಸಿದೆ. ಆದರೆ ಆಗಲಿಲ್ಲ. ಏಕೆ ಆಗಲಿಲ್ಲ? ಏಕೆಂದರೆ ರೈತರಿಗೆ ಹೆಚ್ಚು ಬೆಲೆಯನ್ನು ಕೊಟ್ಟರೆ ಕನ್‌ಸ್ಯೂಮ್‌ರ್‌ಗಳಿಗೆ ತೊಂದರೆಯಾಗುತ್ತದೆಂಬ ಪ್ರಶ್ನೆಯನ್ನು ಮಾನ್ಯ ಕೃಷ್ಣನ್‌ರವರಂಥ ಬುದ್ಧಿವಂತರು ತಂದೊಡ್ಡಿದ್ದಾರೆ. ಅಂದರೆ ಅವರು ಪ್ರಯತ್ನ ಮಾಡಿದ್ದಾರೆಂದು ಅಲ್ಲ. ರೈತರಿಗೆ ಹೆಚ್ಚು ಬೆಲೆ ಕೊಟ್ಟರೆ ಕನ್‌ಸ್ಯೂಮರ್‌ಗಳಿಗೆ ಮಾರುಕಟ್ಟೆಯಲ್ಲಿ ಹೆಚ್ಚು ಪರಿಣಾಮವಾಗುತ್ತದೆ.

## ಅರಣ್ಯ ಇಲಾಖೆಯ ಬೇಡಿಕೆ ಮೇಲಿನ ಚರ್ಚೆ

ಅಧ್ಯಕ್ಷರೇ, ಇನ್ನು ಮುಂದೆ ಅರಣ್ಯ ಇಲಾಖೆ ವಿಷಯವಾಗಿ ಕೆಲವು ಮಾತುಗಳನ್ನು ಹೇಳಲಿಕ್ಕೆ ಇಷ್ಟಪಡುತ್ತೇನೆ. ಈ ಅರಣ್ಯದ ಬಗ್ಗೆ ನನಗಿಂತಲೂ ಹೆಚ್ಚು ಆಸಕ್ತಿ ಇರತಕ್ಕ ಬಹಳ ಜನ ಸದಸ್ಯರು ಈ ಮನೆಯಲ್ಲಿ ಇದ್ದಾರೆ. ಇವೊತ್ತಿನ ದಿವಸ ನಾವು ನಮ್ಮ ಪುಸ್ತಕದಲ್ಲಿರತಕ್ಕ ಅಂಕಿಅಂಶಗಳನ್ನು ನೋಡುವುದಾದರೆ, ಸುಮಾರು 25 ಲಕ್ಷದ 45 ಸಾವಿರದ 798 ಹೆಕ್ಟೇರ್ಸ್ ಫಾರೆಸ್ಟ್ ಇದೆ. ಇದೆಲ್ಲಾ ರಿಸರ್ವ್ ಫಾರೆಸ್ಟ್ ಅಲ್ಲ. ಇದರಲ್ಲಿ ಗುಡ್ಡ, ಹಳ್ಳ ಹೊಳೆಗಳು ಎಲ್ಲಾ ಬರುತ್ತದೆ. ಇದೆಲ್ಲಾ ಕೂಡಿ 15.2 ಪರ್‌ಸೆಂಟ್ ಇದೆ. ಮಾನ್ಯ ಸದಸ್ಯರಾದ ಕಾಗೋಡು ತಿಮಮಪ್ಪನವರಾಗಲಿ, ಮಾನ್ಯ ಸದಸ್ಯರಾದ ಕೋಣಂದೂರು ಲಿಂಗಪ್ಪನವರಾಗಲಿ, ಮಾನ್ಯ ಸದಸ್ಯರಾದ ಶೀರನಾಳಿ ಚಂದ್ರಶೇಖರ್‌ರವರಾಗಲಿ, ಇಲ್ಲಿ ಇಲ್ಲದೆ ಇರತಕ್ಕಂತಹ ಮಾನ್ಯ ಸದಸ್ಯರಾದ ಬಂಗಾರಪ್ಪನವರಾಗಲಿ, ಇದರ ಬಗ್ಗೆ ಸ್ವಲ್ಪ ಅಭ್ಯಾಸ ಮಾಡಿ ನೋಡಿದರೆ ಹಿಂದಿಗೂ ಮತ್ತು ಇಂದಿಗೂ ನಮ್ಮ ಕರ್ನಾಟಕದಲ್ಲಿ ಫಾರೆಸ್ಟ್ ಯಾವ ರೀತಿ ಇದೆ ಎಂದು ಗೊತ್ತಾಗುತ್ತದೆ. ಈ ಫಾರೆಸ್ಟ್ ಯಾರಿಗೂ ಕೊಟ್ಟರೂ ನನಗೆ ಏನೂ ಆಗುವುದಿಲ್ಲ. ನಮ್ಮ ಮತದಾರರ ಕ್ಷೇತ್ರಕ್ಕೆ ಹಾನಿಯಾಗುವುದಿಲ್ಲ. ಬೆಲ್ಲದ ನೈವೇದ್ಯ ಮಾಡಿ ಬೆಲ್ಲದ ಗಣಪನಿಗೆ ಸೇರಿಸಿ ಫಲ ಪಡೆಯಬಹುದು ಆದರೆ ಮಾನ್ಯ ಸದಸ್ಯರು ಏನು ಬೈದರು ಪರವಾಯಿಲ್ಲ. ದೇಶದ ಕಲ್ಯಾಣವಾಗಬೇಕು ಎನ್ನುವುದೇ ನನ್ನ ಉದ್ದೇಶ. ಇವೊತ್ತು ಮಾನ್ಯ ಸದಸ್ಯರನೇಕರು ಜಮೀನಿನ ವಿತರಣೆ ಬಗ್ಗೆ ಹೇಳಿದ್ದಾರೆ. ಈ ವಿಷಯದ ಬಗ್ಗೆ ಎರಡು ಸಾರಿ ಜಮೀನುಗಳ ವಿತರಣೆಯಾಗಿ ರೆಗ್ಯೂಲರೈಸ್ ಮಾಡಿದ್ದಾರೆ. ಈ ರೀತಿ ರೆಗ್ಯುಲರೈಸ್ ಆದ ಮೇಲೆ ಶ್ರೀಮಾನ್ ಬಂಗಾರಪ್ಪನವರು ಹೇಳಿದಂತೆ ಮಿಸ್ಯೂಸ್ ಆಗಿದ್ದು ಮತ್ತು ಅದನ್ನು ಫರಫೀಟ್ ಮಾಡಿದ್ದಾಯಿತು. ಹಿಂದಿನವರು ಮಾಡಿದ್ದನ್ನು ಮತ್ತೆ ಕ್ಯಾನ್ಸಲ್ ಮಾಡುವುದು ಈ ರೀತಿಯಾದ ಒಂದು ದುರಭ್ಯಾಸ ಬೆಳೆದುಬಂದಿದೆ. ಇದರ ಬಗ್ಗೆ ನಾವು ಮತ್ತು ಮಾನ್ಯ ಸದಸ್ಯರಾದ ನೀವು ಕೂಡಿ ಮಾತನಾಡೋಣ. ಇವೊತ್ತು ಒಬ್ಬ ಮನುಷ್ಯನಿಗೆ ಯಾವುದಾದರೂ ಉದ್ಯೋಗ ಕೊಟ್ಟು ಬೆಳೆಸಬಹುದು. ಆದರೆ ಅರಣ್ಯ ಸಂಪತ್ತನ್ನು ಬೆಳೆಸುವುದು ಬಹಳ ಕಷ್ಟ ಒಂದೊಂದು ಸಾರಿ ಅರಣ್ಯ ಸಂಪತ್ತಿನ ಬಗ್ಗೆ ನೆನಸಿಕೊಂಡರೆ ಮನಸ್ಸಿಗೆ ಬಹಳ ವ್ಯಥೆಯಾಗುತ್ತದೆ.

ಇವೊತ್ತು ಮರಗಳನ್ನು ಕಡಿಯುವುದರಿಂದ ಫಾರೆಸ್ಟ್ ಹಾಳಾಗುತ್ತದೆ ಎಂದು ಹೇಳತಕ್ಕದ್ದು ಸರಿಯಲ್ಲ ಇವು ಒಟ್ಟು ಟೋಟಲ್ ಏರಿಯಾ ಎಷ್ಟು ಕಟ್ ಆಗುತ್ತದೆ. ಎಷ್ಟು ಪ್ಲಾನ್‌ಟೆಡ್ ಆಗುತ್ತದೆ ಎನ್ನುವುದನ್ನು ನೋಡಬೇಕು. ಪ್ರತಿವರ್ಷ ಆ್ಯನ್ಯುಯಲ್ ಪ್ಲಾನ್ ಪ್ರಕಾರ 10 ಸಾವಿರದ 100 ಹೆಕ್ಟೇರ್ಸ್ ಟೋಟಲ್ ಏರಿಯಾ ಕಟ್ ಆಗುತ್ತದೆ. ಇನ್ನು ಪ್ಲಾನ್‌ಟೆಡ್ ಎಷ್ಟಾಗುತ್ತದೆ. ಎಂದರೆ 4058 ಹೆಕ್ಟೇರ್ಸ್ ಟೀಕ್‌ವುಡ್ ಬೆಳೆಯುತ್ತದೆ. 3,300 ಹೆಕ್ಟೇರ್ಸ್ ಸಾಫ್ಟ್ ವುಡ್ ಬೆಳೆಯುತ್ತದೆ. ಇನ್ನು ಉಳಿದ ಪ್ಲಾನ್‌ಟೆನ್ 2750 ಹೆಕ್ಟೇರ್ಸ್ ಅನಂತರ ಇದು ಅಲ್ಲದೇ ಬೇರೆ ಫಾರೆಸ್ಟ್ ವರ್ಷ ವರ್ಷ ಹೆಚ್ಚು ಮಾಡುತ್ತಾ ಪ್ರತಿ ವರ್ಷ 22,900 ಹೆಕ್ಟೇರ್ಸ್ ಅಷ್ಟು ಬೆಳೆಸುತ್ತಿದ್ದೇವೆ. ಇದರಿಂದ ನಮ್ಮ ಫಾರೆಸ್ಟ್ ಡಿಪಾರ್ಟ್‌ಮೆಂಟಿನಲ್ಲಿ ಇರತಕ್ಕ ಒಂದು ಸತ್ಯ ಗೊತ್ತಾಗುತ್ತದೆ. ಕೆಲವು ಕಡೆ ಲೋಪದೋಷಗಳು ಇರಬಹುದು. ಅಧಿಕಾರಿಗಳು ಮಾಡತಕ್ಕ

ವಿಸನದಿ: 19-6-1977

ತಪ್ಪುಗಳನ್ನು ತೋರಿಸಿಕೊಟ್ಟರೆ, ಆ ತಪ್ಪುಗಳನ್ನು ತಿದ್ದಿ, ಅರಣ್ಯ ಸಂಪತ್ತನ್ನು ಹೆಚ್ಚು ಬೆಳೆಸಲಿಕ್ಕೆ ಅನುಕೂಲವಾಗುತ್ತದೆ. ನಮ್ಮ ಕರ್ನಾಟಕ ರಾಜ್ಯದ ಫಾರೆಸ್ಟ್ ಇಲಾಖೆಯಲ್ಲಿ ದಕ್ಷ ಹಾಗೂ ಪ್ರಾಮಾಣಿಕ ಅಧಿಕಾರಿಗಳು ಇದ್ದಾರೆ ಎಂದರೆ ತಾವು ಒಪ್ಪಲಿಕ್ಕಿಲ್ಲ. ಆದರೆ ಇದರ ಬಗ್ಗೆ ಅಖಿಲ ಭಾರತ ಮಟ್ಟದಲ್ಲಿ ಎಲ್ಲರೂ ಒಪ್ಪುತ್ತಾರೆ. ನಮ್ಮ ಫಾರೆಸ್ಟ್ ಇಲಾಖೆಯಲ್ಲಿರತಕ್ಕ ಅಧಿಕಾರಿಗಳನ್ನು ಬಿಟ್ಟುಕೊಡಿ ಎಂದು ಮೇಲಿಂದ ಮೇಲೆ ಸೆಂಟ್ರಲ್ ಗೌರ್ನ್‌ಮೆಂಟ್‌ನವರು ಕೇಳುತ್ತಿದ್ದರು. ಅಂತಹ ಅಧಿಕಾರಿಗಳು ನಮ್ಮ ಫಾರೆಸ್ಟ್ ಇಲಾಖೆಯಲ್ಲಿ ಇದ್ದಾರೆ. ಇವೊತ್ತು ನಮ್ಮಲ್ಲಿ ಚಲೋ ಅಧಿಕಾರಿಗಳು ಇದ್ದಾರೆ. ಇನ್ನು ಕೆಲವರು ಖದೀಮ ಅಧಿಕಾರಿಗಳು ಇದ್ದಾರೆ. ಆದರೆ ಇಬ್ಬರನ್ನು ತಾವು ಒಂದೇ ರೀತಿಯಲ್ಲಿ ನೋಡಿದರೆ ನ್ಯಾಯವನ್ನು ಕಾಪಾಡಿದಂತೆ ಆಗುವುದಿಲ್ಲ ಎನ್ನುವುದನ್ನು ತಮ್ಮ ಗಮನಕ್ಕೆ ಈ ಸಂದರ್ಭದಲ್ಲಿ ತರುವುದಕ್ಕೆ ಇಷ್ಟಪಡುತ್ತೇನೆ. ತಪ್ಪು ಮಾಡುವಂತಹ ಅಧಿಕಾರಿಗಳಿಗೆ ಶಿಕ್ಷೆ ಕೊಡೋಣ ಹಾಗೆ ಸರಿಯಾದಂತಹ ಅಧಿಕಾರಿಗಳಿಗೆ ಪ್ರೋತ್ಸಾಹ ಕೊಡೋಣ. ಈ ಬಗ್ಗೆ ನಾವು ನೀವು ಕೂಡಿ ಅರಣ್ಯ ಸಂಪತ್ತನ್ನು ಬೆಳೆಸುವುದಕ್ಕೆ ಪ್ರಯತ್ನ ಮಾಡಬೇಕು ಎನ್ನುವ ಮಾತನ್ನು ಹೇಳುವುದಕ್ಕೆ ಇಷ್ಟಪಡುತ್ತೇನೆ.

ಮಾನ್ಯ ಸದಸ್ಯರು ಹೇಳಿದಂತೆ ಒಂದು ನಾನ್ ಆಫೀಷಿಯಲ್ ಸಮಿತಿ ಮಾಡೋಣ. ಮತ್ತೆ ಈ ಅರಣ್ಯವನ್ನು ಹೇಗೆ ಬೇಳೆಸಬೇಕು ಎನ್ನುವ ಬಗ್ಗೆ ಎರಡೂ ಸದಸ್ಯರನ್ನೊಳಗೊಂಡಂತೆ ಒಂದು ಸಮಿತಿಯನ್ನು ಮಾಡೋಣ ಇವೊತ್ತು ಅರಣ್ಯವನ್ನು ಹೇಗೆ ಬೆಳೆಸಬೇಕು ಎನ್ನುವ ವಿಷಯವಾಗಿ ಮಾತುಕತೆಗಳೂ ಬರಲಿಲ್ಲ ಅರಣ್ಯವನ್ನು / ಯಾವ ರೀತಿಯಾಗಿ ಉಳಿಸಬೇಕು ಎನ್ನುವ ಬಗ್ಗೆ ಟೀಕಾತ್ಮಕವಾಗೊ ಒಂದೆರಡು ಮಾತುಗಳು ಬಂದವೇ ಹೊರತು ಬೇರೆ ಮಾತುಗಳು ಬರಲಿಲ್ಲ. ಈ ಬಗ್ಗೆ ನಾನು ಯಾರನ್ನೂ ಆರೋಪಿಸುವುದಿಲ್ಲ. ಇವೊತ್ತು ಎನ್‌ಕ್ರೋಚ್‌ಮೆಂಟ್ ಬಗ್ಗೆ ಬಡವರು ಇದ್ದಾರೆ. ಅವರಿಗೆ ಕೊಡೋಣ. ಇಡೀ ಅರಣ್ಯವನ್ನೇ ಎಲ್ಲರಿಗೂ ಹಂಚಬೇಕು ಎಂದರೆ ನಾನು ಬೇಡ ಎಂದು ಹೇಳುವುದಿಲ್ಲ. ಫಾರೆಸ್ಟ್ ಆ್ಯಕ್ಟ್ ಪ್ರಕಾರ ಹೊಲಗಳನ್ನು ವಿತರಣೆ ಮಾಡುವುದು ಎರಡು ಸದನಗಳಿಗೆ ಸೇರಿದ್ದು. ಇವೊತ್ತು ಶಿವಮೊಗ್ಗದಲ್ಲಿ ಬೆಳೆಯತಕ್ಕ ಅರಣ್ಯದಿಂದ ನಿಮ್ಮ ಕಡೆಗೆ ಮಳೆ ಕೊಡುತ್ತದೆಯೇ ಹೊರತು ನಮ್ಮ ಹುಬ್ಬಳ್ಳಿ ಕಡೆಗೆ ಮಳೆ ಕೊಡುವುದಿಲ್ಲ. ಇನ್ನು ನಿರ್ಗತಿಕರಿಗೆ, ಸಣ್ಣವರಿಗೆ, ಇರತಕ್ಕ ಎನ್‌ಕ್ರೋಚ್‌ಮೆಂಟ್ ಯಾವ ರೀತಿಯಿಂದಲೂ ಕೊಡುವುದಿಲ್ಲ ಎಂದು ನಾನು ಹೇಳುವುದಿಲ್ಲ. ನಿಮಗೆ ನಾನು ದುರ್ಯೋಧನನಾಗಿ ಕಾಣಬಹುದು ಆದರೆ ನನಗೆ ಮಾತ್ರ ನೀವು ಧರ್ಮರಾಯರಾಗಿ ಕಾಣುತ್ತೀರಾ. ಇವೊತ್ತು ಯಾವುದನ್ನು ಮಾಡುವುದರಿಂದ ದೇಶದ ಕಲ್ಯಾಣವಾಗುತ್ತದೆ ಅದರ ಬಗ್ಗೆ ಮಾನ್ಯ ಸದಸ್ಯರಾದ ಕಾಗೋಡು ತಿಮ್ಮಪ್ಪವರು ಯೋಗ್ಯವಾದ ಸಲಹೆ ಕೊಟ್ಟರೆ ನನ್ನದು ಯಾವ ಅಭ್ಯಂತರವಿಲ್ಲ. ಇನ್ನು ಕೊಡಗು ಜಿಲ್ಲೆಯ ಖಾಮ ಮತ್ತು ಮಲ್ಯೆ ಜಮೀನುಗಳಲ್ಲಿ ಏಲಕ್ಕಿ ಬೆಳೆ ಬೆಳೆಯುತ್ತದೆ. ಆ ಜಾಗ ಬೇರೆ ಬೇರೆ ಪ್ರದೇಶಗಳಿಂದ ಕೂಡಿದಂತಹ ಪ್ರದೇಶ. ಒಂದೊಂದು ಜಾಗದಲ್ಲಿ ಒಂದೊಂದು ತರಹ ವಿಶಿಷ್ಟ ಸಮಸ್ಯೆ ಇದೆ. ಆಯಾಯಾ ಜಾಗಗಳ ಕೆಲವು ಜನರ ಸಮಿತಿ ಮಾಡಿ ಒಂದು ಯೋಜನೆ ಮಾಡುವುದಾದರೆ ಅದು ಸ್ವಾಗತಾರ್ಹ ಎಂದು ಈ ಸಂದರ್ಭದಲ್ಲಿ ಹೇಳುವುದಕ್ಕೆ ಇಷ್ಟಪಡುತ್ತೇನೆ.

ಇನ್ನು ಜಮೀನು ಕೊಡುವ ವಿಷಯದಲ್ಲಿ ಅದೇ ಧೋರಣೆ ತಾಳಿದರೆ ಚುನಾವಣೆಯಲ್ಲಿ ಬರುವುದಿಲ್ಲ ಎಂದು ಹೇಳಿದರೆ ನಾನು ಚುನಾವಣೆಯಲ್ಲಿ ಬರದೇ ಇದ್ದರೂ ಪರವಾಗಿಲ್ಲ ತಾನು

ಸರಿಯಾಗಿ ಮಾಡಿದಂತಹ ಕೆಲಸದಿಂದ ಸಂತೋಷಪಡುತ್ತೇನೆ. ಜನರು ಚುನಾವಣೆಯಲ್ಲಿ ಸೋಲಿಸುತ್ತಾರೆ ಎಂದು ರಾಜ್ಯ ಬೊಕ್ಕಸ ಖಾಲಿ ಮಾಡಲಿಕ್ಕೆ ಹೋಗುವುದಿಲ್ಲ.

ನನಗೆ ಬರತಕ್ಕ ಅಂಕಿಗಳೆಲ್ಲಾ ಹರಿಶ್ಚಂದ್ರರಿಂದ ಬರುವುದಿಲ್ಲ. ಬುಟ್ಟಿಯಲ್ಲಿ ಒಂದು ಹಣ್ಣು ಕೆಟ್ಟಿದ್ದರೆ, ಬುಟ್ಟಿನೇ ಒಗೆಯುವುದೇ ಎಂದು ನಾವು ನೀವು ಒಂದಾಗಿ ಈ ವಿಚಾರದಲ್ಲಿ ವಿಚಾರ ಮಾಡೋಣ. ಎಲ್ಲಾ ಅಧಿಕಾರಿಗಳು ಅಂಥವರಲ್ಲ. ಚಲೋ ಅಧಿಕಾರಿಗಳಿಗೆ ಗೌರವ ಸೂಚಿಸುವುದು ಅವಶ್ಯಕ.

ಎಲ್ಲರಿಗೂ ಹೇಳುತ್ತೇನೆ. ನನ್ನ ಜನರಿಗೆ ಒಂದು ಊರಿಗೆ ಅರಣ್ಯದ ಬಗ್ಗೆ ಸ್ಥಾನೀಕ ಜನರಿಂದ ಅರಣ್ಯ ಹೋಗುವ ವಿಚಾರದಲ್ಲಿ ಕೋರ್ಟಿನಲ್ಲಿ ಸ್ಟೇ ಕೊಟ್ಟಿದೆ. ಸ್ಟೇ ಕ್ಯಾನ್ಸಲ್ ಮಾಡಬೇಕು ಎನ್ನುವ ವಿಚಾರದಲ್ಲಿ ಫೋನಿನ ಮೇಲೆ ಫೋನ್ ಬಂತು. ನಾನು ಹೋಗಿ ಜಮೀನು ನೋಡುವುದರಲ್ಲಿ ಅರ್ಧ ಜಮೀನು ಹೋಗಿದೆ. ಇನ್ನು ಅರ್ಧ ಜಮೀನು ಇದೆ. ಸ್ಟೇ ರದ್ದು ಮಾಡುವುದಕ್ಕೆ ಯೋಗ್ಯ ಅಂತ ಅನ್ನಿಸಿತು. ಮುಂದೆ ಬರುವವರೆಗೆ ನಿರ್ದಾಕ್ಷಿಣ್ಯವಾಗಿ ಹೊರಗೆ ಹಾಕಿ ಎಂದು ಹೇಳಿ ಬಂದಿದ್ದೇನೆ. ನಾನು ನನ್ನ ನಿಲುವಿನ ವಿಚಾರದಲ್ಲಿ ದೊಡ್ಡವರು, ಹೊಲವುಳ್ಳವರು ಯಾವುದೂ ನೋಡುವುದಿಲ್ಲ. ಹಾಸನ ಜಿಲ್ಲೆಯಲ್ಲಿ ಕಾಫಿ ಪ್ಲಾಂಟೇಷನ್‌ಗೆ ಸಂಬಂಧಪಟ್ಟಂತೆ 40-50 ಎಕರೆ ಜಮೀನು ಸೇರಿಸಿದ್ದಾರೆ. ಅದು ನನ್ನ ಜನರಿಗೆ ಬಂದಾಗ, ಅದು ನನ್ನ ಗೆಳೆಯರಿಗೆ ಸಂಬಂಧಿಸಿದ್ದು ಎಂದು ತಿಳಿಯಿತು. ನನ್ನ ಗೆಳೆಯರು ನನ್ನನ್ನು ನೋಡುವುದಕ್ಕೆ ಬರುವ ಮುನ್ನವೇ ಫೈಲು ತರಿಸಿಕೊಂಡು ಕ್ಯಾನ್ಸಲ್ ಮಾಡಿದ್ದೇನೆ. ಅಂಥ ಸದ್ಗುಣ ನನ್ನದು. ಆ ಮೇಲೆ ನನ್ನ ಗೆಳೆಯರು ಬಂದು ಅದು ಬಹಳ ಬೆಲೆಯುಳ್ಳದ್ದು 10 ಲಕ್ಷ ರೂಪಾಯಿ ಆಗುತ್ತದೆ ಎಂದು ಹೇಳಿದರು. ನನಗೆ ನಿಮ್ಮ ಬೆಂಬಲ ಇದ್ದರೆ ಯಾವ ದುಡ್ಡಿನವನಾಗಲೀ ದೊಡ್ಡವನಾಗಲೀ, ಹೊಲವುಳ್ಳವನಾಗಲೀ ಕಾನೂನಿಗೆ ವಿರುದ್ಧವಾಗಿ ಯಾವತ್ತು ಮಾಡುವುದಕ್ಕೆ ಹೋಗುವುದಿಲ್ಲವೆಂಬದನ್ನು ತಾವು ಲಕ್ಷದಲ್ಲಿಟ್ಟುಕೊಳ್ಳಬೇಕು. ಅವ್ಯವಹಾರಗಳ ವಿಚಾರದಲ್ಲಾಗಲೀ, ಮತ್ತಿನ್ನಾವುದೇ ವಿಚಾರದಲ್ಲಾಗಲೀ, ತೀವ್ರ ಕ್ರಮಕೈಕೊಳ್ಳುವ ಬಗ್ಗೆ ನಾನು ಮೊದಲಿಗನಾಗುತ್ತೇನೆ. ಯಾವ ಅಧಿಕಾರಿಯಾಗಲೀ ನಿಷ್ಠೆಯಿಂದ ಕೆಲಸ ಮಾಡದೇ ಇದ್ದರೆ ಸರ್ಕಾರ ಸರಿಯಾದ ಮಾರ್ಗದಲ್ಲಿ ನಡೆಯದಿದ್ದರೆ ಮಂತ್ರಿ ತೀರ್ಮಾನ ಮಾಡಬೇಕಾಗಿಲ್ಲ. ನೀವು ತೀರ್ಮಾನ ಮಾಡಬೇಕು. ಶ್ರೀಮಾನ್ ಸಯನಕ್‌ರವರು ಒಂದು ಮಾತನ್ನು ಹೇಳಿದರು. ದ್ವೇಷದಿಂದ ಮಾಡಿದ್ದಾರೆಂದು . ನನ್ನ ಜನರಿಗೆ ತಂದಿದ್ದರೆ ಅದರ ಬಗ್ಗೆ ಕ್ರಮ ತೆಗೆದುಕೊಳ್ಳುತ್ತಿದ್ದೆ. ಈ ವಿಚಾರದಲ್ಲಿ ತನಿಖೆ ಮಾಡೋಣ. ಮೋಟಾರ್ ಬಗ್ಗೆ ಹೇಳಿದ್ದಾರೆ. ಕೂಡಲೇ ಅದನ್ನು ತನಿಖೆಗೆ ಕಳುಹಿಸಿದ್ದೇನೆ. ಯಾವುದೇ ರೀತಿಯಿಂದ ಒಳಸಂಚು ನಡೆದಿದ್ದರೂ ಅವರ ಬಗ್ಗೆ ಕ್ರಮ ತೆಗೆದುಕೊಳ್ಳುವುದಕ್ಕೆ ಹಿಂದುಮುಂದು ನೋಡುವುದಿಲ್ಲ ಎನ್ನುವ ಮಾತನ್ನು ಹೇಳುತ್ತೇನೆ.

# ಮೈಸೂರಿನ ಪ್ರಾಣಿ ಸಂಗ್ರಹಾಲಯದ ಬಗ್ಗೆ ಚರ್ಚೆ

ನನಗೆ ಎರಡೂ ಸಭೆಯ ಸದಸ್ಯರುಗಳಿಂದ ಹಾಗೂ ಸಾರ್ವಜನಿಕರಿಂದ ಮೈಸೂರು ಪ್ರಾಣಿ ಸಂಗ್ರಹಾಲಯದ ಕ್ಯೂರೇಟರ್ ಹುದ್ದೆಯನ್ನು ವಿಭಾಗದ ಮುಖ್ಯಸ್ಥರನ್ನಾಗಿ ಬಡ್ತಿಗೊಳಿಸುವುದು ಮತ್ತು ಅರಣ್ಯ ಇಲಾಖೆಯಿಂದ ಪ್ರಾಣಿ ಸಂಗ್ರಹಾಲಯವನ್ನು ಪ್ರತ್ಯೇಕಗೊಳಿಸುವುದರ ಬಗ್ಗೆ ಸೂಚನೆಗಳು ಬಂದಿವೆ. ಈ ಎಲ್ಲಾ ಅರ್ಜಿಗಳಲ್ಲಿ ಕೇಂದ್ರ ಸರಕಾರ ನೇಮಿಸಿದ ವಿಶೇಷ ಸಮಿತಿಯ ಸಲಹೆಗಳು ಸೇರ್ಪಡೆಗೊಂಡಿರುವುದು ಇಲ್ಲಿ ಉಲ್ಲೇಖಾರ್ಹ. ಈ ಸಮಿತಿಯು ಹಲವು ಸಲಹೆಗಳು ಪ್ರಾಣಿ ಸಂಗ್ರಹಾಲಯದ ವೈಜ್ಞಾನಿಕ ಬೆಳವಣಿಗೆ ಬಗ್ಗೆ ವಿವಿದ ಶೈಕ್ಷಣಿಕ ವಿಭಾಗಗಳ ನೌಕರರ ಬಗ್ಗೆ ಆಗಿವೆ. ಈ ಪ್ರಶ್ನೆಯನ್ನು ನಾವು ತೆಗೆದು ಕೊಂಡಿದ್ದೇವೆ. ಆದರೆ ನೌಕರರಿಗೆ ತುಂಬಾ ಖರ್ಚು ತಗಲುವುದರಿಂದ ಮುಂದಕ್ಕೆ ಈ ವಿಷಯ ಚಿಂತಿಸಬಹುದು. ಸರಕಾರಕ್ಕೆ ಸಲಹೆ ನೀಡಿದವುಗಳಲ್ಲಿ ಕ್ಯೂರೇಟರ್ ಹುದ್ದೆಯನ್ನು ಬಡ್ತಿಗೊಳಿಸುವುದು ಮುಖ್ಯ ಇದಕ್ಕೆ ಸೇರಿದಂತೆ ಹಲವು ಅನಗತ್ಯ ಅಡಚಣೆ ಸರಕಾರಕ್ಕೆ ಮುಜುಗರ ತಂದಿದೆ. ಲೆಕ್ಕದ ಬಗೆಗಿನ ವಿವರ, ನೌಕರರನ್ನು ಸೇವೆಯಲ್ಲಿ ಹಲವು ವರ್ಷಗಳು ಮುಂದುವರಿಸುವುದು ಮುಂತಾದವುಗಳನ್ನು ಅರಣ್ಯ ಇಲಾಖೆ ಹಾಗೂ ಎಕೌಂಟೆಂಟ್ ಜನರಲ್‌ಗಳು ಆಕ್ಷೇಪಿಸಿವೆ. ಇದು ಕ್ಯೂರೇಟರಿನ ಅಧಿಕಾರ ಕಡಿಮೆ ಅಥವಾ ಮೊಟಕುಗೊಳಿಸಿವೆ. ತಾ. 10.6.77 ವೃತ್ತ ಪತ್ರಿಕೆಯಲ್ಲಿ ಪ್ರಕಟಿತಗೊಂಡ ವಿಷಯವಾದ ಪ್ರಾಣಿಗಳಿಗೆ ತೊಂದರೆ ಆದದ್ದು ಕೂಡಲೇ ನನ್ನ ಗಮನಕ್ಕೆ ಬಂದಿವೆ. ಆ ದಿನವೇ ಟೆಲಿಗ್ರಾಮ್‌ನ ಮೂಲಕ ಕೂಡಲೇ ಎಚ್ಚರವಹಿಸಿ ಸರಿಯಾದ ಕ್ರಮಕೈಗೊಳ್ಳಲು ಸೂಚನೆ ನೀಡಲಾಗಿದೆ. 13ನೇ ತಾರೀಖಿಗೆ ಇದರ ಸಂಬಂಧ ಕ್ಯೂರೇಟರ್, ಕನ್ಸರ್‌ವೇಟರ್ ಆಫ್ ಫಾರೆಸ್ಟ ವೈಲ್ಡ್ ಲೈಫ್ ಮತ್ತು ಸಚಿವಾಲಯದ ತಾರೀಖಿಗೆ ಇದರ ಸಂಬಂಧ ಕ್ಯೂರೇಟರ್, ಕನ್ಸ್‌ರ್‌ವೇಟರ್ ಆಫ್ ಫಾರೆಸ್ಟ ವೈಲ್ಡ್ ಲೈಫ್ ಮತ್ತು ಸಚಿವಾಲಯದ ಸಿಬ್ಬಂದಿಯವರನ್ನು ಸಭೆಗೆ ಕರೆದಿದ್ದೆವು. ಅವ್ಯವಸ್ಥೆಯ ಕಾರಣ ತೋರಿಸಿ ಪ್ರಾಣಿಗಳಿಗೆ ಹಿಂಸೆಯಾಗಬಾರದೆಂದು ತಿಳಿಸಿದ್ದೇವೆ. ಅಲ್ಲದೇ ಈ ಸಭೆಯಲ್ಲಿ ನಾನು ಅವರಿಗೆ ಸ್ಪಷ್ಟವಾಗಿ ಹೇಳಿದ್ದೇನೆ ಏನೆಂದರೆ ಸಣ್ಣ ಪುಟ್ಟ ಕೆಲಸಗಳಿಗಾಗಿ ವಿಸ್ತ್ರತ ಅಧಿಕಾರಿ ಬೇಕಾದಲ್ಲಿ ಆದರ ಬಗ್ಗೆ ಕ್ರಮ ಕೈಗೊಳ್ಳಲಾಗುವುದೆಂದು ಕ್ಯೂರೇಟರ್‌ರವರು ಪ್ರಾಣಿಗಳಿಗೆ ಹಿಂಸೆಯ ಬಗ್ಗೆ ತಪ್ಪಾಗಿ ಪತ್ರಿಕೆಯಲ್ಲಿ ಪ್ರಕಟಗೊಂಡಿದೆ ಹಾಗೂ ಈ ರೀತಿಯ ಪ್ರಕಟಣೆಗೆ ಅವರು ಜವಾಬ್ದಾರರಲ್ಲವೆಂದು ತಿಳಿಸಿದ್ದಾರೆ. ಅಲ್ಲದೆ ಕೋತಿಗಳು ಮತ್ತಿತರ ಪ್ರಾಣಿಗಳು ಸತ್ತಿರುವುದು ಔಷಧಿಯಿಂದಲ್ಲ ಆದರ ಮುದಿ ಪ್ರಾಯದಿಂದ ಎಂದು ತಿಳಿಸಿದ್ದಾರೆ. ಪ್ರಾಣಿ ಸಂಗ್ರಹಾಲಯದಲ್ಲಿ ಸಾವಿರಾರು ಪ್ರಾಣಿಗಳಿವೆ ಅವುಗಳ ಹುಟ್ಟು ಸಾವುಗಳು ಸಾಮಾನ್ಯ ಕ್ರಿಯೆ. ಕಚೇರಿಯ ಕಡಗಳನ್ನು ವಿಲೇವಾರಿ ನೋಡಿಕೊಳ್ಳುವ ಓರ್ವ ನೌಕರನು ಇವನ್ನು ನೋಡಿಕೊಳ್ಳುವ ಕೆಲಸವನ್ನು ಮಾಡುತ್ತಿದ್ದಾನೆ. ಪ್ರತ್ಯೇಕಿಸಲು ಈಗಾಗಲೇ ಕ್ಯೂರೇಟರ್‌ರಿಗೆ ನಾನು ಸೂಚನೆ ನೀಡಿದ್ದೇನೆ. ಈ ಅನಾಹುತಕ್ಕೆ ಮೂಲಕಾರಣ ಇದೇ ಎಂದು ನನಗೆ ತಿಳಿದು ಬಂದಿದೆ. ಈ ಸೂಚನೆಯ ಅನುಮೋದನೆಯ ಬಗ್ಗೆ ಇನ್ನು ತಿಳಿಯಬೇಕಷ್ಟೆ ಅವರ ಜತೆಯಲ್ಲಿ ಅಧಿಕಾರವನ್ನು ಹೆಚ್ಚಿಸಲು ಹಾಗೂ ಅದರ ಬಗ್ಗೆ ಸರಕಾರಿ ಆಜ್ಞೆ ಹೊರಡಿಸಲು ತೀರ್ಮಾನಿಸಿದ್ದೇನೆ. ಈ ರೀತಿ ತಪ್ಪು ಪ್ರಕಟಣೆ ಅಥವಾ ಸತ್ಯಕ್ಕೆ ದೂರವಾದ ವಿಷಯ ಪತ್ರಿಕೆಯಲ್ಲಿ ಪ್ರಕಟಿಸಿರುವುದು ನನಗೆ ಆಶ್ಚರ್ಯ ತಂದಿದೆ. ಈ ಎಲ್ಲಾ ತನಿಖೆ ಅಥವಾ ಕೆಲಸ ಕಾರ್ಯ ನಡೆದ ಮೇಲೂ ಇದು

ವೈಯಕ್ತಿಕ ಕಾರಣಗಳಿಂದ ನಡೆದದ್ದು ಎಂದು ತಿಳಿಸುವ ಹಲವು ಅರ್ಜಿಗಳು ನನಗೆ ಬಂದಿವೆ. ನಾನು ಈ ಸಭೆಗೆ ಮನದಟ್ಟು ಮಾಡುವುದು ಏನೆಂದರೆ ವೈಯಕ್ತಿಕ ವಿಚಾರಗಳು ಪ್ರಾಣಿ ಸಂಗ್ರಾಹಾಲಯದ ಆಡಳಿತದ ಮೇಲೆ ಪರಿಣಾಮ ಬೀಳ್ವದ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳಲಾಗುವುದು ಎಂದು ಪ್ರಾಣಿಗಳು ಸಾಯುವುದಕ್ಕು ಇದಕ್ಕು ಸಂಬಂಧವಿಲ್ಲ ಪ್ರೆಸ್‌ನಲ್ಲಿ ಬಂದಿರುವುದಕ್ಕು ಇದಕ್ಕು ಸಂಬಂಧವಿದೆ ಆದ್ದರಿಂದ ಅದನ್ನು ಸರಿ ಮಾಡಬೇಕಾಗುತ್ತದೆ.

ಈ ಪ್ರಾಣಿ ಸಂಗ್ರಹಾಲಯವು ಒಂದು ಉತ್ತಮ ಮೊದಲನೇ ದರ್ಜೆಯ ಪ್ರಾಣಿ ಸಂಗ್ರಹಾಲಯವಾಗಿದೆ. ನಾವು ಈ ಪ್ರಾಣಿ ಸಂಗ್ರಹಾಲಯವನ್ನು ಇನ್ನೂ ಉತ್ತಮ ಪಡಿಸಲು ಎಲ್ಲಾ ರೀತಿಯಿಂದ ಪ್ರಯತ್ನಿಸುತ್ತಾ ಇದ್ದೇವೆ. ಆದರೆ ಇದಕ್ಕೆ ಸದ್ಯಕ್ಕೆ ನಿರ್ವಾಹಕ ಮಂಡಳಿಯನ್ನು ನೇಮಕ ಮಾಡುವುದು ಕಷ್ಟವಾಗಿದೆ. ಇದರ ಬಗ್ಗೆ ನುರಿತ ಸಮಿತಿಯ ವರದಿಯ ಆಧಾರದ ಮೇಲೆ ಖಂಡಿತ ವಿವೇಚಿಸಲಾಗುವುದು. ಎಲ್ಲೆಲ್ಲೂ ಅನ್ಯಾಯ ನಡೆದಿದೆ ಹಾಗೂ ಅವ್ಯವಸ್ಥೆ ಕಂಡಿದೆ ಎಂದಾದ ಅವನ್ನು ವಿಚಾರಣೆಗೆ ಗುರಿಪಡಿಸಲಾಗುವುದು. ಯಾರನ್ನೂ ಬಿಡುವುದಿಲ್ಲ. ಈ ರೀತಿಯ ಸುಳ್ಳು ಅನಿಸಿಕೆಗಳ ಬಗ್ಗೆ ನಾನು ಹಾಗೂ ಮಾನ್ಯ ಮುಖ್ಯ ಮಂತ್ರಿಗಳು ಆಲೋಚಿಸಿದ್ದು ಏನೆಂದರೆ ನಾನ್ ಅಫಿಷಿಯಲ್ ಕಮಿಟಿಯು ಪ್ರಾಣಿ ಸಂಗ್ರಹಾಲಯದ ವ್ಯವಹಾರದ ಬಗ್ಗೆ ನೋಡಿಕೊಳ್ಳಬೇಕೆಂದು ನಾನು ಈ ಕೆಳಗಿನಂತೆ ಹೇಳಿಕೆ ನೀಡುತ್ತೇನೆ. ನಾನು ಈಗಾಗಲೇ ಮೈಸೂರಿನ ಪ್ರಾಣಿ ಸಂಗ್ರಹಾಲಯ ನೋಡಿಕೊಳ್ಳುವ ಸರಕಾರದ ಕರ್ತವ್ಯಗಳ ಬಗ್ಗೆ ಸಭೆಗೆ ಸಾಕಷ್ಟು ಹೇಳಿಕೆಗಳನ್ನು ನೀಡಿದ್ದೇನೆ. ಪತ್ರಿಕೆಗಳಲ್ಲಿ ಸ್ವಂತದ ಪ್ರಚಾರ ಗಿಟ್ಟಿಸಿಕೊಳ್ಳುವುದಕ್ಕಾಗಿ ಕೆಲವೊಂದು ವಿಚಾರಗಳು ಬಂದಿವೆ ಎಂಬುದನ್ನು ಹೇಳಲು ಇಚ್ಛಿಸುತ್ತೇನೆ. ಸರಕಾರವು ಈ ಸಂಬಂಧ ವಿಸ್ತಾರವಾದ ಯೋಜನೆಯಂತೆ ಸಣ್ಣ ವಿಷಯಗಳನ್ನು ಕೂಡ ಸಾರ್ವಜನಿಕ ಹಿತಕ್ಕಾಗಿ ಸರಿಪಡಿಸಲು ಯೋಚಿಸಿದೆ. ಇತ್ತೀಚಿಗಿನ ಬೆಳವಣಿಗೆ ಎಂದರೆ ಸಾಮಾನ್ಯ ಕೆಲಸಗಾರರ 22.6.77 ರ ಒಂದು ದಿನದ ಮುಷ್ಕರ.

ಮೈಸೂರಿನ ಪ್ರಾಣಿಸಂಗ್ರಹಾಲಯುದಲ್ಲಿ 52 ಜನ ಮಾಲಿಗಳಾಗಿ ಖಾಯಂ ಕೆಲಸಗಾರರಿದ್ದಾರೆ. ಅದಲ್ಲದೆ ಪ್ರಾಣಿ ಸಂಗ್ರಹಾಲಯವು 56 ಕೆಲಸಗಾರರಿಂದ ಅವಿರತವಾಗಿ ಕೆಲಸ ತೆಗೆದುಕೊಳ್ಳುತ್ತಿದೆ. ಅವರು ಹಂಗಾಮಿ ಕೆಲಸಗಾರರಲ್ಲ ಬದಲಾಗಿ ಕ್ಯಾಷುಯಲ್ ಲೇಬರ್. ಇವರ ಸಂಬಳ ರೂ. 4.50 ರಿಂದ 7.50 ರವರೆಗೆ ಇದೆ. ಇವರನ್ನು ಅಗತ್ಯ ಬಿದ್ದಾಗ ಮಾತ್ರ ಸೇವೆಗೆ ಪಡೆದುಕೊಳ್ಳಲಾಗುವುದು. ಈ 56 ಜನರಲ್ಲಿ 6 ಜನ ಕಛೇರಿ ಕೆಲಸ ಮಾಡಿಕೊಂಡಿದ್ದು ವಿಶೇಷವಾಗಿ ಅವರಿಗೆ ಇಂತಹದೇ ಕೆಲಸ ನೀಡಲಾಗುತ್ತಿಲ್ಲ. ವಿಭಾಗವು ಕ್ಯುರೇಟರ್‌ರಿಗೆ ಈ ಆರು ಜನರ ಸೇವೆಯನ್ನು ತೆಗೆದುಕೊಳ್ಳಬಾರದೆಂದು ಸೂಚಿಸಿದೆ. ಇವರಲ್ಲಿ ಓರ್ವ ಹಳೆ ಪೆನನುದಾರನೂ ಇದ್ದಾನೆ. ಈ ಸೂಚನೆಯೇ ಮುಷ್ಕರಕ್ಕೆ ಕಾರಣವಾಗಿದೆ. ಇತರ ಕಾಷುಯಲ್ ಕೆಲಸಗಾರರಿಗೆ ಸಂಬಳ ನೀಡಲು ಯಾವುದೇ ತೊಂದರೆಗಳಿಲ್ಲ. ಆ ಆರು ಮಂದಿಯ ಮುಂದುವರಿಕೆಯ ಬೆದರಿಕೆಯೇ ಈ ಮುಷ್ಕರದ ಕಾರಣ. ಇತರ ದಿನಕೂಲಿ ಕೆಲಸಗಾರರಿಗೆ ನೀಡಲು ಸಂಬಳ ಬಗ್ಗೆ ಕನ್ಸರ್‌ವೇಟಿವ್ ಆಫ್ ಫಾರೆಸ್ಟ್ ರವರ ಪ್ರಯತ್ನ ಅಷ್ಟೇನು ಸಮಾಧಾನಕರವಾಗಿಲ್ಲ. 52 ಖಾಯಂ ಮಾಲಿಗಳು ಈ ಮುಷ್ಕರಕ್ಕೆ ಬೆಂಬಲ ಕೊಟ್ಟಿಲ್ಲ.

ಅವರು ಮುಷ್ಕರದ ಸಮಯದಲ್ಲಿ ನಡೆದ ಪರಿಶ್ರಮದ ಕೆಲಸದ ಮಧ್ಯೆ ಯಾವುದೇ ಅಹಿತಕರವಾದ ಘಟನೆ ಸಂಭವಿಸಿಲ್ಲ. ಮುಷ್ಕರದ ನೋಟೀಸು ಸಿಕ್ಕಿದ ತಕ್ಷಣ ಸರಕಾರವು ಯಾವುದೇ ತೊಂದರೆಯಾಗದಂತೆ ನೋಡಿಕೊಳ್ಳಲು ತೀರ್ಮಾನಿಸಿದೆ. ಸರಿಯಾದ ಅಸಿಸ್ಟೆಂಟ್ ಕನ್ಸರ್ ವೇಟರ್ ಆಫ್ ಪಾರೆಸ್ಟ್, ವೈಲ್ಡ್ ಲ್ಯಾಫ್ ಇವರಿಗೆ ಟೆಲಿಗ್ರಾಮ್‌ನಲ್ಲಿ ಸೂಚನೆ ನೀಡಿ ಪ್ರಾಣಿಸಂಗ್ರಹಾಲಯದ ಮೇಲ್ವಿಚಾರಣೆ ಅವರಿಗೆ ಇಲ್ಲದಿದ್ದರೂ ಕ್ಯುರೇಟರ್‌ರವರು ನೇಮಿಸಿದ ದಿನಕೂಲಿ ನೌಕರರಿಗೆ ಸಂಬಳ ಬಟವಾಡೆ ಮಾಡಲು ಸೂಚಿಸಲಾಗಿದೆ. ಯಾವುದೇ ರೀತಿಯ ಅಹಿತಕರ ಘಟನೆ ನಡೆಯದಂತೆ ಈ ಪ್ರಯತ್ನ.

ನಾನು ನನ್ನ ಮಾತನ್ನು ಸ್ಪಷ್ಟವಾಗಿ ಹೇಳಿದ್ದೇನೆ. ಏನೆಂದರೆ ಪ್ರಾಣಿ ಸಂಗ್ರಹಾಲಯದ ಆಡಳಿತ ವರ್ಗದಿಂದ ಆದ ಏನಾದರೂ ಅಡ್ಡಿ ಆತಂಕಗಳಿಗೆ ನಾನು ಆಸ್ಪದ ಕೊಟ್ಟಿಲ್ಲ ಹಾಗೂ ಇದಕ್ಕಾಗಿ ವೈಯಕ್ತಿಕ ಭೇಟಿಯ ಮಹತ್ವ ಬೇಕಿಲ್ಲ. ನನ್ನ ಮಾತನ್ನು ಪುನರಾವರ್ತಿಸುತ್ತೇನೆ.

ಜೂನಲ್ಲಿರತಕ್ಕಂಥ ಪ್ರಾಣಿಗಳನ್ನು ಕಾಪಾಡುವುದಕ್ಕೆ ಒಂದು ರೀತಿಯ ಕಲೆ ಬೇಕಾಗುತ್ತದೆ. ಈ ಒಂದು ಕಲೆಯನ್ನು ಆ ಅಧಿಕಾರಿ ಹೊಂದಿರುವುದರಿಂದ ಅವರನ್ನು ಅಲ್ಲಿಯೇ ಮುಂದುವರಿಸಲಾಗುತ್ತದೆ. ಅಂದರೆ ಆ ಅಧಿಕಾರಿ ಅನೇಕ ತಪ್ಪುಗಳನ್ನು ಮಾಡಿದರೂ ಸಹ ಅವರ ಮೇಲೆ ಯಾವ ಕ್ರಮಗಳನ್ನು ತೆಗೆದುಕೊಳ್ಳುವುದಿಲ್ಲವೆನ್ನುವ ಭಾವನೆ ತಮಗೆ ಬರುವುದು ಬೇಡ. ಈಗಾಗಲೇ ಅದರ ಮೇಲೆ ತನಿಖೆ ನಡೆದಿದೆ. ಅದು ಸಾಬೀತಾದರೆ, ಅವರು ಎಂತಹ ದೊಡ್ಡ ಅಧಿಕಾರಿಯೇ ಆಗಿರಲಿ ಅವರನ್ನು ಹಾಗೆಯೇ ಬಿಟ್ಟು ಬಿಡಬೇಕೆಂಬುದು ಸರ್ಕಾರದ ದೃಷ್ಟಿಯಲ್ಲ. ಪ್ರಾಣಿಗಳನ್ನು ಸಾಕುವ ಒಂದು ಕಲೆ ಆ ಅಧಿಕಾರಿಗೆ ತಿಳಿದಿರುವುದರಿಂದ ಅವರಿಗೆ ಹೆಚ್ಚಿನ ಒಂದು ಅವಕಾಶ ಕೊಟ್ಟಿದ್ದೇವೆ. ಆ ಒಂದು ಅವಕಾಶವನ್ನು ಅವರು ದುರುಪಯೋಗಪಡಿಸಿಕೊಂಡರೆ ಮಾಡಿದುಣ್ಣೋ ಮಹಾರಾಯ ಎಂಬಂತೆ ಆಗುತ್ತದೆ. ಕ್ರಮ ತೆಗೆದುಕೊಳ್ಳುವುದಕ್ಕೆ ಹಿಂದೆ ಮುಂದೆನೋಡುವುದಿಲ್ಲ. ನಾನು ನನ್ನ ಸ್ಟೇಟ್‌ಮೆಂಟ್‌ನಲ್ಲಿ ಹೇಳಿರುವ ಹಾಗೆ ಈಗಾಗಲೇ ಅವರ ಮೇಲೆ ಎನ್‌ಕ್ವೈರಿ ನಡೆದಿದೆ. ಅವರು ತಪ್ಪಿತಸ್ಥರಾದರೆ ಅವರು ಕ್ರಮಕ್ಕೆ ಪಾರ್ಟಿಯಾಗುತ್ತಾರೆ.

ನಾನು ಈಗಾಗಲೇ ಈ ಬಗ್ಗೆ ಹೇಳಿದ್ದೇನೆ. ಸಸ್ಪೆಂಡ್ ಮಾಡಬೇಕು ಎಂದರೆ ಆ ಕೇಸಿನಲ್ಲಿ ಪ್ರೈಮಾಫೇಸಿ ಪ್ರೂವ್ ಆದರೆ ಎನ್‌ಕ್ವೇರಿ ಮಾಡಿ ಸಸ್ಪೆಂಡ್ ಮಾಡಬಹುದು. ಅವನ ಕಲೆಗೆ ಅನುಗುಣವಾಗಿ ಸಹಾನುಭೂತಿಯಿಂದ ಹೆಚ್ಚು ಅವಕಾಶವನ್ನು ಅವನಿಗೆ ಕೊಟ್ಟಿದ್ದೇವೆ. ಇಲ್ಲಿ ಸರ್ಕಾರ ತನ್ನ ಕರ್ತವ್ಯ ಚ್ಯುತಿ ಮಾಡುತ್ತಿದೆ ಎಂದೇನು ಇಲ್ಲ. ಸರ್ಕಾರ ಯಾವ ಅಧಿಕಾರಿಯೇ ತಪ್ಪು ಮಾಡಿದರೂ ಸಹ ಆ ಅಧಿಕಾರಿಯ ಮೇಲೆ ಉಗ್ರವಾದ ಕ್ರಮ ತೆಗೆದುಕೊಂಡು ಅವರನ್ನು ದಂಡನೆ ಮಾಡುತ್ತದೆ.

## ಅರಣ್ಯ ಸಂರಕ್ಷಣೆ ಬಗ್ಗೆ:

ಮಾನ್ಯ ಅಧ್ಯಕ್ಷಣಿಯರೇ ಈಗ ಮಾತನಾಡಿದ ಸದಸ್ಯರೆಲ್ಲರೂ ಕಲವು ಉಪಯುಕ್ತವಾದ ಸಲಹೆಗಳನ್ನು ಕೊಟ್ಟಿದ್ದಾರೆ. ಮಾನ್ಯ ಪುಟ್ಟಸ್ವಾಮಿಯವರು ಜನತೆಯ ಹಿತ ದೃಷ್ಟಿಯಿಂದ ಈ ತಿದ್ದುಪಡಿಯ ಬಗ್ಗೆ ಜನರಲ್ಲಿ ಸಂದೇಹ ಉಳಿಯಬಾರದು ಮತ್ತು ಸಂದೇಹ ನಿವಾರಣೆ ಮಾಡುವುದಕ್ಕಾಗಿ ಕೆಲವು ಪ್ರಶ್ನೆಗಳನ್ನು ಕೇಳಿದ್ದಾರೆ. ನಾವು ಯಾವುದೇ ಕಾನೂನನ್ನು ಮಾಡುವಾಗ ಈ ರೀತಿ ರಿಸ್ಟ್ರಿಕ್ಷನ್ಸ್ ಹಾಕುವುದು ಇದೆ. ಆದರೆ ಮಾನ್ಯ ಸದಸ್ಯರುಗಳು ಇದರಲ್ಲಿ ಏನಾದರೂ ಸಂದೇಹ ಕಂಡರೆ ಮತ್ತು ಇದಕ್ಕೆ ಸಂಬಂಧವಾಗಿ ಸಲಹೆಗಳನ್ನು ಮಾಡಿದರೆ ಅವುಗಳನ್ನು ಅಳವಡಿಸಿ ರಿಸ್ಟ್ರಿಕ್ಷನ್ ಹಾಕಲಿಕ್ಕೆ ಅನುಕೂಲವಾಗಬಹುದು. ಈಗ ತಾನೆ ಮಾತನಾಡಿದಂಥ ಮಾನ್ಯ ವಿ.ಎಸ್. ಪಾಟೀಲರು ಇದೊಂದು ಹೊಸ ಕಾನೂನು ಎನ್ನುವ ಧಾಟಿಯಲ್ಲಿ ಮಾತನಾಡಿದರು. ಆದರೆ ಇದು ತಿದ್ದುಪಡಿ ಮಾತ್ರ ಎಂದು ನಾನು ಹೇಳಲು ಬಯಸುತ್ತೇನೆ. ಮೊದಲು ಇದ್ದಂಥ ಕಾನೂನಿನಲ್ಲಿ ಎರಡು ಅಂಶಗಳು ನಮೂದಾಗಿದ್ದುವು. 8 ಸಿಎಫ್‌ಟಿ ಇದ್ದಂಥ ಮರವನ್ನು ಕಡಿಯಲಿಕ್ಕೆ ಅವಕಾಶ ಇದ್ದುದನ್ನು ಈಗ ತಿದ್ದುಪಡಿ ಮಾಡಲಾಗಿದೆ. ಇದರಿಂದ ಹಳ್ಳಿಯ ಜನರಿಗೆ ಅನುಕೂಲವಾಗಬೇಕು ಎನ್ನುವ ದೃಷ್ಟಿಯಿಂದ ಈ ತಿದ್ದುಪಡಿಯನ್ನು ತಂದಿದ್ದೇವೆಯೇ ವಿನಹ ಬೇರೆ ಯಾವುದಕ್ಕೂ ನಾವು ತಿದ್ದುಪಡಿ ಮಾಡಿಲ್ಲ. ಮಾನ್ಯ ವಿ.ಎಸ್. ಪಾಟೀಲರು ಅನೇಕ ಸಲಹೆಗಳನ್ನು ಮಾಡಿದ್ದಾರೆ ರೈತರಿಗೆ ಮರಗಳನ್ನು ನೆಡುವುದಕ್ಕೆ ಉತ್ತೇಜನ ಕೊಡುವುದಕ್ಕಾಗಿ ಸರ್ಕಾರದವರು ನೇರವಾಗಿ ಮತ್ತು ಪುಕ್ಕಟೆಯಾಗಿ ಸೀಡ್ಲಿಂಗ್ ಕೊಡಬೇಕು ಎಂದು ಹೇಳಿದ್ದಾರೆ. ನಾವು ಈಗಾಗಲೇ ಅರಣ್ಯ ಇಲಾಖೆಯವರಿಗೆ ರೈತರಿಗೆ ಉಪಯುಕ್ತವಾದ ಸೀಡ್ಲಿಂಗ್‌ಗಳನ್ನು ಪುಕ್ಕಟೆಯಾಗಿ ಕೊಡುವುದಕ್ಕೆ ತಿಳಿಸಿದ್ದೇವೆ. ಇದರ ಬಗ್ಗೆ ನಾವು ಇನ್ನೂ ಪ್ರಾಪೋಗೇಟ್ ಮಾಡಬೇಕಾಗಿದೆ. ಕೆಲವು ವ್ಯಾಲ್ಯುಬಲ್ ಸೀಡ್ಲಿಂಗ್‌ಗಳನ್ನು ಈ ಹಣ ತೆಗೆದುಕೊಂಡು ಕೊಡಲಿಕ್ಕೆ ಅವಕಾಶ ಮಾಡಿಕೊಟ್ಟಿದ್ದೇವೆ. ಮಾನ್ಯ ಕೆ. ಪುಟ್ಟಸ್ವಾಮಿಯವರು ಇನ್ನೊಂದು ಮಾತನ್ನು ಹೇಳಿದರು. ಅದು ಏನೆಂದರೆ ಕಾನೂನು ಜಾರಿಯಲ್ಲಿ ಕೊಡುವಾಗ್ಗ ಅನೇಕ ಲೋಪ ದೋಷಗಳಾಗುತ್ತವೆ. ಡೆವಲಪ್ ಆಗಿ ಜನರಿಗೆ ತೊಂದರೆಯಾಗುತ್ತದೆ ಎಂದು ಹೇಳಿದರು. ಆದರೆ ನಾನು ಕೇಳುತ್ತೇನೆ. ನಾವು ನೀವೂ ಕೂಡಿ ಅಧಿಕಾರಿಗಳನ್ನು ಜನಾನುರಾಗಿಗಳ ಮಾಡಬೇಕು. ಅಧಿಕಾರಿಗಳು ಮತ್ತು ಅಧಿಕಾರೇತರೂ ಒಂದು ಗೂಡಿ ಎಲ್ಲಾ ಕಡೆಗಳಲ್ಲಿಯೂ ಮರಗಳನ್ನು ಬೆಳೆಸುವುದಕ್ಕೆ ಪ್ರಯತ್ನ ಮಾಡಬೇಕು. ಈ ಒಂದು ಉದ್ದೇಶದಿಂದಲೇ ನಾವು ತಿದ್ದುಪಡಿಯನ್ನು ತಂದಿದ್ದೇವೆ ವೆಟ್‌ಲ್ಯಾಂಡ್ಸ್ ಬಗ್ಗೆ ಮಾನ್ಯ ಕೆ. ಪುಟ್ಟಸ್ವಾಮಿಯವರು ಹೇಳಿದರು. ಆದರೆ ನಾವು ಈ ಗಿಡಗಳನ್ನು ಯಾವ ರೀತಿಯಾಗಿ ವಿಮರ್ಶೆ ಮಾಡಿ ಪರ್ಮಿಷನ್ ಕೊಡಬೇಕಾದ್ದು ಮುಖ್ಯ ಅಂಶ, ಅದಕ್ಕಾಗಿಯೇ ನಮ್ಮ ಸ್ಪೆಷಲ್ ಲಾ ಇರುವುದು ಎನ್ನುವ ಮಾತನ್ನು ನಾನು ಹೇಳುತ್ತೇನೆ. ಹಳ್ಳಿಗಳಲ್ಲಿ ರೈತರ ಹೊಲದಲ್ಲಿ ರೋಸ್‌ವುಡ್ ಇದ್ದರೆ ಅದನ್ನು ಕಡಿಯುವುದಕ್ಕೆ ಬರುವುದಿಲ್ಲ. ಅದನ್ನು ಅವನು ಸರ್ಕಾರಕ್ಕೆ ಮಾರಬೇಕಾಗುತ್ತದೆ. ಅದಕ್ಕಾಗಿಯೇ ವೆಟ್‌ಲ್ಯಾಂಡ್‌ನಲ್ಲಿದ್ದ ಮರಗಳನ್ನು ಸ್ಪೆಷಲ್ ಆಗಿ ಪರಿಗಣಿಸಬೇಕೆಂದು ಹೇಳಿದ್ದೇನೆ.

ಇದನ್ನು ಲಾಗು ಮಾಡುವುದಕ್ಕಾಗುವುದಿಲ್ಲ ಎಂದು ಹೇಳಿದರೂ ಸಹ ವೆಟ್‌ಲ್ಯಾಂಡ್‌ನಲ್ಲಿ ಯಾವುದಾದರೂ ವ್ಯಾಲ್ಯೂ ವುಡ್ ಇರಲಿ ಅಥವಾ ರೋಸ್ ವುಡ್ ಇರಲಿ ಇಷ್ಟಷ್ಟು ಇದೆ

ಎಂದು ಕಾಗದಗಳನ್ನು ಬರೆದು ತಿಳಿಸಿದರೆ ಅದನ್ನು ಈ ಆಕ್ಟ್‌ನಲ್ಲಿ ಯಾವ ರೀತಿ ಅಳವಡಿಸುವುದಕ್ಕೆ ಸಾಧ್ಯವೋ ಮತ್ತು ಇದರ ಬಗ್ಗೆ ಯಾವ ರೀತಿ ಒಂದು ರಿಸ್ಟ್ರಿಕ್ಷನ್ ಮಾಡುವುದಕ್ಕೆ ಸಾಧ್ಯವೋ ಅದನ್ನು ಮಾಡುವುದಕ್ಕೆ ಅನುಕೂಲವಾಗುತ್ತದೆ. ಆ ರೀತಿ ಬರೆದು ತಿಳಿಸಿದರೆ ಮುಂದೆ ಇದಕ್ಕೆ ಒಂದು ಅನುವು ಮಾಡುಕೊಟ್ಟಂತಾಗುತ್ತದೆ ಅಂತ ಹೇಳಿ ಮಾನ್ಯ ಸದಸ್ಯರು ಈ ಬಿಲ್ಲನ್ನು ಸರ್ವಾನುಮತದಿಂದ ಮಂಜೂರು ಮಾಡಿಕೊಡಬೇಕು ಎಂದು ಕೇಳುತ್ತೇನೆ.

# ಸಿಮೆಂಟ್ ಅಭಾವದ ಬಗ್ಗೆ ಸರ್ಕಾರದ ಉತ್ತರ

ಸಿಮೆಂಟ್ ಬಗ್ಗೆ ಬಹಳಷ್ಟು ತಕರಾರು ಬರುತ್ತಿವೆ. ಸದನದ ಎದುರಿಗೂ ಹೇಳಿದ್ದೇನೆ ಹೊರಗೂ ಹೇಳಿ ಹೇಳಿ ಸಾಕಾಗಿದೆ. ಸಿಮೆಂಟ್ ನಿಯಂತ್ರಣ ಕೇಂದ್ರ ಸರ್ಕಾರಕ್ಕೆ ಒಳಪಟ್ಟಿರುವಂತಾದ್ದು. 35 ರೂಪಾಯಿ ಕೊಟ್ಟರೆ ಸಿಗುತ್ತೆ, 19 ರೂಪಾಯಿ ಕೊಟ್ಟರೆ ಇಲ್ಲ. ಇದಕ್ಕೆ ಉತ್ತರವೇ ಇಲ್ಲ. ನಿಜ, ಈ ಖದೀಮರ ನಾಟಕಕ್ಕೆ ಕೊನೆಯೇ ಇಲ್ಲ. ಸಿಮೆಂಟ್ ನಿಯಂತ್ರಣ ಮಾಡಬೇಕಾದರೆ ಸಂಪೂರ್ಣ ಅಧಿಕಾರ ನಮಗೆ ಇಲ್ಲ. ಯಾರು ಹೆಚ್ಚಿಗೆ ಬೆಲೆಗೆ ಮಾರುತ್ತಾರೆ. ಅವರು ಕಾನೂನು ಪ್ರಕಾರ ಕಾಗ್‌ನಿಸಿಬಲ್ ಆಫೆನ್ಸ್‌ಗೆ ಗುರಿಯಾಗುತ್ತಾನೆ. ಈಗ ಬಾಗಲಕೋಟೆ ಸಿಮೆಂಟ್ ಕಂಪೆನಿ ವಿಚಾರದಲ್ಲಿ ಸಿ.ಬಿ.ಐ. ಇನ್‌ವೆಸ್ಟಿಗೇಷನ್ ನಡೆಯುತ್ತಿದೆ. ಸಿಮೆಂಟ್ ಹೆಚ್ಚಿನ ಧಾರಣೆಗೆ ಮಾರುತ್ತಿದ್ದು ಅದರ ಮೇಲೆ ಚಾರ್ಜ್ ಷೀಟ್ ಹಾಕಿ ಕೋರ್ಟಿಗೆ ಹಾಕಿದ್ದಾರೆ. ಕೋಲಾರ ಡೆಪ್ಯೂಟಿ ಕಮೀಷನ್‌ರವರು ಸಿಮೆಂಟ್ ಹೆಚ್ಚಿಗೆ ಧಾರಣೆಗೆ ಮಾರುವವರ ಮೇಲೆ ರುಜುವಾತು ಮಾಡಿ ದಾಖಲೆ ಮಾಡಿದ್ದಾರೆ. ಬೆಂಗಳೂರಿನಲ್ಲಿ ಮಾತ್ರ ಸದ್ದಿಲ್ಲದಂತೆ ಈ ವ್ಯವಹಾರ ನಡೆಯುತ್ತಿದೆ. ಈ ಖದೀಮರನ್ನು ಹಿಡಿಯಲು ನಿಮ್ಮ ಸಹಕಾರ ಕೋರುತ್ತೇನೆ. ಈ ಖದೀಮರನ್ನು ಹಿಡಿಯುವುದಕ್ಕೆ ಮಂತ್ರಿಮಂಡಲದಿಂದ ಸಾಧ್ಯವಿಲ್ಲ. ನಿಮ್ಮೆಲ್ಲರ ಸಂಪೂರ್ಣ ಸಹಕಾರಬೇಕೆಂದು ಈ ಸದನದ ಮುಖಾಂತರ ಹೇಳುತ್ತೇನೆ. ಸಿಮೆಂಟ್ ವಿತರಣೆಯಲ್ಲಿ ಹೆಚ್ಚು ಬೆಲೆಗೆ ಮಾರುವವರಿಗೆ ಕಾಳಸಂತೆಯಲ್ಲಿ ಮಾರುವವರಿಗೆ ಉಗ್ರವಾದ ದಂಡನೆ ಜೊತೆಗೆ ಅವರ ಲೈಸನ್ಸುಗಳನ್ನು ಕಿತ್ತುಹಾಕಿ ಬ್ಲಾಕ್ ಲಿಸ್ಟಿಗೆ ಸಿಗುವ ಹಾಗೆ ಮಾಡಬೇಕು. ಅಲ್ಲದೆ ಸಿಮೆಂಟ್ ಪಾಲಿಸಿ ಬಗ್ಗೆ ಸರಿಯಾದ ಪಾಲಿಸಿ ಸ್ಟೇಟ್‌ಮೆಂಟ್‌ನ್ನು ನಮ್ಮ ಅಧಿಕಾರಿಗಳು ತಯಾರು ಮಾಡಿಲ್ಲ. ಇವತ್ತು ಇದ್ದ ಪರಿಸ್ಥಿತಿಯಲ್ಲಿ 45 ರಷ್ಟು ಸರ್ಕಾರದ ಬಾಬ್ತಿನ ಅಭಿವೃದ್ಧಿಗಾಗಿ ಹೋಗುತ್ತಿದೆ. ಇಂಡಿಸ್ಟ್ರೀಸ್‌ಗೆ ವಿತರಣೆ ಮಾಡಬೇಕಾಗುತ್ತದೆ. 55 ಭಾಗ ಪಬ್ಲಿಕ್ ಕನ್‌ಸಮ್‌ಷನ್ ಇದೆ. ಅನೇಕ ಸದಸ್ಯರ ಅಭಿಪ್ರಾಯದಲ್ಲಿ ಏಜೆನ್ಸಿ, ವ್ಯವಸ್ಥೆ ನಿಯಂತ್ರಣ ಜಾರಿಗೆ ತಂದರೆ, ಜನರಿಗೆ ಸಮರ್ಪಕವಾದ ರೀತಿಯಲ್ಲಿ ವಿತರಣೆ ಮಾಡುವುದಕ್ಕೆ ಆಗುತ್ತದೆ ಎಂದು ಈ ಸಂದರ್ಭದಲ್ಲಿ ಹೇಳುವುದಕ್ಕೆ ಇಷ್ಟಪಡುತ್ತೇನೆ.

ಮಾನ್ಯ ಸದಸ್ಯರು ಹೇಳಿದ ಅಭಿಪ್ರಾಯಗಳನ್ನು ಗಮನದಲ್ಲಿರಿಸಿಕೊಳ್ಳುತ್ತೇನೆ. ಹೊಸದಾಗಿ ಪಾಲಿಸಿ ಸ್ಟೇಟ್‌ಮೆಂಟ್ ಮಾಡುವಾಗ ಆ ನಿಯಮಗಳನ್ನು ಪರ್ಯಾಲೋಚನೆ ಮಾಡಿ ಯಾವ ರೀತಿ ನಿಯಂತ್ರಣ ಮಾಡುವುದಕ್ಕೆ ಸಾಧ್ಯ ಇದೆ ಅದನ್ನು ಯೋಚನೆ ಮಾಡಿ ಆ ನಿಯಂತ್ರಣಗಳನ್ನು ಹಾಕಲಿಕ್ಕೆ ಪ್ರಯತ್ನ ಮಾಡುತ್ತೇನೆ ಎಂದು ನಾನು ಈ ಸಂದರ್ಭದಲ್ಲಿ ಹೇಳಬಯಸುತ್ತೇನೆ.

ಡೈರಕ್ಟರ್ ಆಫ್ ಇಂಡಸ್ಟ್ರೀಸ್ ಎಂಡ್ ಕಾಮರ್ಸ್ ಇವರು ಅನುಮತಿ ಪತ್ರ ನೀಡುವ ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ಸರಕಾರಿ ಆಜ್ಞೆ ಸಂಖ್ಯೆ ಸಿ. 117 ಪಿ.ಸಿ.ಎಸ್. 75 ದಿನಾಂಕ 17.3.1975ರ ಆಧಾರದ ಮೇಲೆ ಕೃಷಿಗೆ ಸಂಬಂಧಪಟ್ಟಂತೆ ಸಿಮೆಂಟನ್ನು ಆದ್ಯತೆಯ ಮೇಲೆ ನೀಡಲು ಸೂಚಿಸಿದ್ದಾರೆ. ಇಡೀ ರಾಜ್ಯದ ಸಿಮೆಂಟಿನ ಅಭಾವವು ಸ್ವಲ್ಪ ಮಟ್ಟಿಗೆ ಕಡಿತಗೊಂಡಿದೆ. ಬೇಕಾದಷ್ಟು ಸಿಮೆಂಟು ಮಾರ್ಕೆಟಿನಲ್ಲಿ ಈಗ ದೊರೆಯುತ್ತದೆ. ಇನ್ನೂ

---

ವಿಸನದಿ: 18-7-1977

ಕಡಿಮೆ ಆದರೆ ಅನುಮತಿ ಪತ್ರ ನೀಡುವ ಜಿಲ್ಲೆಯ ಸಂಬಂಧಪಟ್ಟ ಅಧಿಕಾರಿಗಳು ವಿಶೇಷವಾಗಿ ಕೃಷಿಗೆ ಸಂಬಂಧಿಸಿದಂತೆ ಇದನ್ನು ನಿಗದಿಪಡಿಸಬಹುದು.

ಈ ಬಗ್ಗೆ ಅಧಿಕಾರಿಗಳು ಸ್ಪಾಟ್ ಇನ್ಸ್‌ಪೆಕ್ಷನ್ ಮಾಡಬೇಕಾಗಿಲ್ಲ. ಏಕೆಂದರೆ ಈಗ ಸಿಮೆಂಟಿನ ಅಭಾವವೇನೂ ಇಲ್ಲ. ಆದ್ದರಿಂದ ವ್ಯವಸಾಯಗಾರರಿಗೆ ಸಿಮೆಂಟ್ ಒದಗಿಸಬೇಕೆಂದು ಇನ್ನೊಮ್ಮೆ ನಾನು ಜಿಲ್ಲಾಧಿಕಾರಿಯವರಿಗೆ ಪತ್ರ ಬರೆಯುತ್ತೇನೆ. ಆಗಲೂ ಅವರು ರೈತರಿಗೆ ಸಿಮೆಂಟ್ ಒದಗಿಸದಿದ್ದರೆ ಅದನ್ನು ನನ್ನ ಗಮನಕ್ಕೆ ತಂದರೆ ನಾನು ಅವರ ಮೇಲೆ ಸೂಕ್ತ ಕ್ರಮ ಕೈಗೊಳ್ಳುತ್ತೇನೆ. ರೈತರಿಗೆ ಮೊದಲು ಆದ್ಯತೆ ಕೊಡಬೇಕೆಂದು ಸರ್ಕಾರದ ಮುಖ್ಯ ಉದ್ದೇಶವಾಗಿದೆ. ಆದ್ದರಿಂದ ಎಲ್ಲ ಅಧಿಕಾರಿಗಳು ರೈತರಿಗೆ ತೊಂದರೆಯಾಗದಂತೆ ಸಿಮೆಂಟ್ ಹಂಚಬೇಕೆಂದು ಈ ಮೂಲಕ ತಿಳಿಯಪಡಿಸುತ್ತಿದ್ದೇನೆ. ಒಂದು ವೇಳೆ ಯಾವ ಅಧಿಕಾರಿಯಾದರೂ ತಪ್ಪು ಮಾಡಿದರೆ ಅವರ ಮೇಲೆ ಉಗ್ರ ಕ್ರಮ ಕೈಗೊಳ್ಳುತ್ತೇನೆ

# ಇನಾಮ್ ರದ್ದಿಯಾತಿ ತಿದ್ದುಪಡಿ ವಿಧೇಯಕ, 1977ರ ಮೇಲಿನ ಚರ್ಚೆ

ಮಾನ್ಯ ಸಭಾಧ್ಯಕ್ಷರೇ ಈ ಕಾನೂನನ್ನು ಈ ಸಭೆಯ ಎದುರಿಗೆ ಎಲ್ಲ ಸದಸ್ಯರ ಮನವನ್ನು ಅರಿತು ತಂದಿದ್ದಕ್ಕಾಗಿ ರೆವಿನ್ಯೂ ಖಾತೆಯ ಸಚಿವರನ್ನು ಈ ಸಂದರ್ಭದಲ್ಲಿ ಅಭಿನಂದಿಸುತ್ತೇನೆ. ಅವರು ಈ ಬಿಲ್ಲನ್ನು ಪಾಸ್ ಮಾಡುವ ಕಾಲಕ್ಕೆ ಇದ್ದಿದ್ದರೆ ಸಂತೋಷವಾಗುತ್ತಿತ್ತು. ಅವರಿಗೆ ಮೈಯಲ್ಲಿ ಸ್ವಸ್ಥವಿಲ್ಲದಿದ್ದುದ್ದರಿಂದ ಆ ಕಾರ್ಯವನ್ನು ನನಗೆ ಒಪ್ಪಿಸಿದ್ದಾರೆ. ಆದುದರಿಂದ ನಾನು ಈ ಬಿಲ್ಲನ್ನು ಈ ಸದನದ ಎದುರಿಗೆ ಮಂಡಿಸಲಿಕ್ಕೆ ಸಂತೋಷ ಮತ್ತು ಅಭಿಮಾನವನ್ನು ಹೊಂದಿದ್ದೇನೆ. ಈ ಬಿಲ್ಲಿಗೆ ಎರಡೂ ಕಡೆಯ ಸದಸ್ಯರು ಹೆಚ್ಚು ರಚನಾತ್ಮಕವಾದ ಸಲಹೆಗಳನ್ನು ಕೊಟ್ಟಿದ್ದಾರೆ. ಅನುಭವಿಗಳಾದ ಶ್ರೀಮಾನ್ ಪುಟ್ಟಸ್ವಾಮಿಯವರು ಈ ಬಿಲ್ಲಿನ ಹಿನ್ನೆಲೆಯಲ್ಲಿ ಈ ರಾಜ್ಯದ ಬೇರೆ ಬೇರೆ ಭಾಗಗಳು ಒಂದು ಗೂಡಿರುವಾಗ ಯಾವ ತರಗತಿಯ ಇನಾಮುಗಳು ಇರಬೇಕು ಎನ್ನುವುದನ್ನು ಆಡಳಿತಾತ್ಮಕ ದೃಷ್ಟಿಯಿಂದ ಕಂಡುಹಿಡಿಯಬೇಕು ಎಂದು ಹೇಳಿದ್ದಾರೆ. ಇದು ಸಂತೋಷದಾಯಕವಾದ ಸಂಗತಿ. ರೆವಿನ್ಯೂ ಅಧಿಕಾರಿಗಳು ಈ ದಿಶೆಯಲ್ಲಿ ಮುತುವರ್ಜಿ ವಹಿಸಿ, ಯಾವ ಯಾವ ತರಹ ಇನಾಮುಗಳು ನಮ್ಮ ರಾಜ್ಯದಲ್ಲಿ ಇವೆ ಎಂಬ ತಃಖ್ತೆಯನ್ನು ತಯಾರು ಮಾಡುತ್ತಾರೆ ಎಂದು ನಾನು ಭಾವನೆ ಮಾಡುತ್ತೇನೆ. ಶ್ರೀಮಾನ್ ಪುಟ್ಟಸ್ವಾಮಿಯವರು ಇವೆಲ್ಲ ಬಿಲ್ಲುಗಳನ್ನು ಪಾಸ್ ಮಾಡಿದ್ದೇವೆ, ಮತ್ತೊಮ್ಮೆ ಈ ಬಿಲ್ಲನ್ನು ತಂದಂಥ ಉದ್ದೇಶವೇನು ಎಂದು ಕೇಳಿದ್ದಾರೆ. ನಮ್ಮ ರಾಜ್ಯದಲ್ಲಿ ವಿಲೀನಗೊಳಿಸಲ್ಪಟ್ಟ ಪ್ರದೇಶಗಳಲ್ಲಿ ಬೇರೆ ಬೇರೆ ಇನಾಮುಗಳನ್ನು ರದ್ದುಪಡಿಸಿದರೂ ಕೂಡ ಎಲ್ಲಾ ಕಾನೂನುಗಳನ್ನು ಕೂಡಿಸಿ ಒಂದು ಕ್ರೋಢೀಕೃತವಾದ ಮತ್ತು ಇಡಿ ರಾಜ್ಯಕ್ಕೆಲ್ಲಾ ಅನ್ವಯಿಸುವ ಒಂದು ಯೂನಿಫಾರಂ ಕಾನೂನು ಇರಬೇಕು ಎನ್ನುವ ದೃಷ್ಟಿ ಪ್ರಮುಖವಾಗಿದೆ. ಇನಾಮು ರದ್ದಾದುದರಿಂದ ಸಾಗುವಳಿ ಮಾಡುವ ರೈತನಾಗಲೀ, ಇನಾಮ್‌ದಾರ ಆಗಿರತಕ್ಕಂಥ ಆಕ್ಯುಪೆಂಟ್ ಆಗಲೀ ಯಾವ ದರ್ಜೆಗೆ ಹೇಗೆ ಹೇಗೆ ಇರಬೇಕು. ಟೆನೆನ್ಸಿ ಕಾನೂನಿನೊಂದಿಗೆ ಯಾವ ರೀತಿ ಹೊಂದಾಣಿಕೆ ಮಾಡಬೇಕು ಎಂಬುದನ್ನು ಎಲ್ಲಾ ಅಳವಡಿಸಿಕೊಂಡು ಈ ಕಾನೂನು ತರಲಾಗಿದೆ. ಈ ತಿದ್ದುಪಡಿ ಮಸೂದೆಯ ಬಗ್ಗೆ ಮಾನ್ಯ ಸದಸ್ಯರನೇಕರು ಅನೇಕ ಸಲಹೆಗಳನ್ನು ಕೊಟ್ಟಿದ್ದಾರೆ. ಮಾನ್ಯ ಬೆಳ್ಳಿಯಪ್ಪನವರು ಮತ್ತು ಮಾನ್ಯ ಕಕ್ಕಿಲ್ಲಾಯರವರು ಈಗ ಇಲ್ಲಿಲ್ಲ. ಕೂರ್ಗ್ ಪ್ರದೇಶದ ದೃಷ್ಟಿಯಿಂದ ಬಹಳ ಮಹತ್ವವಾದಂಥ ಸಲಹೆಗಳನ್ನು ಶ್ರೀಮಾನ್ ಬೆಳ್ಳಿಯಪ್ಪನವರು ಈ ಸದನದ ಎದುರಿಗೆ ಇಟ್ಟಿದ್ದಾರೆ. ಸರ್ಕಾರ ಅದನ್ನು ಈಗಾಗಲೇ ವಿಚಾರಮಾಡಿ ಒಂದು ಅಮೆಂಡ್‌ಮೆಂಟನ್ನು ತರಬೇಕು ಎಂದು ನಿರ್ಧರಿಸಿದೆ. ಈಗ ಅಮೆಂಡ್‌ಮೆಂಟನ್ನು ತರುತ್ತಾ ಇದ್ದೇನೆ. ಈ ಅಮೆಂಡ್‌ಮೆಂಟ್ ಕೂರ್ಗದಲ್ಲಾಗಲೀ ಮತ್ತಿತರ ಭಾಗಗಳಲ್ಲಾಗಲೀ ರೈತಾಪಿ ಜನ ಉಪಯೋಗ ಮಾಡುವಂಥ ಜಮೀನು ಏನಿದೆ. ಇಂದು ಯಾವ ರೀತಿ ಉಪಯೋಗ ಮಾಡುತ್ತಾರೋ ಅದೇ ರೀತಿ ವಹಿವಾಟು ಮಾಡಿಕೊಳ್ಳಲಿಕ್ಕೆ ಅನುಕೂಲವಾಗುವಂತಹ ಅಮೆಂಡ್‌ಮೆಂಟ್ ಇದೆ. ಮಾನ್ಯ ಸದಸ್ಯರಾದ ಕಕ್ಕಿಲ್ಲಾಯರವರು ಒಂದು ಅಮೆಂಡ್‌ಮೆಂಟ್ ತಂದಿದ್ದಾರೆ. ಸೆಕ್ಷನ್ 5-6 ಕ್ಕೆ

---

ವಿಸನದಿ: 20-7-1977

ದೀರ್ಘವಾದ ಅಮೆಂಡ್‌ಮೆಂಟನ್ನು ಸರ್ಕಾರ ತರುವಂಥ ಉದ್ದೇಶವನ್ನು ಹೊಂದಿದೆ. ಅದೂ ಅಲ್ಲದೆ ಕ್ಲಾಸ್ 18 ಕ್ಕೂ ಸಹ ಮತ್ತೊಂದು ಅಮೆಂಡ್‌ಮೆಂಟನ್ನು ತಂದು ಡೆಪ್ಯುಟಿ ಕಮೀಷನರ್ ಯಾವ ರೀತಿಯಾಗಿ ಸರ್ಕಾರದಿಂದ ಅಧಿಕೃತವಾದಂಥ ಅಧಿಕಾರಿಯಾಗುತ್ತಾ ಇದ್ದಾರೆ ಎನ್ನುವುದರ ಬಗ್ಗೆ ಉಲ್ಲೇಖ ಇದೆ. ಒಟ್ಟಿನ ಮೇಲೆ ಈ ಕಾನೂನಿನಿಂದ ಬೇರೆ ಬೇರೆ ವಿಭಾಗಗಳಲ್ಲಿ ಬೇರೆ ಬೇರೆ ತರಗತಿಯ ಇನಾಮುಗಳೇನಿವೆ ಅವು ನಿರ್ದಿಷ್ಟವಾದ ದಿವಸ ಮುಕ್ತಾಯಗೊಂಡು ಇನಾಮ್ ಪದ್ಧತಿ ಸಂಪೂರ್ಣವಾಗಿ ನಿರ್ನಾಮವಾಗಿ ಸಮಾಜವಾದೀ ಸ್ವರೂಪವನ್ನು ಇನಾಂ ಪದ್ಧತಿಗೆ ಕೊಡುವಂಥ ಕಾನೂನಾಗಿದೆ. ಇದನ್ನು ಎಲ್ಲಾ ಸದಸ್ಯರೂ ಹೃತ್ಪೂರ್ವಕವಾಗಿ ಸ್ವಾಗತಿಸಿದ್ದಕ್ಕಾಗಿ, ಅವರಿಗೆ ವಂದಿಸುತ್ತೇನೆ ಮತ್ತು ಇದನ್ನು ಎಲ್ಲರೂ ಸರ್ವಾನುಮತದಿಂದ ಪಾಸ್‌ಮಾಡಿ ಕೊಡಬೇಕೆಂದು ಕೇಳಿಕೊಳ್ಳುತ್ತೇನೆ.

ಮಾನ್ಯ ಸಭಾಪತಿಯವರೇ, ಇದು ಒಂದು ಸಣ್ಣ ಬಿಲ್ಲು. ಈಗ ಮಂಡಿಸಲಾಗುತ್ತಿರುವ ಮಂಡನೆಯಲ್ಲಿ ಒಟ್ಟು 10 ಬಿಲ್ಲುಗಳಿದ್ದು ಈ ಬಿಲ್ಲು ಒಂದು ಸಂಯೋಜಿಸಿದ ಬಿಲ್ಲಾಗಿದೆ. ಇನಾಮ್ ಯಾವುದೇ ಕಾನೂನಿಗೆ ಸೇರಿಕೊಂಡಿಲ್ಲ. ಈ ಬಿಲ್ಲಿನಲ್ಲಿ ಸ್ಪಷ್ಟವಾಗಿ ಎಲ್ಲಾ ಇನಾಮ್‌ನ್ನು ಸೇರಿಸಲು ಪ್ರಯತ್ನಿಸಿದ್ದೇನೆ. ಇನಾಮ್‌ಗಳು ಅಲ್ಲಲ್ಲಿರುವುದರಿಂದ ರಾಜ್ಯದ ಒಳಿತಿಗಾಗಿ ಒಂದೇ ಬಿಲ್ಲಿನಲ್ಲಿ ಸೇರ್ಪಡೆಗೊಳಿಸುವುದು ಅವಶ್ಯವಿದೆ. ಸೇರಿಕೆ ದಿನದಂದು ಇನಾಮಿನ ಅವಧಿಯು ರದ್ದುಗೊಳಿಸಲ್ಪಡುತ್ತದೆ. ಇಲ್ಲಿ ನಮ್ಮಲ್ಲಿ ಹಿಡುವಳಿದಾರರಿದ್ದಾರೆ. 1.3.74 ರ ಮೊದಲಿನ ಹಿಡುವಳಿದಾರ ನೊಂದಣಿಗೊಂಡ ಹಿಡುವಳಿದಾರನಾಗುತ್ತಾನೆ. ಇನಾಮ್‌ದಾರನು ಸ್ವಂತ ಹಿಡುವಳಿ ಮಾಡುವವನಾಗಿದ್ದರೆ ಆತನೂ ನೊಂದಣಿಗೊಂಡ ಆಸ್ತಿಯ ಸ್ವಾಧೀನವುಳ್ಳವನಾಗುತ್ತಾನೆ. ಸ್ವಾಧೀನತೆಯ ನೊಂದಣಿ ಲ್ಯಾಂಡ್ ರಿಫೋರ್ಮ್ಸ್ ಆಕ್ಟ್‌ಗೆ ಅರ್ಜಿಯ ಮೇಲೆ ಸಿಗುತ್ತದೆ ಇನಾಮ್ ವಜಾ ಮಾಡುವುದರ ಮೇಲಿನ ಪರಿಹಾರ ಇಡೀ ಇನಾಮ್‌ನ ಮೇಲೆ ಮಾತ್ರ ಪ್ರತಿಯೊಂದಕ್ಕೆ ಅಲ್ಲ. ಪರಿಹಾರವು ಆಸ್ತಿ ನೊಂದಣಿಯ ಹತ್ತುಪಟ್ಟು ಮತ್ತು ಗಂಧದ ಮರ ಹಾಗೂ ಇತರ ವಾರ್ಷಿಕ ಉತ್ಪತ್ತಿಯ ಮರಗಳ ಮೇಲೆ ಕೊಡುವಂತದ್ದು, ವಾರ್ಷಿಕ ನಿಖರ ವರಮಾನವು ಆಸ್ತಿಯ ಉತ್ಪತ್ತಿ, ಜೋಡಿ ಕ್ವಿಟ್‌ರೆಂಟ್ ಪಾವತಿ ಇನಾಮ್‌ದಾರರಿಂದ ಮುಂತಾದ ಪರಿಹಾರವು ನಗದು ರೂಪದಲ್ಲಿ ಅಥವಾ ಬಾಂಡುಗಳ ಮೂಲಕ ಆಗಿರುತ್ತದೆ.

ಇನಾಮ್ ಪಾವತಿಯ ವ್ಯವಸ್ಥೆ ಕೂಡ ಮಾಡಿದೆ. ಸರಕಾರದ ಹಿಂದಿನ ಒಪ್ಪಿಗೆಯ ಆಧಾರದ ಮೇಲೆ ಜಿಲ್ಲಾಧಿಕಾರಿಗಳು ಪರಿಹಾರ ನಿಗದಿಪಡಿಸಬಹುದು. ಧಾರ್ಮಿಕ ಮತ್ತು ದಾನ ಧರ್ಮ ಇನಾಮ್ ವಾರ್ಷಿಕವಾಗಿ ಸಂದಾಯವಾಗಬೇಕು. 10 ಕಂತುಗಳಲ್ಲಿ ಈ ಹಣವನ್ನು ಸಲ್ಲಿಸಬೇಕು. ಈ ಬಿಲ್ಲು ಬೇರೆ ಬೇರೆ ರೀತಿಯ ಇನಾಮಿನ ಬದಲಾಗಿ ಎಲ್ಲಾ ರಾಜ್ಯಗಳ ಶಾಸಕಾಂಗಗಳಲ್ಲಿ ಸಮಾನವಾಗಿರುತ್ತದೆ. ಆದ್ದರಿಂದ ಇದನ್ನು ಸಭೆಯು ಒಪ್ಪಿಕೊಳ್ಳಬೇಕೆಂದು ಕೇಳಿಕೊಳ್ಳುತ್ತೇನೆ. ಅಲ್ಲದೆ ಇದು 39 ವಿಭಾಗಗಳ ಒಂದು ಸಣ್ಣ ಬಿಲ್ಲು ಕೂಡಾ ಆಗಿದೆ 5.6 ಸೆಕ್ಷನ್‌ಗಳು ಸಾಮಾನ್ಯವಾಗಿರುತ್ತದೆ ಈ ಇಡೀ ಸಭೆಯು ವಿರೋಧವಿಲ್ಲದೆ ಸಮಾನ ಶಾಸಕಾಂಗದ ಆಧಾರಕ್ಕಾಗಿ ಒಪ್ಪಬಹುದೆಂದು ನಂಬುತ್ತೇನೆ.

ಕರ್ನಾಟಕದಲ್ಲಿ ಹಲವು ನಮೂನೆಯ ಇನಾಮುಗಳಿವೆ. ಉದಾಹರಣೆಗೆ ಕೂರ್ಗಿನಲ್ಲಿ "ಜೆಮ್ಮ ಮಾಲಿ" ಕುಂದಗೋಳಿನಲ್ಲಿ "ಪರ್ಸನಲ್ ಇನಾಮ್" ಸಂಡೂರಿನಲ್ಲಿಯೂ ಕೆಲವು

ಇನಾಮ್‌ಗಳಿವೆ. ಇನಾಮ್ ವಜಾ ಆದರೂ ದೃಢ ಹಿಡುವಳಿದಾರರು ಹೇಗೆ ಆಸ್ತಿಯನ್ನು ಉಪಯೋಗಿಸುವುದು, ಯಾರು ಹಿಡುವಳಿದಾರರು ಮುಂತಾದ ಪ್ರಶ್ನೆ ಏಳುತ್ತದೆ. ಮಾನ್ಯ ಸದಸ್ಯರು ನನ್ನ ಮಾತನ್ನು ಅರ್ಥಯಿಸಿ ಕೊಳ್ಳಬಹುದೆಂದು ನಂಬಿದ್ದೇನೆ. ಕೆಲವು ಇನಾಮುಗಳು ಆಸ್ತಿ ದಾಖಲೆಯಲ್ಲಿರುವವರಿಗೆ ಸಂಬಂಧಪಟ್ಟದ್ದು. ದಾನ ಧರ್ಮದ ಸಂಸ್ಥೆಗಳಿಗೆ ಸೇರಿದ ಇನಾಮುಗಳು "ದೇವದಯಾ" ಮತ್ತು "ಧರ್ಮದಯಾ" ಇನಾಮ್ ಎಂದು ಕರೆಯಲ್ಪಡುತ್ತದೆ. ಮಾನ್ಯ ಸದಸ್ಯರಿಗೆ ಗೊತ್ತಿರಬೇಕು. ಕೆಲವು ಹಳ್ಳಿಗಳಲ್ಲಿ ಹಳೆ ಹೆಸರಿನ "ಪರ್ಸನಲ್ ಇನಾಮ್" ಮುಂದುವರಿದು ವಂಶಪಾರಂಪರ್ಯವಾಗಿ ಪಟೇಲ ಮತ್ತು ಶಾನುಬೋಗರ ಕೈಯಲ್ಲಿದೆ. ನಾವು ಶಾನುಭೋಗತನ ರದ್ದು ಮಾಡಿದರೂ ಇನ್ನೂ ರಾಜ್ಯದ ಕೆಲವಡೆ ಇದು ಮುಂದುವರಿದಿದೆ. ಇದನ್ನೆಲ್ಲಾ ಹೋಗಲಾಡಿಸಿ ಸಮಾನತೆ ತರಲು ಮಾನ್ಯ ಕಂದಾಯ ಸಚಿವರು ಇದನ್ನು ಮಂಡಿಸಿದ್ದಾರೆ.

ವಿರೋಧ ಪಕ್ಷದ ಸದಸ್ಯರಾದ ಶ್ರೀ ಪುಟ್ಟಸ್ವಾಮಿಯವರು ಎತ್ತಿದ ವಿಷಯ ಈಗ ಸಮಂಜಸವಾಗಿದೆ. ಈ ವಿಷಯದ ಬಗ್ಗೆ ಈ ಸಭೆಯಲ್ಲಿ (ಇದರ ಬಗ್ಗೆ) ಅವರೂ ಸಹಭಾಗಿಯಾಗುತ್ತಾರೆಂದು ನಾನು ನಂಬುವೆ. ಈ ಮಧ್ಯೆ ಈ ಸಭೆಯ ಹಾಗೂ ರಾಜ್ಯದ ಗಮನ ಸೆಳೆಯುತ್ತಾ ಹಿಂದೆ ಗೌರವಯುತವಾಗಿ ಸೇವೆ ಸಲ್ಲಿಸಿದ ಕುಟುಂಬಗಳಿಗೆ ಇನಾಮ್ ಆಸ್ತಿ ನೀಡಲಾಗಿದೆ ಎಂದು ಹೇಳುತ್ತೇನೆ. ಅವರ ಸೇವೆಯ ಪ್ರತೀತಿಯಾಗಿ ಈ ಆಸ್ತಿ ನೀಡಲಾಗಿದೆ ಎನ್ನಬಹುದು. ಕೆಲವು ದೇವಸ್ಥಾನಗಳಿಗೆ ಕೂಡಾ ಈ ಇನಾಮ್ ಆಸ್ತಿ ನೀಡಲಾಗಿದೆ. ಮಹಾರಾಜರು ಕೆಲವು ಜನರಿಗೆ ಈ ರೀತಿಯ ಇನಾಮ್ ಆಸ್ತಿಯನ್ನು ನೀಡಿದ್ದಾರೆ. ಕೆಲವು ಇನಾಮ್ ಆಸ್ತಿಯು ವಂಶಪಾರಂಪರ್ಯವಾಗಿ ಸೇವೆ ಸಲ್ಲಿಸುತ್ತಾ ಬಂದವರಿಗೆ ನೀಡಲಾಗಿದೆ. ವಂಶಪಾರಂಪರ್ಯ ಮೂಲ ಸ್ವಭಾವ ಸೇವೆ ಈಗ ತೆಗೆದು ಹಾಕಲಾಗಿದೆ. ಆದರೆ ಅಲ್ಲಿ ಇನಾಮ್ ಈಗಲೂ ಇದೆ. ದೇವಸ್ಥಾನದಲ್ಲೂ ಕೆಲವು ಇನಾಮ್‌ಗಳಿವೆ. ಧರ್ಮದ ಅಂಶಗಳ ಉಪಯೋಗಕ್ಕಾಗಿ ಅವುಗಳಿವೆ. ಆದರೆ ಕೆಲವು ಕಡೆ ಇವು ದುರುಪಯೋಗವಾಗುತ್ತಿರುವುದರಿಂದ ಅದನ್ನು ಸರಿಪಡಿಸಲು ಈ ರೀತಿಯ ವಿಷಯವನ್ನು ಸಭೆಗೆ ತಂದಿದ್ದೇನೆ. ಕುಂದಗೋಳದಲ್ಲಿ ಹಲವು ವರ್ಷಗಳಿಂದ ಹಿಡುವಳಿದಾರರ ಗಲಾಟೆಗಳನ್ನು ಮಾನ್ಯ ಸದಸ್ಯರು ತಿಳಿದಿರಬಹುದು. ಲ್ಯಾಂಡ್ ರಿಫಾರ್ಮ್ಸ್ ಆಕ್ಟ್ ಪ್ರಕಾರ ಇದರ ಪರಿಧಿಯೊಳಗೆ ಹಿಡುವಳಿದಾರ ಇನಾಮ್ ಎಂದು ಪರಿಗಣಿಸದೆ ಇದೆ. ಆದ್ದರಿಂದ ಈ ಎಲ್ಲಾ ಅವ್ಯವಸ್ಥೆಯನ್ನು ಒಂದೇ ಸೂರಿನಡಿ ತರುವ ಈ ರೀತಿಯ ಸಂಯೋಜನೆಗೆ ನಿಬಂಧನೆ ತಂದು ಇಡೀ ರಾಜ್ಯದಲ್ಲಿ ಒಂದು ಸಮಾನಾಂತರ ಶಾಸಕಾಂಗದ ಸ್ವರೂಪದ ಯೋಜನೆ ಮಾಡುವುದಾಗಿದ್ದು ಸರಕಾರದ ಮನಸ್ಸಿನಲ್ಲಿರುವ ಯೋಜನೆಯ ಹೇಳಿಕೆ ಮಾನ್ಯ ಸದಸ್ಯರನ್ನು ಸಮಾಧಾನ ಪಡಿಸಿರಬಹುದು ಹಾಗೂ ಅವರು ಈ ಸಭೆಗೆ ಈ ನಿಬಂಧನೆಯ ಬಗ್ಗೆ ಏನಾದರೂ ತಿದ್ದುಪಡಿಯನ್ನು ಸೂಚಿಸಿದರೆ ಆ ಮೂಲಕ ನನಗೆ ಮುಂದೆ ಈ ಸಭೆಯ ಅಂತ್ಯದಲ್ಲಿ ಉತ್ತರಿಸಲು ಅನುಕೂಲವಾಗಬಹುದು.

# ಭಾಗ - 3

## ಗಣ್ಯರ ದೃಷ್ಟಿಯಲ್ಲಿ ಶ್ರೀ ಕೆ.ಹೆಚ್. ಪಾಟೀಲ್

### * ಶ್ರೀ ಹೆಚ್.ಕೆ. ಪಾಟೀಲ್‌ರವರಿಗೆ ಅವರ ತಂದೆಯವರನ್ನು ಕುರಿತು.

ನನ್ನ ತಂದೆಯವರಿಗೆ ಅವಿರತ ಕೆಲಸ. ನನ್ನ ಬಾಲ್ಯಕಾಲದಿಂದಲೂ ನಾನು ಅವರನ್ನು ಜನರ ಮಧ್ಯದಲ್ಲಿದ್ದಾಗಲೇ ಹೆಚ್ಚು ನೋಡಿದ್ದು. ಮಗನಾಗಿ ಜನಸಂದಣಿ ಇಲ್ಲದಾಗ ನೋಡಿದ್ದೇ ಕಡಿಮೆ. ಶ್ರೀಮದ್ ಭಗವದ್ಗೀತೆ, ಸ್ವಾಮಿ ವಿವೇಕಾನಂದ, ರಾಮಕೃಷ್ಣ ಪರಮಹಂಸ, ಬ್ರಹ್ಮಚೈತನ್ಯ ಮಹಾರಾಜರ ಬಗ್ಗೆ ಎಲ್ಲಿಯಾದರೂ ಪಂಡಿತರಿಂದ ಉಪನ್ಯಾಸ ನಡೆಯುತ್ತಿದ್ದರೆ ಅಲ್ಲಿಗೆ ನಮ್ಮನ್ನು ಜೊತೆಯಾಗಿ ಕರೆದುಕೊಂಡು ಹೋಗುತ್ತಿದ್ದರು. ಅವರು ಮೇಲಿಂದ ಮೇಲೆ ವಿಶ್ವಭ್ರಾತೃತ್ವದ ಬಗ್ಗೆ. ಭೂಗತದಯೆಯ ಬಗ್ಗೆ. ಅನುಕಂಪದ ಬಗ್ಗೆ ಸೇವೆಯ ಮಹತ್ವದ ಬಗ್ಗೆ ಮಾತನಾಡುತ್ತಿದ್ದರು. ಅವರು ನೇರವಾಗಿ ಹೇಳಿದ್ದು ಕಡಿಮೆ ಪರೋಕ್ಷವಾಗಿ ಹೇಳಿದ್ದೇ ಅಧಿಕ.

ನಮ್ಮ ತಂದೆಯವರ ದೊಡ್ಡ ಆಸ್ತಿ ಎಂದರೆ ಅವರ ಮಿತ್ರರು. ಅವರು ಮಿತ್ರರಿಗಾಗಿ ಎಲ್ಲ ತ್ಯಾಗಕ್ಕೆ ಹೋರಾಟಕ್ಕೆ ಸಿದ್ಧರಾಗುತ್ತಿದ್ದರು. ಆದರೆ ರಾಜಕೀಯ ವಿರೋಧಿಗಳನ್ನು ಎಂದೂ ಅವರು ದ್ವೇಷಿಸುತ್ತಿದ್ದಿಲ್ಲ. ಅವರಲ್ಲಿಯ ಒಳ್ಳೆಯ ಅಂಶಗಳನ್ನು ಮೆಚ್ಚುತ್ತಿದ್ದರು. ಅವರದು ತಾತ್ವಿಕ ಹೋರಾಟವಾಗಿರುತ್ತಿತ್ತು. ಉದಾಹರಣೆಗೆ ದೇವರಾಜ ಅರಸರ ಜೊತೆ ಅವರು ವೈಯಕ್ತಿಕವಾಗಿ ಮಧುರ ಸಂಬಂಧ ಹೊಂದಿದ್ದರು.

ಹಿರಿಯೂರಲ್ಲಿ ಒಮ್ಮೆ ನಮ್ಮ ಸಂಸ್ಥೆಯ ಸಿಬ್ಬಂದಿಯವರೊಬ್ಬರ ಪುತ್ರನ ವಿವಾಹಕ್ಕೆ ನಾವೆಲ್ಲ ಹೋಗಿದ್ದೆವು. ವಿವಾಹ ಮುಗಿಸಿಕೊಂಡು ಊಟ ಮಾಡಿ ವಿಶ್ರಾಂತಿಗೆಂದು ಹಿರಿಯೂರ ಪ್ರವಾಸಿ ಮಂದಿರಕ್ಕೆ ಬಂದೆವು. ಆಗ ದಿ. ಅರಸು ಅವರು ಅಧಿಕಾರದಲ್ಲಿರಲಿಲ್ಲ. ದಿ. ಅರಸು. ಹಿರಿಯರಾದ ಶ್ರೀ ಅಜೀಜಸೇಠ ಅದೇ ಪ್ರವಾಸಿ ಮಂದಿರದಲ್ಲಿ ಇರುವುದು ನಮ್ಮ ತಂದೆಯವರಿಗೆ ತಿಳಿದ ತಕ್ಷಣ ಅವರು ಇದ್ದಲ್ಲಿಗೆ ಧಾವಿಸಿದ ನನ್ನ ತಂದೆಯವರು ಅವರ ಜೊತೆ ಲೋಕಾಭಿರಾಮವಾಗಿ ದೀರ್ಘಕಾಲ ಚರ್ಚಿಸಿದರು. ಎಲ್ಲರೂ ಸೇರಿ ನಕ್ಕು ಕಾಲ ಕಳೆದರು. ಅವರ ಹೃದಯ ವೈಶಾಲ್ಯತೆ ದೊಡ್ಡದು. ತಮಗೆ ದ್ರೋಹ ಬಗೆದವರ ಬಗ್ಗೆ ಹಗೆತನವಿಟ್ಟುಕೊಳ್ಳುತ್ತಿರಲಿಲ್ಲ. ಕ್ಷಮಿಸಿ ಮರೆತು ಬಿಡುವುದು ಅವರ ಸ್ವಭಾವವಾಗಿತ್ತು. ಆದರೆ ಅವರನ್ನು ಯಾರಾದರೂ ಕೆರಳಿಸಿದರೆ ಅವರನ್ನೆಂದು ಕ್ಷಮಿಸುತ್ತಿರಲಿಲ್ಲ.

ಓದುವುದು ಅವರ ಮುಖ್ಯ ಹವ್ಯಾಸ. ಲಘು ಸಾಹಿತ್ಯದಲ್ಲಿ ಅವರಿಗೆ ಆಸಕ್ತಿ ಇರಲಿಲ್ಲ. ಅವರು ಶಾಸಕರಾಗುವುದಕ್ಕೆ ಮೊದಲು ಸ್ಥಳೀಯ ಪತ್ರಿಕೆಗಳಲ್ಲಿ ಲೇಖನ ಬರೆಯುತ್ತಿದ್ದರು. ಮುಂದೆ ಹುಬ್ಬಳ್ಳಿಯಲ್ಲಿ ವಿಶಾಲ ಕರ್ನಾಟಕ ದಿನಪತ್ರಿಕೆ ಆರಂಭಿಸಿ ಅದರ ಸಂಪಾದಕರಾಗಿದ್ದಾಗ ನಿತ್ಯ ಲೇಖನಗಳನ್ನು ಓದುವುದರಲ್ಲಿ ಬರೆಯುವುದರಲ್ಲಿ ತಲ್ಲೀನರಾಗಿರುತ್ತಿದ್ದರು.

---

*ಶ್ರೀ ಹೆಚ್.ಕೆ. ಪಾಟೀಲರು ರಾಜ್ಯ ಸಚಿವ ಸಂಪುಟದಲ್ಲಿ ಜಲಸಂಪನ್ಮೂಲ ಸಚಿವರಾಗಿರುತ್ತಾರೆ.

ನಮ್ಮ ತಂದೆಯವರು ಸಾಮಾನ್ಯವಾಗಿ ಶ್ರೀ ರಾಮಕೃಷ್ಣ ಆಶ್ರಮದ ಪ್ರಕಟಣೆಗಳನ್ನು ವಿಶೇಷವಾಗಿ ಶ್ರೀ ಸ್ವಾಮಿ ವಿವೇಕಾನಂದರ ಪುಸ್ತಕಗಳನ್ನು ಆನಂತರ ಜಿಡ್ಡು ಕೃಷ್ಣಮೂರ್ತಿ ಅವರ ಪುಸ್ತಕಗಳನ್ನು ಓದುತ್ತಿದ್ದರು.

ತಮ್ಮ ರಾಜಕೀಯ ಬದುಕಿನ ಪ್ರಾರಂಭಿಕ ಕಾಲದಲ್ಲಿ ಅವರು ಶ್ರೀ ಮುರಾರ್ಜಿ ದೇಸಾಯಿಯವರ ಬಗ್ಗೆ ಪುಸ್ತಕ ಪ್ರಕಟಿಸಿದರು. ಅವರನ್ನು ಗದುಗಿಗೆ ಕರೆಯಿಸಿದ್ದರು. ಅವರಿಂದ ಸಾಕಷ್ಟು ಪ್ರಭಾವಕ್ಕೂ ಒಳಗಾಗಿದ್ದರು.

1969 ರ ಕಾಂಗ್ರೆಸ್ ವಿಭಜನೆ ನಂತರ ಶ್ರೀಮತಿ ಇಂದಿರಾಗಾಂಧಿ ಅವರ ವ್ಯಕ್ತಿತ್ವಕ್ಕೆ ಮಾರು ಹೋಗಿದ್ದರು ಹಾಗೂ ಅವರ ಬಗ್ಗೆ ಅಪಾರ ಅಭಿಮಾನ ಪ್ರೀತಿ ಹೊಂದಿದ್ದರು. ರಾಜ್ಯ ಮಟ್ಟದಲ್ಲಿ ಸಾಹುಕಾರ ಚನ್ನಯ್ಯ, ಟಿ. ಸುಬ್ರಹ್ಮಣ್ಯಂ, ಮಾಲಿ ಮರಿಯಪ್ಪ, ಸಿದ್ವೀರಪ್ಪ, ಚನ್ನಸಪ್ಪ, ಅವರಿಂದಲೂ ಪ್ರಭಾವಕ್ಕೊಳಗಾಗಿದ್ದರೆಂದು ಭಾವಿಸುವೆ.

ಸಹಕಾರ ಸಂಘಗಳ ಸ್ಥಾಪನೆ ಅವರಿಗೆ ಉಸಿರಾಟದಷ್ಟೇ ಸಹಜವಾಗಿತ್ತು. ತಮ್ಮ ಮಿತ್ರರ ಬಳಗದ ಜೊತೆ ಚರ್ಚಿಸಿ ಅವರ ಒಪ್ಪಿಗೆ ಪಡೆದ ನಂತರ ಅವರು ಸಹಕಾರಿ ಸಂಘ ಸ್ಥಾಪನೆಯ ಪ್ರಾರಂಭಿಕ ಹಂತದಿಂದ ಅದರ ಸ್ಥಾಪನೆಯವರೆಗೆ ಎಲ್ಲ ಜವಾಬ್ದಾರಿ ಹೊರುತ್ತಿದ್ದರು. ಸಹಕಾರ ಸಂಘಗಳ ಸ್ಥಾಪನೆ ಹಾಗೂ ಬೆಳವಣಿಗೆಯಲ್ಲಿ ಎಂದೂ ರಾಜಕೀಯ ಮಾಡುತ್ತಿರಲಿಲ್ಲ. ವಿರೋಧ ಪಕ್ಷದವರು ಸಹಕಾರ ಚಳವಳಿ ಬೆಳೆಸಲು ಮುಂದಾದರೆ ಅವರ ಬೆನ್ನು ತಟ್ಟುತಿದ್ದರು. ಸಾಧ್ಯವಿರುವ ಮಾರ್ಗದರ್ಶನ ಹಾಗೂ ನೆರವು ನೀಡುತ್ತಿದ್ದರು.

ಅದ್ವೈತಿಯಾಗಿದ್ದ ನನ್ನ ತಂದೆಯವರಿಗೆ ಎಲ್ಲರೂ ಒಂದೇ ಎಂಬ ಭಾವನೆ ಇತ್ತು. ಅವರ ಅತ್ಯಂತ ನಿಕಟ ಮಿತ್ರರ ಬಳಗದಲ್ಲಿ ಎಲ್ಲ ಜಾತಿಯವರೂ ಇರುತ್ತಿದ್ದರು. ಹುಲಕೋಟಿಯ ದೊಡ್ಡನಿಂಗಪ್ಪ, ದುರಗಣ್ಣವರ, ಕರಿಕಟ್ಟಿ, ಬಸಪ್ಪ, ಮಲಸಮುದ್ರದ ಎಂ.ಎಂ. ಪಾಟೀಲ, ಹಿರೇಹಂದಿಗೋಳದ ಬಿ.ಡಿ. ಕುಲಕರ್ಣಿ, ಬೆಟಗೇರಿಯ ಕೆ.ಎಂ ಕಣವಿ, ಜೆ.ಡಿ. ಜಮಾದಾರ, ವಿಜಯದಾಸ ಪುಣೇಕರ, ವಿಠ್ಠಪ್ಪ ಅಮೀಚಂದ, ಎನ್.ಪಿ. ಕಬಾಡಿ, ಟಿ.ಎಂ. ಕಬಾಡಿ ಗದುಗಿನ ಶಂಕ್ರಣ್ಣ ಕಂಪ್ಲಿ, ನಿಂಗಪ್ಪ ಕೊಪ್ಪದ, ತುಕಾರಾಮರಾವ ಮಹೇಂದ್ರಕರ, ಗೋವಿಂದರಾವ್ ಚವ್ಹಾಣ ಎನ್.ಪಿ. ಗುಡಿ ಇವರೆಲ್ಲ ಬೇರೆ ಬೇರೆ ಜಾತಿ ಉಪಜಾತಿಗೆ ಸೇರಿದವರು. ಎಲ್ಲ ಸಣ್ಣ ಪುಟ್ಟ ಸಮಾಜದ ಜನ ನನ್ನ ತಂದೆಯವರ ಸ್ನೇಹಿತರಾಗಿದ್ದರು. ಹೀಗಾಗಿ ಎಲ್ಲರಲ್ಲಿಯೂ ಸಮಭಾವ ಬೆಳೆಸಿಕೊಳ್ಳಲು ಅವರಿಗೆ ಸಾಧ್ಯವಾಗಿದ್ದಿತೆಂದು ಭಾವಿಸುವೆ.

ಅವರು ನಡೆಸಿದ್ದು ವರ್ಗ ಸಂಘರ್ಷವೇ ಹೊರತು ಜಾತಿ ಸಂಘರ್ಷ ಅಲ್ಲ. ಯಾವಾಗಲೂ ಬಡವರ ಅಲ್ಪಸಂಖ್ಯಾತರ, ದುರ್ಬಲರ, ತುಳಿತಕ್ಕೊಳಗಾದವರ, ಶ್ರಮಜೀವಿಗಳ ಪಕ್ಷಪಾತಿಯಾಗಿದ್ದರು. ಇವರನ್ನು ವಿರೋಧಿಸುವ ಜನ ಜಾತಿ ಬಣ್ಣ ಹಚ್ಚಿ ಅದಕ್ಕೆ ಬೇರೆ ಸ್ವರೂಪ ನೀಡಲು ಸದಾ ಪ್ರಯತ್ನ ಮಾಡುತ್ತಿದ್ದರು. ಇವರಿಂದ ಅವರು ಸಾಕಷ್ಟು ತೊಂದರೆ ಅನುಭವಿಸಬೇಕಾಯಿತು.

ನನ್ನ ತಂದೆಯವರು ದೈವ ಭಕ್ತರಾಗಿರಲಿಲ್ಲ. ಧರ್ಮಾಭಿಮಾನಿಯೂ ಆಗಿರಲಿಲ್ಲ. ಅವರು ಯಾವ ಲಾಂಛನಗಳನ್ನೂ ಧರಿಸುತ್ತಿರಲಿಲ್ಲ. ಅವರಿಗೆ ಅಂಧ ಶ್ರದ್ಧೆಯಲ್ಲಿ ಎಳ್ಳಷ್ಟು ವಿಶ್ವಾಸವಿರಲಿಲ್ಲ.

ಅವರದು ಕಾಯಕ ಧರ್ಮ, ಅವರಿಗೆ ಕೆಲಸದಲ್ಲಿ ವಿಶ್ವಾಸ, ಅವರು ಎಂದೂ ರಾಹುಕಾಲ ನೋಡಿದವರಲ್ಲ. ಎಲ್ಲ ಕಾಲವೂ ಶುಭ ಕಾಲ ಎಂದು ಅವರು ಹೇಳುತ್ತಿದ್ದರು. ಅದರಂತೆ ನಡೆದುಕೊಳ್ಳುತ್ತಿದ್ದರು.

ನನ್ನ ತಂದೆಯವರು ಕೆಲಸಗಾರರ ಜೊತೆ ಮೈತ್ರಿಯುತ ಸಂಬಂಧ ಹೊಂದಿರುತ್ತಿದ್ದರು. ಅವರ ಮುಂದೆ ಸುಳ್ಳು ಹೇಳಿ ಪಾರಾಗುವುದು ಕಠಿಣವಾಗಿತ್ತು. ಅವರಿಗೆ ಕೋಪ ಬಂದರೆ ಸಿಬ್ಬಂದಿಗೆ ಬಯ್ಯುತ್ತಿದ್ದರು. ಎಂದೂ ಅವರು ನೌಕರರನ್ನು ಕೆಲಸದಿಂದ ತೆಗೆದುಹಾಕಿಲ್ಲ. ಒಳ್ಳೆಯ ಮೂಡಿನಲ್ಲಿದ್ದಾಗ ಕೆಲಸಗಾರರ ಜೊತೆ ಹರಟೆ ಹೊಡೆಯುತ್ತಿದ್ದರು. ಹಾಸ್ಯ ಮಾಡುತ್ತಿದ್ದರು. ಅವರ ಸುಖ ದುಃಖದಲ್ಲಿ ಭಾಗಿಯಾಗುತ್ತಿದ್ದರು.

ನನ್ನ ತಂದೆಯವರು ನಿರಂಕುಶಾಧಿಕಾರ ಪ್ರಭುವಂತೆ ವರ್ತಿಸುತ್ತಿದ್ದರೆಂಬ ಅಪಾದನೆ ಇದೆ. ಇದರಲ್ಲಿ ಸ್ವಲ್ಪ ಸತ್ಯಾಂಶವಿರಬಹುದು. ಆದರೆ ವಾಸ್ತವಿಕತೆ ಅಲ್ಲ. ಒಂದು ನಿರ್ಣಯ ಕೈಕೊಳ್ಳುವವರೆಗೆ ಅವರು ಮಿತ್ರ ಜೊತೆ ಹಿತೈಶಿಗಳ ಜೊತೆ ಸಮಾಲೋಚಿಸುತ್ತಿದ್ದರು. ನಿರ್ಣಯ ತೆಗೆದುಕೊಂಡ ನಂತರ ಅವರು ಹಿಂದೆ ನೋಡುತ್ತಿರಲಿಲ್ಲ. ಅವರು ಕೈಕೊಂಡ ನಿರ್ಧಾರಕ್ಕೆ ಬದ್ಧರಾಗಿರುತ್ತಿದ್ದರು. ಅವರದು ವೈಯಕ್ತಿಕ ನಿಲುವಿಗಾಗಿ ಹೋರಾಟವಾಗಿರುತ್ತಿರಲಿಲ್ಲ. ಸೈದ್ಧಾಂತಿಕ ನಿಲುವಿಗಾಗಿ ಅವರು ಹೋರಾಟಕ್ಕಿಳಿಯುತ್ತಿದ್ದರು. ಅವರು ಎಂದೂ ಲೆಕ್ಕಾಚಾರದ ರಾಜಕಾರಣ ಮಾಡುತ್ತಿರಲಿಲ್ಲ. ಅದಕ್ಕಾಗಿ ಅವರು ಬಹಳಷ್ಟು ತೊಂದರೆ ಅನುಭವಿಸಿದರು. ಆದರೆ ಎಂದೂ ಅವರು ತಮ್ಮ ನಿಲುವಿನಲ್ಲಿ ಬದಲಾವಣೆ ಮಾಡಿಕೊಂಡಿರುತ್ತಿರಲಿಲ್ಲ. ಅದಕ್ಕಾಗಿಯೇ ಅವರು ಪ್ರಜ್ಞಾವಂತ ರಾಜಕಾರಣಿಗಳೆಂದೆನಿಸಿಕೊಂಡರು. ಸಾಮಾಜಿಕ ಒಳಿತಿನ ಕಾಳಜಿಯುಳ್ಳ ಜನನಾಯಕರಾಗಿ ರೂಪುಗೊಳ್ಳಲು ಈ ಗಟ್ಟಿತನ, ಜಿಗಟಿ ಗುಣ ಕಾರಣವಾದವು ಎಂದು ಹೇಳಬಹುದು.

ಸರಕಾರದ ಉನ್ನತ ಹುದ್ದೆಯಲ್ಲಿದ್ದವರು ಹೇಗೆ ನಡೆದುಕೊಳ್ಳಬೇಕೆಂಬುದಕ್ಕೆ ನನ್ನ ತಂದೆ ಆದರ್ಶರಾಗಿದ್ದರೆಂದರೆ ಅತಿಶಯೋಕ್ತಿಯಾಗದು. ದೂರವಾಣಿ ಹಾಗೂ ವಾಹನಗಳ ಬಳಕೆ ಮೇಲೆ ಹಿಡಿತ ಹೊಂದಿದ್ದರು. ಶ್ರೀ ದೇವರಾಜ ಅರಸು ಸಂಪುಟಕ್ಕೆ ರಾಜೀನಾಮೆ ನೀಡಿದಾಗ ಅವರು ವಿಧಾನಸೌಧದಿಂದ ನೇರವಾಗಿ ತಮ್ಮ ಮನೆಗೆ ಸ್ವಂತ ವಾಹನದಲ್ಲಿ ಹೋದರು. ಸರಕಾರ ನೀಡಿದ್ದ ವಸತಿ ಗೃಹವನ್ನು ಅದೇ ಕ್ಷಣ ತೆರವು ಮಾಡಿದರು. ಮಂತ್ರಿ ಸ್ಥಾನಕ್ಕೆ ರಾಜೀನಾಮೆ ನೀಡಿದ ನಂತರ ಅವರು ಸರಕಾರಿ ವಸತಿಗೆ ಹೋಗಲೇ ಇಲ್ಲ.

ಬಡತನವನ್ನು ಸಮೀಪದಿಂದ ನೋಡಿದ್ದ ನನ್ನ ತಂದೆಯವರಿಗೆ ಬಡವರ ಕಷ್ಟಗಳ ಬಗ್ಗೆ ನೈಜ ಅರಿವು ಇರುತ್ತಿತ್ತು. ಅದಕ್ಕಾಗಿ ಅವರು ತಮ್ಮ ಮತಕ್ಷೇತ್ರದ ಜನ ಬೆಂಗಳೂರಿಗೆ ಬರಲು ಅವಕಾಶವೇ ನೀಡುತ್ತಿರಲಿಲ್ಲ. ಒಂದು ವೇಳೆ ಬಂದರೆ ಹಾಗೆ ಬಂದವರನ್ನು ಬಿಟ್ಟು ಊಟ ಮಾಡುತ್ತಿರಲಿಲ್ಲ. ಬಂದವರ ಕೆಲಸ ಅಂದೇ ಆಗಬೇಕು. ಅವರು ಮತ್ತೆ ನಿಲ್ಲಬಾರದು ಎಂದು ಅವರು ಕಾಳಜಿ ಮಾಡುತ್ತಿದ್ದರು. ಅದಕ್ಕಾಗಿ ಕೆಲವೊಮ್ಮೆ ತಾವೇ ಸ್ವತಃ ಕಛೇರಿಗಳಿಗೆ ಹೋಗುತ್ತಿದ್ದರು. ಅನವಶ್ಯಕವಾಗಿ ಬೆಂಗಳೂರಿನಲ್ಲಿ ಉಳಿದುಕೊಂಡು ಜನರು ಹಣ ವೆಚ್ಚ ಮಾಡಬಾರದೆಂದು ಹೇಳುತ್ತಿದ್ದರು. ಅವರ ಈ ರೀತಿಯ ನಡತೆಗೆ ಅವರು ಕೆಳಹಂತದಲ್ಲಿ ಜನರು ಅನುಭವಿಸಿದ ಕಷ್ಟಗಳ ಸರಿಯಾದ ಅರಿವು ಹೊಂದಿದ್ದೇ ಕಾರಣವಾಗಿದ್ದಿತು.

ನಾನು ರಾಜಕೀಯ ಪ್ರವೇಶಿಸಬಾರದೆಂದು ನನ್ನ ತಂದೆಯವರು ಎಂದೂ ಬಯಸಿರಲಿಲ್ಲ ನಿಜ. ಅವರಿಗೆ ನಾನು ತಂದೆಯ ಕೃಪಾ ಪೋಷಿತ ರಾಜಕಾರಣಿಯಾಗಿ ಬೆಳೆಯುವುದು ಬೇಕಾಗಿರಲಿಲ್ಲ. ನಾನು ಕರ್ನಾಟಕ ವಿಶ್ವವಿದ್ಯಾಲಯದ ಸೆನೆಟ್, ಸಿಂಡಿಕೇಟುಗಳ ಸದಸ್ಯನಾಗಿದ್ದೆ. ಹಲವಾರು ಸಹಕಾರಿ ಸಂಘಟನೆಗಳಲ್ಲಿ ಸಕ್ರೀಯವಾಗಿ ತೊಡಗಿಸಿಕೊಂಡಿದ್ದೆ. ಕೆ.ಎಚ್. ಪಾಟೀಲರು ತನ್ನ ಮಗನನ್ನು ರಾಜಕೀಯವಾಗಿ ಬೆಳೆಸಿದ ಎಂಬ ಅಪಾದನೆ ಬರದಂತೆ ಅವರು ಎಚ್ಚರಿಕೆ ವಹಿಸಿದರು. ನಾನು ಮೊದಲ ಸಲ ರಾಜ್ಯ ವಿಧಾನ ಪರಿಷತ್ತಿನ ಪದವೀಧರ ಮತದಾರರ ಕ್ಷೇತ್ರದಿಂದ ಸ್ಪರ್ಧಿಸಿದಾಗ ನನ್ನ ತಂದೆಯವರೇ, ಕೆ.ಪಿ.ಸಿ.ಸಿ. ಅಧ್ಯಕ್ಷರಾಗಿದ್ದರು. ನನಗೆ ಪಕ್ಷದ ಟಿಕೇಟು ನೀಡಲಿಲ್ಲ. ನಾನು ಕಾಂಗ್ರೆಸ್ ಬೆಂಬಲಿತ ಸ್ವತಂತ್ರ ಅಭ್ಯರ್ಥಿ ಆಗಿದ್ದೆ. ನಾನು ಗೆದ್ದು ವಿಧಾನ ಪರಿಷತ್ ಸೇರಿದ ನಂತರ ಕಾಂಗ್ರೆಸ್ ಸದಸ್ಯನಾದೆ. ನನ್ನ ತಂದೆಯವರು ನಾನು ರಾಜಕೀಯದಲ್ಲಿ ನನ್ನ ಸ್ವಂತ ಬಲದಿಂದ ಮುಂದೆ ಬರಲಿ ಎಂದು ಅಪೇಕ್ಷಿಸಿದರು. ಅದನ್ನು ಸಾಧಿಸಿದಾಗ ಅವರಿಗೆ ಬಹಳ ಆನಂದವಾಗಿದ್ದಿತು.

ಮಹಿಳೆಯರು ಹಾಗೂ ಮಕ್ಕಳ ಬಗ್ಗೆ ಅಪಾರ ಕಳಕಳಿ ಹೊಂದಿದ್ದ ನನ್ನ ತಂದೆಯವರು ತಮ್ಮ ಗದಗ ಪರಿಸರದಲ್ಲಿ ಬಹುಕಾಲದ ಹಿಂದೆ ಬಾಲವಾಡಿಗಳನ್ನು ಸ್ಥಾಪಿಸಿದರು. ಹೆಣ್ಣು ಮಕ್ಕಳಿಗಾಗಿ ಪ್ರತ್ಯೇಕ ಹೈಸ್ಕೂಲನ್ನು ಸ್ಥಾಪಿಸಿದರು. ಅವರಿಗಾಗಿ ಹಾಸ್ಟೆಲ್ ಸ್ಥಾಪಿಸಿದರು. ಕಂಡೆನ್ಸಡ್ ಕೋರ್ಸುಗಳನ್ನು ಸ್ಥಾಪಿಸಿದರು. ಹೆಣ್ಣು ಮಕ್ಕಳಿಗೆ ಉದ್ಯೋಗವಕಾಶ ಸೃಷ್ಟಿಸುವ ಹಲವಾರು ಕಾರ್ಯಕ್ರಮಗಳನ್ನು ಜಾರಿಗೊಳಿಸಿದರು.

ನನ್ನ ತಂದೆ ಮುಖ್ಯಮಂತ್ರಿಯಾಗಲಿಲ್ಲ ಎಂಬ ನೋವಿದೆ. ಅವರಿಗೆ ರಾಜಕೀಯ ಬೆಂಬಲವಿದ್ದರೂ ಅದು ಸಾಧ್ಯವಾಗಲಿಲ್ಲ. ಅವರಿಗೆ ಜಾತಿ ಬಲವಿರಲಿಲ್ಲ. ಧನ ಬಲವಿರಲಿಲ್ಲ. ಲಾಭಗಳ ಬಲ ಇರಲಿಲ್ಲ. ಅದಕ್ಕಾಗಿ ಮುಖ್ಯಮಂತ್ರಿಯಾಗಲು ಸಾಧ್ಯವಾಗಲಿಲ್ಲವೇನೋ ಎಂದೆನಿಸುತ್ತದೆ. ದೈವ ಹಾಗೂ ಆರೋಗ್ಯವೂ ಅವರಿಗೆ ಅನುಕೂಲವಾಗಿರಲಿಲ್ಲವೆಂದು ಭಾವಿಸುವೆ.

ನನ್ನ ತಂದೆಯವರ ಬದುಕೆಲ್ಲ ರಾಜಕೀಯವಾಗಿದ್ದಿತು. ರಾಜಕೀಯ ಅವರ ಜೀವನವಾಗಿತ್ತು. ಆದರೆ ಅವರಿಗೆ ಪ್ರಿಯವಾಗಿದ್ದುದು ಗ್ರಾಮೀಣ ವಿಕಾಸ, ರೈತರ ಕಲ್ಯಾಣ. ಅದಕ್ಕಾಗಿ ಬಡವರ ಹಿತಕ್ಕಾಗಿ ಶ್ರಮಿಸುವವರೆಲ್ಲ ಅವರ ಮೇಲೆ ಪ್ರಭಾವ ಬೀರಿದ್ದರು. ಮಹಾತ್ಮಾಗಾಂಧಿಯವರ ಬದುಕು ಬರಹದಿಂದ ಅವರು ಪ್ರೇರಿತರಾಗಿದ್ದರು. ಸರಳತೆ, ಸಹಜತೆ, ನಿಷ್ಠುರತೆ ಹಾಗೂ ಏಕಾಂಗಿಯಾದರೂ ಹೋರಾಡುವ ಮನೋಭಾವ ಅವರಿಂದ ಪಡೆದಿರಬೇಕು. ಅದೇ ಕಾಲಕ್ಕೆ ನನ್ನ ತಂದೆಯವರಿಗೆ ನೇತಾಜಿ ಸುಭಾಸಚಂದ್ರ ಬೋಸರ ಬಗ್ಗೆ ಬಹಳ ಪ್ರೀತಿ ಇತ್ತು ಬೆಟಗೇರಿಯ ಆರೂಢಹಿಂದ ಸೇವಾ ಸಂಘದ ಮೂಲಕ ಪ್ರಾರಂಭಿಕ ಕಾಲದಲ್ಲಿ ಸೇವೆ ಮಾಡಿದರು. ಅನಂತರ ಮುರಾರ್ಜಿಯವರು, ಶ್ರೀಮತಿ ಇಂದಿರಾಗಾಂಧಿ ಅವರು ನನ್ನ ತಂದೆಯವರ ಮೇಲೆ ಪ್ರಭಾವ ಬೀರಿದ್ದರು ಇವರೆಲ್ಲರ ಪ್ರಭಾವದಿಂದಲೇ ಅವರು ಒಬ್ಬ ವಸ್ತು ನಿಷ್ಠ, ಸೈದ್ಧಾಂತಿಕ ನಿಲುವಿನ, ಜನಪರ ಕಾಳಜಿಯ ಜನನಾಯಕರಾಗಿ ಹೊರಹೊಮ್ಮಲು ಸಾಧ್ಯವಾಯಿತು.

# ನಾ ಕಂಡ ಕೆ. ಹೆಚ್. ಪಾಟೀಲರು

ಬಿ.ವಿ. ಕಕ್ಕಿಲ್ಲಾಯ*

ನನ್ನ ರಾಜಕೀಯ ಚಟುವಟಿಕೆಗಳಿಗೆ ಸಂಬಂಧಿಸಿ ಅನೇಕ ಸಲ ಹುಬ್ಬಳ್ಳಿ, ಧಾರವಾಡ, ಗದಗಗಳಿಗೆ ನಾನು ಭೇಟಿ ನೀಡಿದ್ದಿದೆ. ಮುಖ್ಯವಾಗಿ ಕರ್ನಾಟಕ ಏಕೀಕರಣ ಚಳುವಳಿ ಮತ್ತು ರೈತ ಚಳುವಳಿಗಳು ನನ್ನ ಮುಖ್ಯ ಕಾರ್ಯಕ್ಷೇತ್ರಗಳಾಗಿದ್ದವು. ಐದನೇ, ಆರನೇ ದಶಕಗಳಲ್ಲಿ ನಾನು ಮಾನ್ಯ ಶ್ರೀ ಕೆ. ಹೆಚ್. ಪಾಟೀಲರ ಬಗ್ಗೆ ಸಾಕಷ್ಟು ಪರಿಚಯ ಪಡೆದಿದ್ದೆ. ಅವರು ಉತ್ತರ ಕರ್ನಾಟಕದ ಅಭಿವೃದ್ಧಿಯ ಸಲುವಾಗಿ ಬಹಳಷ್ಟು ಚಟುವಟಿಕೆಗಳಲ್ಲಿ ನಿರತರಾಗಿದ್ದರು. ಸಹಕಾರಿ ಸಂಘಗಳಲ್ಲಿ ಅವರು ತುಂಬ ಆಸಕ್ತಿ ವಹಿಸಿದ್ದರು. ಗದಗದಲ್ಲೊಂದು ಸಹಕಾರಿ ಗಿರಣಿ ಸ್ಥಾಪಿಸುವುದು ಅವರ ಕನಸಾಗಿತ್ತು. ಅವರ ಕಾರ್ಯತತ್ಪರತೆ ಮತ್ತು ಪ್ರಾಮಾಣಿಕತೆ ಅವರನ್ನೊಬ್ಬ ಉತ್ತಮ ನಾಯಕನನ್ನಾಗಿ ರೂಪಿಸಿದ್ದವು.

ನಾನು 1972 ರಲ್ಲಿ ನಮ್ಮ ರಾಜ್ಯ ವಿಧಾನಸಭೆಗೆ ಆಯ್ಕೆ ಆದಾಗ ಶ್ರೀ ಕೆ.ಎಚ್. ಪಾಟೀಲರನ್ನು ದೇವರಾಜ ಅರಸ್ ಸಂಪುಟದ ಒಬ್ಬ ಪ್ರಭಾವಿ ಸಚಿವರಾಗಿ ಸಮೀಪದಿಂದ ಕಾಣುವ ಸಂದರ್ಭ ನನಗೆ ದೊರಕಿತು.

ಅವರು ಕೃಷಿ ಸಚಿವರಾಗಿದ್ದಾಗ ಮಂಗಳೂರು, ಶಿವಮೊಗ್ಗಗಳಲ್ಲಿ ಅಡಿಕೆಯ ಬೆಲೆ ಕುಸಿದು ಬೆಳೆಗಾರರು ಕಂಗಾಲಾಗಿದ್ದರು ಹಿಂದೆ ದಕ್ಷಿಣ ಕನ್ನಡದ ಭಾಗವಾಗಿದ್ದ ಮತ್ತು 1957 ರಲ್ಲಿ ಕೇರಳಕ್ಕೆ ಸೇರಿಸಲಾದ ಕಾಸರಗೊಡು ತಾಲ್ಲೂಕಿನ ಎಲ್ಲಾ ಅಡಿಕೆ ಬೆಳೆಗಾರರು ಕಷ್ಟ ನಷ್ಟಗಳಿಗೆ ಗುರಿಯಾಗಿದ್ದರು. ಆಗ ಕರ್ನಾಟಕ ಕಾಸರಗೊಡು ಪ್ರದೇಶಗಳಲ್ಲಿ ಇದಕ್ಕೆ ಪರಿಹಾರ ಮಾರ್ಗ ಕಂಡುಕೊಳ್ಳುವ ಚಳವಳಿ ನಡೆಯಿತು. ಕೇರಳದ ಕೃಷಿ ಸಚಿವ [illegible]ಮಷೋತ್ತಮನ್ ಮತ್ತು ಕರ್ನಾಟಕದ ಕೃಷಿ ಸಚಿವ ಕೆ.ಹೆಚ್. ಪಾಟೀಲರನ್ನು ಮುಂದಿಟ್ಟುಕೊಂಡು ವಾರಣಾಸಿ ಸುಬ್ರಾಯ ಭಟ್ ಮತ್ತು ಸಂಗಡಿಗರು ಕ್ಯಾಂಪ್ಕೋ ಸಂಸ್ಥೆಯನ್ನು ಸ್ಥಾಪಿಸುವ ಪ್ರಯತ್ನ ಆರಂಭಿಸಿದರು. ಆಗ ಮಂಜೇಶ್ವರದ ಸಿ.ಪಿ.ಐ. ಶಾಸಕ ಎಂ. ರಾಮಪ್ಪ ಮತ್ತು ಬಂಟ್ವಾಳದ ಸಿ.ಪಿ.ಐ ಶಾಸಕನಾಗಿದ್ದ ನಾನು ಮಂತ್ರಿದ್ವಯರ ನಿಕಟ ಸಂಪರ್ಕ ಇರಿಸಿಕೊಂಡು ಈ ಕಾರ್ಯ ನೆರವೇರುವಂತೆ ಪ್ರಯತ್ನಿಸಿದ್ದೆವು. ಕೆ.ಹೆಚ್. ಪಾಟೀಲರ ಕರ್ತವ್ಯ ಶಕ್ತಿಯನ್ನು ಆ ಸಂದರ್ಭದಲ್ಲಿ ನಾನು ಅರಿತೆ. ಜನಹಿತದ ಕಾರ್ಯಗಳನ್ನು ಕೈಗೊಳ್ಳುವುದರಲ್ಲಿ ಪಕ್ಷ- ಪಂಗಡ ಭೇದ ಭಾವ ಎಣಿಸದೆ ಇರುವ ಅವರ ಮನೋಭಾವದ ಪರಿಚಯ ನನಗಾಯಿತು. ಕ್ಯಾಂಪ್ಕೋದ ಸ್ಥಾಪನೆಯಿಂದ ನಮ್ಮೂರಿನ ಅಡಿಕೆ ಬೆಳೆಗಾರರು ದಿವಾಳಿಯ ಅಂಚಿನಿಂದ ರಕ್ಷಣೆ ಪಡೆದರು. ಬೆಲೆ ಏರಿಕೆಯ ಪ್ರಕ್ರಿಯೆ ಅಲ್ಲಿಂದ ಆರಂಭವಾಯಿತು. ಖಾಸಗಿ ಮಧ್ಯವರ್ತಿಗಳ ಮೋಸ ಮತ್ತು ಶೋಷಣೆಗಳಿಂದ ನಮ್ಮ ಬೆಳೆಗಾರರು ವಿಮೋಚನೆ ಪಡೆದರು.

ಮುಂದೆ ಕೆ.ಹೆಚ್. ಪಾಟೀಲರು ಸಹಕಾರ ಸಚಿವರಾದರು, ಅರಣ್ಯ ಸಚಿವರಾದರು. ಯಾವ ಇಲಾಖೆಯನ್ನು ಅವರು ವಹಿಸಿಕೊಂಡರೂ ಸಹ ಅದರಲ್ಲೊಂದು ಹೊಸ ಅಲೆಯನ್ನೆಬ್ಬಿಸುವುದು ಕೆ.ಹೆಚ್. ಪಾಟೀಲರ ವೈಖರಿಯಾಗಿತ್ತು. ದೇವರಾಜ ಅರಸರ ಸರಕಾರ

*ಶ್ರೀ ಬಿ.ವಿ. ಕಕ್ಕಿಲ್ಲಾಯರು ವಿಧಾನಸಭೆಯ ಮಾಜಿ ಸದಸ್ಯರು

ಜನರ ಸಮಸ್ಯೆಗಳಿಗೂ ರಾಜ್ಯದ ಅಗತ್ಯಗಳಿಗೂ ಸ್ಪಂದಿಸುವ ಸರಕಾರವಾಗಿತ್ತು. ಭೂಸುಧಾರಣೆಗಳು, ನೀರಾವರಿಗಳ ವಿಸ್ತರಣೆ, ಕೃಷಿ ಅಭಿವೃದ್ಧಿ, ಸಾರಿಗೆ ನಿಗಮದ ವಿಸ್ತರಣೆ, ಭೂಸವೆತ ತಡೆಯುವ ತಡೆಯೊಡ್ಡುಗಳ ರಚನೆ, ನಿಯಂತ್ರಿತ ಮಾರುಕಟ್ಟೆಗಳ ವಿಸ್ತರಣೆ, ಕಾವೇರಿ ಮತ್ತು ಕೃಷ್ಣ ನದಿ ನೀರು ಬಳಕೆಗೆ ಯೋಜನೆಗಳ ಅನುಷ್ಠಾನ, ಅರಣ್ಯ ಸಂರಕ್ಷಣೆ ಇತ್ಯಾದಿಗಳೆಲ್ಲ ಆ ಕಾಲದ ಮಹತ್ವದ ಸಾಧನೆಗಳಾಗಿವೆ. ಈ ಎಲ್ಲ ಕೆಲಸ ಕಾರ್ಯಗಳಲ್ಲಿ ನಾನಾ ಖಾತೆಗಳ ಜವಾಬ್ದಾರಿ ವಹಿಸಿಕೊಂಡಿದ್ದ ಕೆ.ಹೆಚ್. ಪಾಟೀಲರ ವಿಶಿಷ್ಟ ಪಾತ್ರವನ್ನು ನಾವು ಕಾಣಬಹುದು.

# ಶ್ರೀ ಕೆ. ಹೆಚ್. ಪಾಟೀಲ್ - ಆತ್ಮೀಯ ಅನಿಸಿಕೆ

ಕೆ. ಹೆಚ್. ಶ್ರೀನಿವಾಸ್*

1967 ರಲ್ಲಿ ರಾಜ್ಯದ ವಿಧಾನಸಭೆಗೆ ಸಾಗರ ಮತದಾರರ ಕ್ಷೇತ್ರದಿಂದ ಕಾಂಗ್ರೆಸ್ (ಐ) ಪಕ್ಷದ ಅಭ್ಯರ್ಥಿಯಾಗಿ ನಾನು ಆಯ್ಕೆಯಾದೆ. ಅದೇ ಚುನಾವಣೆಯಲ್ಲಿ ದಿವಂಗತ ಕೆ.ಹೆಚ್. ಪಾಟೀಲ್ ರವರು ಆಗ ಕರ್ನಾಟಕದ ಮಟ್ಟಿಗೆ ಸೀಮಿತವಾಗಿ ರಚನೆಗೊಂಡಿದ್ದ ಜನತಾ ಪಕ್ಷದ ಅಭ್ಯರ್ಥಿಯಾಗಿ ಗದಗ ಮತದಾರರ ಕ್ಷೇತ್ರದಿಂದ ಆಯ್ಕೆಯಾಗಿದ್ದರು. ಆಗ ನಾವು ಬೇರೆ ಬೇರೆ ಪಕ್ಷದಲ್ಲಿ ಇದ್ದರೂ ಸಹ ನಮ್ಮ ಮಧ್ಯೆ ಒಂದು ವಿಶೇಷವಾದ ಆತ್ಮೀಯತೆ ಉಂಟಾಗಿತ್ತು. ಪ್ರಾಯಶಃ ನಾವಿಬ್ಬರೂ ಸಂಸದೀಯ ಸಂದರ್ಭಗಳಲ್ಲಿ ತುಂಬಾ ಶ್ರದ್ಧೆವಹಿಸಿ ಚಟುವಟಿಕೆಗಳಿಂದ ಕಾರ್ಯನಿರ್ವಹಿಸುತ್ತಿದ್ದುದೆ ಆ ಆತ್ಮೀಯತೆಗೆ ಕಾರಣವೆಂದು ನಾನು ಅಂದುಕೊಂಡಿದ್ದೇನೆ. ನಂತರ ವಿಧಾನಮಂಡಲದ ಕಾಂಗ್ರೇಸ್ ಪಕ್ಷದ ಕಾರ್ಯದರ್ಶಿಯಾಗಿ ಪ್ರತಿಪಕ್ಷಗಳ ಮುಖಂಡರ ಜೊತೆ ವ್ಯವಹರಿಸಬೇಕಾದ ಅನೇಕ ಸಂದರ್ಭಗಳು ಇರುತ್ತಿದ್ದವು. ಆಗಲೂ ನನಗೆ ಕೆ.ಹೆಚ್. ಪಾಟೀಲರ ಜೊತೆಯಲ್ಲಿ ಮಾತನಾಡುವ ಅವಕಾಶಗಳು ಒದಗಿ ಅವರ ಒಟ್ಟಿನ ವ್ಯಕ್ತಿತ್ವದ ಬಗ್ಗೆ ನನ್ನ ಒಲವು ಹೆಚ್ಚಾಗುತ್ತಾ ಹೋಯಿತು. ವಯಸ್ಸಿನಲ್ಲಿ ಹಿರಿಯರಾದ ಅವರಿಗೂ ನನ್ನ ಬಗ್ಗೆ ಏನೋ ಒಂದು ವಿಶಿಷ್ಟವಾದ ವಾತ್ಸಲ್ಯವಿರುವುದು ನನ್ನ ಅತ್ಮಕ್ಕೆ ಅರಿವಾಗಿತ್ತು. ದಿವಂಗತ ಕೆ.ಹೆಚ್. ಪಾಟೀಲರು ಸಹಕಾರಿ ಕ್ಷೇತ್ರದ ಒಬ್ಬ ದಿಗ್ಗಜರೆಂದೂ, ಅವರ ಬೆಳೆಯುತ್ತಿರುವ ಪ್ರಭಾವವನ್ನು ಹತ್ತಿಕ್ಕುವುದಕ್ಕಾಗಿಯೇ ಅವರು ಕೈಗೆತ್ತಿಕೊಂಡಿರುವ ಅನೇಕ ಸಹಕಾರಿ ರಂಗದ ಯೋಜನೆಗಳಿಗೆ ಸರ್ಕಾರ ಉದ್ದೇಶಪೂರ್ವಕವಾಗಿ ತೊಂದರೆಗಳನ್ನು ಸೃಷ್ಟಿಸುತ್ತಿರುವುದಾಗಿಯೂ ವಿಧಾನಸಭೆಯಲ್ಲಿ ಕಾರ್ಯಕಲಾಪಗಳ ಸಂದರ್ಭದಲ್ಲಿಯೇ ಅನೇಕ ಬಾರಿ ಪ್ರಸ್ತಾಪಗಳು ಆಗುತ್ತಿದ್ದವು. ನಾನು ಯಾವುದೇ ಪಕ್ಷದಲ್ಲಿ ಇದ್ದಾಗಲೂ ನಿಷ್ಪಕ್ಷಪಾತವಾಗಿ ಯೋಚನೆ ಮಾಡುವುದು ಒಂದು ಕರ್ತವ್ಯವೆಂದು ತಿಳಿದು ಅದನ್ನು ಆರಾಧಿಸಿಕೊಂಡು ಬಂದವನು. ನಾನಿರುವ ಪಕ್ಷದ ಸರ್ಕಾರವೇ ದಿವಂಗತ ಕೆ.ಹೆಚ್. ಪಾಟೀಲ್ ರಂಥವರಿಗೆ ದುರುದ್ದೇಶಪೂರ್ವಕವಾಗಿ ತೊಡಕು ಉಂಟು ಮಾಡುತ್ತಿದ್ದುದು ನನ್ನ ಮನಸ್ಸಿಗೆ ಒಪ್ಪದ ಸಂಗತಿಯಾಗಿತ್ತು. ನಾನಿರುವ ಪಕ್ಷದ ಸರ್ಕಾರದ ತಪ್ಪುಗಳನ್ನೇ ಎತ್ತಿ ಹಿಡಿದು ವಿಧಾನಸಭೆಯಲ್ಲಿ ಮಾತನಾಡಿದ ಎಷ್ಟೋ ಸಂದರ್ಭಗಳಿದ್ದವು. ಆದ್ದರಿಂದ ಪ್ರತಿಪಕ್ಷದಲ್ಲಿರುವ ಅನೇಕ ಹಿರಿಯರಿಗೆ ನನ್ನ ಬಗ್ಗೆ ಏನೋ ಒಂದು ರೀತಿಯ ವಿಶೇಷ ನಂಬಿಕೆಯಿತ್ತು. ಅಂತಹ ಹಿರಿಯರಲ್ಲಿ ದಿವಂಗತ ಕೆ.ಹೆಚ್. ಪಾಟೀಲರು ನನಗೆ ಅತ್ಯಂತ ಹತ್ತಿರದವರಾಗಿದ್ದರು. ತದನಂತರ ನಡೆದ ರಾಜಕೀಯ ಸ್ಥಿತ್ಯಂತರ ಸಂದರ್ಭದಲ್ಲಿ ದಿವಂಗತ ಕೆ.ಹೆಚ್. ಪಾಟೀಲರು ಇಂದಿರಾಗಾಂಧಿಯವರ ನೇತೃತ್ವದ ಕಾಂಗ್ರೆಸ್ ಪಕ್ಷವನ್ನು ಸೇರಿದರು. 1972ರ ಚುನಾವಣೆಯಲ್ಲಿ ನಾನು ಸ್ಪರ್ಧಿಸಲಿಲ್ಲ. ದಿವಂಗತ ಕೆ.ಹೆಚ್. ಪಾಟೀಲರು ಸ್ಪರ್ಧಿಸಿ ಗೆದ್ದು, ದೇವರಾಜ್ ಅರಸ್‌ರವ ಮಂತ್ರಿಮಂಡಲದಲ್ಲಿ ಮಂತ್ರಿಗಳಾದರು. ನಂತರ ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾದರು. 1974ರ ಹೊತ್ತಿಗೆ ಮತ್ತೆ ನಾನು ರಾಜಕಾರಣದ ಸುಳಿಗೆ ಸಿಕ್ಕಿಬಿದ್ದೆ. ಆಗ ನನಗೆ ದಿವಂಗತ ದೇವರಾಜ್ ಅರಸುರವರು ಮತ್ತು ಕೆ.ಹೆಚ್. ಪಾಟೀಲರು, ಇಬ್ಬರೂ ಅತ್ಯಂತ

*ಕೆ.ಹೆಚ್. ಶ್ರೀನಿವಾಸ್, ವಿಧಾನ ಪರಿಷತ್ತಿನಲ್ಲಿ ವಿರೋಧ ಪಕ್ಷದ ನಾಯಕರು ಹಾಗೂ ಮಾಜಿ ಸಚಿವರು

ಆತ್ಮೀಯರಾಗಿದ್ದರು. ಆದರೆ ದುರದೃಷ್ಟವಶಾತ್ ಅವರಿಬ್ಬರೂ ಆ ಹೊತ್ತಿಗೆ ಪರಸ್ಪರ ವಿರೋಧಿಗಳಾದರು. ರಾಜಕೀಯ ಸ್ಥಿತ್ಯಂತರ ಜೊತೆ ಏರಲಾಗದೆ ದೂರ ಸರಿದಿದ್ದ ನನ್ನನ್ನು ಹತ್ತಿರಕ್ಕೆ ಕರೆದು ಮತ್ತೆ ರಾಜಕೀಯದಲ್ಲಿ ತಮ್ಮ ಜೊತೆಯಲ್ಲಿ ತೊಡಗಿಸಿಕೊಳ್ಳಬೇಕೆಂದು ಈ ಇಬ್ಬರೂ ಏಕಕಾಲಕ್ಕೆ ಆಸೆಪಟ್ಟರು. ದಿವಂಗತ ಕೆ.ಎಚ್. ಪಾಟೀಲರವರು ನನ್ನನ್ನು ಪ್ರದೇಶ ಕಾಂಗ್ರೆಸ್ ಸಮಿತಿಯ ಪ್ರಧಾನ ಕಾರ್ಯದರ್ಶಿಯನ್ನಾಗಿ ಮಾಡಿಕೊಳ್ಳುವ ಸುಳಿವನ್ನು ಕೊಟ್ಟಿದ್ದರು. ಅಷ್ಟರಲ್ಲಿ ದಿವಂಗತ ದೇವರಾಜ ಅರಸು ರವರು ಶಿವಮೊಗ್ಗದಲ್ಲಿದ್ದ ನನ್ನನ್ನು ಹಿಡಿದು ತರಿಸಿ ಅವರ ರಾಜಕೀಯ ವ್ಯವಹಾರಗಳ ಕಾರ್ಯದರ್ಶಿ ಆಗುವಂತೆ ಆತ್ಮೀಯವಾಗಿ ಒತ್ತಾಯಿಸಿದ್ದರಿಂದ ನಾನು ಆ ಹುದ್ದೆಯನ್ನು ಒಪ್ಪಿಕೊಂಡೆ, ನಂತರದ ದಿನದಲ್ಲಿ ಶ್ರೀ ಪಾಟೀಲ್‌ರನ್ನು ಮತ್ತು ದೇವರಾಜ ಅರಸ್‌ರವರನ್ನು ಒಟ್ಟಾಗಿ ಇಡಲು ಬಹಳಷ್ಟು ಶ್ರಮಿಸಿದೆ. ಒಟ್ಟಾಗಿ ಇಡುವುದು ಸಾಧ್ಯವಾಗದೆ ಹೋದಾಗ್ಯೂ ಅವರಿಬ್ಬರ ಮಧ್ಯದ ವಿರಸ ಉಲ್ಬಣಗೊಳ್ಳದಿದ್ದಂತೆ ನೋಡಿಕೊಂಡೆ. ಆದರೆ 1977ರ ಹೊತ್ತಿಗೆ ಅಂತಿಮವಾಗಿ ಕೆ.ಹೆಚ್. ಪಾಟೀಲರು ಕಾಂಗ್ರೆಸ್‌ನಿಂದ ಸಿಡಿದು ಹೋದರು. ಅನಂತರ ಮತ್ತೆ ಅವರು 1984-85 ರಲ್ಲಿ ಕಾಂಗ್ರೆಸ್ ಪಕ್ಷದ ಅಧ್ಯಕ್ಷರಾಗಿ ನೇಮಕಗೊಂಡಾಗ ನನ್ನನ್ನು ಪಕ್ಷದ ಪ್ರಧಾನ ಕಾರ್ಯದರ್ಶಿಯನ್ನಾಗಿ ನೇಮಕ ಮಾಡಿಕೊಂಡರು. ಆ ಕಾಲದಲ್ಲಿ ಅವರಜೊತೆಯಲ್ಲಿಯೇ ನಾನು ಬಹಳಷ್ಟು ಒಡನಾಡುವ ಅವಕಾಶಗಳು ಉಂಟಾದವು. ನಂತರದ 1985ರ ವಿಧಾನಸಭೆ ಚುನಾವಣೆಯಲ್ಲಿ ನಾವಿಬ್ಬರೂ ಗೆದ್ದು ಬಂದೆವು. ಆದರೆ ಪಕ್ಷ ಅಧಿಕಾರಕ್ಕೆ ಬರಲಿಲ್ಲ. ತದನಂತರ 1989ರ ಚುನಾವಣೆಯಲ್ಲಿ ಕೆ.ಹೆಚ್. ಪಾಟೀಲರು ಗೆದ್ದು ಬಂದು ಮತ್ತೆ ಮಂತ್ರಿಗಳಾದರು. ಆದರೆ ನಾನು ಸೋತು ಹೋದ್ದರಿಂದ ಅವರ ಜೊತೆ ನನಗೆ ತಪ್ಪಿಹೋಯಿತು. ವೀರೇಂದ್ರ ಪಾಟೀಲರನ್ನು ಮುಖ್ಯಮಂತ್ರಿ ಪದವಿಯಿಂದ ತೆಗೆದ ಸಂದರ್ಭದಲ್ಲಿ ದಿವಂಗತ ಕೆ.ಹೆಚ್. ಪಾಟೀಲರಿಗೆ ಮುಖ್ಯಮಂತ್ರಿ ಆಗುವ ಒಳ್ಳೆಯ ಅವಕಾಶವಿತ್ತು. ಆದರೆ ಕೆ.ಹೆಚ್. ಪಾಟೀಲರ್ ರಲ್ಲಿ ನಾನು ವಿಶೇಷವಾಗಿ ಕಂಡದ್ದೆಂದರೆ ಇಂದಿನ ರಾಜಕಾರಣಕ್ಕೆ ಸಲ್ಲದ ಮುಗ್ಧ ಪ್ರಾಮಾಣಿಕತೆ ಮತ್ತು ಇನ್ನೊಬ್ಬರಿಂದ ಏನಾದರೂ ಕಿತ್ತುಕೊಳ್ಳುವುದಕ್ಕಿಂತ ತನ್ನ ಕೈಯಲ್ಲಿ ಇದ್ದದನ್ನೇ ಇನ್ನೊಬ್ಬರಿಗೆ ಕೊಟ್ಟು ಬಿಡುವುದರಲ್ಲಿ ಅವರಿಗಿದ್ದ ಅಪಾರ ಸಂತೋಷ. ಇದು ಅವರ ವಿಶೇಷವಾದ ಹುಟ್ಟು ಗುಣ. ಈ ಗುಣವನ್ನೇ ಉಪಯೋಗ ಮಾಡಿಕೊಂಡು ಬೇರೆಯವರು ರಾಜಕೀಯವಾಗಿ ಅವರನ್ನು ಆಗಾಗ ವಂಚಿಸುತ್ತಿದ್ದುದನ್ನು ನಾನು ಅಸಹಾಯಕವಾಗಿ ನೋಡಬೇಕಾಯಿತು. ನನ್ನ ಪ್ರಾಮಾಣಿಕವಾದ ಅಭಿಪ್ರಾಯದಲ್ಲಿ ದಿವಂಗತ ಕೆ.ಹೆಚ್. ಪಾಟೀಲರಿಗೆ ಈ ರಾಜ್ಯದ ಮುಖ್ಯಮಂತ್ರಿ ಆಗುವ ಎಲ್ಲಾ ಅರ್ಹತೆಗಳು ಇದ್ದವು. ಆದರೆ ನಮ್ಮ ರಾಜಕೀಯ ಸಂದರ್ಭಗಳಲ್ಲಿ ಯೋಗ್ಯತೆಗೂ, ಯೋಗಕ್ಕೂ ನೇರವಾದ ಸಂಬಂಧವಿಲ್ಲ. ಕುರ್ಚಿಯ ಮೇಲೆ ಕುಳಿತು ಕೆಲಸ ಮಾಡಲಿಕ್ಕೆ ಬೇಕಾದ ಯೋಗ್ಯತೆ ಹಾಗೂ ಕುರ್ಚಿಯನ್ನು ಹಿಡಿದುಕೊಳ್ಳುವುದಕ್ಕೆ ಅದನ್ನು ಉಳಿಸಿಕೊಳ್ಳುವುದಕ್ಕೆ ಬೇಕಾದ ಯೋಗ್ಯತೆಗಳು ಬೇರೆ ಬೇರೆಯಾಗಿ ಇರುವುದೇ ನಮ್ಮ ದೇಶದ ರಾಜಕಾರಣದ ದೊಡ್ಡ ದುರಂತ. ದಿವಂಗತ ಕೆ.ಎಚ್. ಪಾಟೀಲರಿಗೆ ಕುರ್ಚಿಯ ಮೇಲೆ ಕುಳಿತು ಕೆಲಸ ಮಾಡಲು ಬೇಕಾದ ಎಲ್ಲ ಯೋಗ್ಯತೆಗಳು ಇದ್ದವು. ಆದರೆ ಕುರ್ಚಿಯನ್ನು ಹಿಡಿದುಕೊಳ್ಳುವುದಕ್ಕೆ ಬೇಕಾದ ಕ್ಷುದ್ರ ಬುದ್ದಿಗಳು ಇರಲಿಲ್ಲ ಮತ್ತು ಅವರಿಗೆ ಅಂತಹದರ ಬಗ್ಗೆ ಬಹಳ ಜಿಗುಪ್ಸೆ ಇತ್ತು. ಇತ್ತೀಚಿಗೆ ನಾನು ವಿರೋಧ ಪಕ್ಷದ ನಾಯಕನಾದ ಮೇಲೆ ಪ್ರಪ್ರಥಮವಾಗಿ

ದಿವಂಗತ ಕೆ.ಹೆಚ್. ಪಾಟೀಲರ ಕರ್ಮ ಭೂಮಿಯಾದ ಹುಲಕೋಟಿಗೆ ಹೋಗಿದ್ದೆ. ಅಲ್ಲಿ ತಲೆ ಎತ್ತಿ ನಿಂತಿರುವ ಅನೇಕ ಸಂಸ್ಥೆಗಳು ದಿವಂಗತ ಕೆ.ಹೆಚ್. ಪಾಟೀಲರ ಜನಪರ ಕಾಳಜಿಗೆ ಕರ್ತೃತ್ವ ಶಕ್ತಿಗೆ ಸಹಕಾರಿ ನಿಷ್ಠೆಗೆ ಜೀವಂತ ಸಾಕ್ಷಿಯಾಗಿವೆ. ಕೆ.ಹೆಚ್. ಪಾಟೀಲರದ್ದು ಸತತ ಹೋರಾಟದ ಹಾಗೂ ಕಾಯಕದ ಜೀವನವಾಗಿತ್ತು. ಅವರು ನಿರ್ಮಿಸಿದ್ದೆಲ್ಲವೂ ಅವರ ಅದಮ್ಯ. ಕರ್ತೃತ್ವ ಶಕ್ತಿಯ ಬಲದಿಂದಲೇ ಹೊರತು ಯಾವುದೇ ಅಧಿಕಾರದ ಬಲದಿಂದಲ್ಲ. ಅಧಿಕಾರದ ದುರುಪಯೋಗವಿರಲಿ ಅದರ ಉಪಯೋಗವನ್ನು ಸಹ ಅತ್ಯಂತ ಅವಶ್ಯಕ ಸಂದರ್ಭಗಳಲ್ಲೂ ಅವರು ತಮ್ಮ ಪರವಾಗಿ ಮಾಡಿಕೊಂಡವರಲ್ಲ. ಏನೇ ಸಮಸ್ಯೆ ಬಂದರೂ ತಮ್ಮ ವ್ಯಕ್ತಿತ್ವದ ಬಲದ ಮೇಲೆ ಅದನ್ನು ಎದುರಿಸಿದವರು. ಈ ರೀತಿಯ ಅನನ್ಯ ನಿಷ್ಠೆಯಿಂದಿದ್ದು, ತಮ್ಮ ಕೀರ್ತಿಯನ್ನು ಸತತವಾಗಿ ಪ್ರತಿದ್ವನಿಸುವ ಹತ್ತಾರು ಹೆಜ್ಜೆ ಗುರುತುಗಳನ್ನು ಬಿಟ್ಟುಹೋದ ಕೆಲವೇ ಕೆಲವು ರಾಜಕಾರಣಿಗಳಲ್ಲಿ ದಿವಂಗತ ಕೆ.ಹೆಚ್. ಪಾಟೀಲರು ಅಗ್ರಗಣ್ಯರೆಂದು ಅತ್ಯಂತ ಅಭಿಮಾನ ಪೂರ್ವಕರಾಗಿ ದಾಖಲಿಸಲು ಬಯಸುತ್ತೇನೆ. ಅಲ್ಲದೆ ತಮ್ಮ ಕಾಲದ ಸಾಧನೆಗಳನ್ನು ಉಳಿಸಿ ಬೆಳೆಸಬಲ್ಲ ಶ್ರದ್ಧೆ ಮತ್ತು ಸಾಮರ್ಥ್ಯವಿರುವ ಅವರ ಪುತ್ರ ಹಾಲಿ ಭಾರಿ ನೀರಾವರಿ ಸಚಿವ ಶ್ರೀ ಹೆಚ್.ಕೆ. ಪಾಟೀಲ್ ಹಾಗೂ ಅವರದೆ ಕುಟುಂಬದ ಇನ್ನೊಬ್ಬ ಸುಪುತ್ರ ಹಾಲಿ ಶಾಸಕ ಶ್ರೀ ಡಿ.ಆರ್. ಪಾಟೀಲ್ ಮತ್ತು ಶ್ರೀ ಸುಭಾಷ್ ಪಾಟೀಲ್ ಇವರುಗಳನ್ನೊಳಗೊಂಡಂತೆ ನೂರಾರು ಕಾರ್ಯಕರ್ತರನ್ನು ಸಾರ್ವಜನಿಕ ಕ್ಷೇತ್ರಕ್ಕೆ ಬಳುವಳಿಯಾಗಿ ನೀಡಿರುವುದು ದಿವಂಗತ ಕೆ.ಹೆಚ್. ಪಾಟೀಲರ ವಿಶಿಷ್ಟ ಸಾಧನೆಗಳಲ್ಲಿ ಅತಿ ಮುಖ್ಯವಾದ್ದು.

# ಕೆ. ಹೆಚ್. ಪಾಟೀಲರ ಜೀವಜೀವಾಳ- ಸಹಕಾರ

ಕೋ- ಚನ್ನಬಸಪ್ಪ*

ಹುಲಕೋಟಿಯ ಹುಲಿಯೆಂದೇ ಪ್ರಖ್ಯಾತರಾಗಿದ್ದ ದಿ. ಕೆ.ಹೆಚ್. ಪಾಟೀಲರು ತಮ್ಮ ರಾಜಕೀಯ ಜೀವನದ ಉಚ್ಛ್ರಾಯ ಸ್ಥಿತಿಯಲ್ಲಿದ್ದಾಗ, ನಾನು ರಾಜಕೀಯ ಕ್ಷೇತ್ರದಿಂದ ದೂರ-ಬಹುದೂರದ ನ್ಯಾಯಾಂಗದಲ್ಲಿದ್ದೆ. ಆದ್ದರಿಂದ ಆ ಕಾಲಾವಧಿಯಲ್ಲಿ ನಾನಾವರೊಡನೆ ದೂರದಿಂದಲಾದರೂ ಸಂಪರ್ಕ ಇಟ್ಟುಕೊಂಡಿರಲು ಸಾಧ್ಯವಿರಲಿಲ್ಲ. ಆದರೆ ಆ ಪೂರ್ವದಲ್ಲಿ, ತರುವಾಯ ನಾನು ನಿವೃತ್ತನಾದ ಮೇಲೆ ಅವರನ್ನು ಕಂಡಿದ್ದೆ. ನಿಕಟ ಎಂದು ಹೇಳಲಾಗದಿದ್ದರೂ ಆತ್ಮೀಯ ಸಂಪರ್ಕವಿತ್ತು. ಅವರ ರಾಜಕೀಯ ಪಕ್ಷಕ್ಕೂ ಅದರಲ್ಲೂ ತುರ್ತುಪರಿಸ್ಥಿತಿಯ ಕಾಲದಲ್ಲಿ ನಾನು ನಂಬಿದ್ದ ಆದರ್ಶಗಳಿಗೆ ತದ್ವಿರುದ್ಧವಾಗಿದ್ದರೂ ಅವರ ಬಗ್ಗೆ ನನ್ನ ಅಭಿಮಾನ ಇದ್ದೇ ಇದೆ. ಅವರಿಗೂ ನನ್ನ ಬಗ್ಗೆ ಆದರಾಭಿಮಾನ. ಇದು ದೊಡ್ಡ ಗುಣವೆಂದೇ ಒಪ್ಪಬೇಕು. ಅದನ್ನು ಗುರುತಿಸುವ ಔದಾರ್ಯ ಬೇಕು.

ಅವರು ರಾಜಕೀಯ ಕ್ಷೇತ್ರದಲ್ಲಿ ಏನೆಲ್ಲ. ಸಾಧಿಸಿದರು, ಏನೆಲ್ಲ ಏರುಪೇರುಗಳನ್ನು ಕಂಡರು; ಏನೇನು ಕಂಡುಕೊಂಡರು - ಇವು ನನ್ನ ದೃಷ್ಟಿಯಲ್ಲಿ ಅಗಣ್ಯ. ಇಂದು ಬಂದು ನಾಳೆ ಹೋದ ಕ್ಷಣಿಕ ಮಂತ್ರಿಮಂಡಲದ ಮಂತ್ರಿಗಳಾಗಿದ್ದರು ಎಂಬುದಕ್ಕೆ ಅಷ್ಟೊಂದು ಮಹತ್ವವಿಲ್ಲ. ಆದರೆ ಅವರ ಒಂದು ವಿಶಿಷ್ಟ ಗುಣ ನನ್ನನ್ನು ಆಕರ್ಷಿಸಿದ್ದು ಹಿಡಿದಿದ್ದನ್ನು ಬಿಡದೆ ದಡಮುಟ್ಟುವ ಹಠ, ಛಲ ಎಂದು ಕರೆದರೆ ತಪ್ಪಲ್ಲ. ಇನ್ನೊಂದು ಗುಣ ಆ ಪಟ್ಟು ಹಿಡಿತದಿಂದ ಬರಬಹುದಾದ ಸೋಲುಗೆಲುವುಗಳಿಗೆ ಕುಗ್ಗದ, ಜಗ್ಗದ ಗಂಡೆದೆ ಅವರದು. ಅವರಷ್ಟು ಸೋಲು ಕಂಡವರು ಮೇಲೇಳದೆ ಎದೆಗುಂದಿ ಹೋದರೂ, ಇವರು ಹಠ ಹಿಡಿದು ಮೇಲೆದ್ದು ಬಂದರು.

ದಿ. ಪಾಟೀಲರ ಈ ಗುಣಕ್ಕಿಂತಲೂ ಅಧಿಕವಾದ ಅವರ ಇನ್ನೊಂದು ನಿಷ್ಠೆಗಾಗಿ ಅವರನ್ನು ಮೆಚ್ಚಬೇಕು. ಅದು ಸಹಕಾರ ತತ್ವದ ಬಗ್ಗೆ ಅವರಿಗಿದ್ದ ಅಚಲವಾದ ಶ್ರದ್ಧೆ, ನಿಷ್ಠೆ ನಮ್ಮ ಭಾಷೆಯಲ್ಲಿ ಆ ಬಗ್ಗೆ ಅವರಿಗಿದ್ದ ಹುಚ್ಚು ಈ ಸಹಕಾರ ತತ್ವವನ್ನು ನಮ್ಮ ದೇಶ ಏಕೆ ಅಂಗೀಕರಿಸಿತು ಎಂಬುದರ ಕಾರಣ ತಿಳಿದವರಿಗೆ ಅವರ ಈ ಹುಚ್ಚಿನ ಗುಟ್ಟು ಅರ್ಥವಾಗುತ್ತದೆ. ಸ್ವಾತಂತ್ರ್ಯ ನಂತರ ನಮ್ಮ ದೇಶ ಅನುಸರಿಸಬೇಕಾದ ಆರ್ಥಿಕ ನೀತಿ ಯಾವುದು. ಗ್ರಾಮಾಂತರ ಅಭಿವೃದ್ಧಿಗೆ ಯಾವ ವ್ಯವಸ್ಥೆ ಉಚಿತ? ಅದನ್ನು ಸಾಧಿಸುವ ರೀತಿ ನೀತಿ ಏನು ಎಂಬುದು ದೊಡ್ಡ ಸಮಸ್ಯೆಯಾಗಿತ್ತು. ದೇಶ ಕವಲು ದಾರಿಗಳ ಮಧ್ಯದಲ್ಲಿತ್ತು. ದೇಶ ಆ ಕವಲು ದಾರಿಗಳಲ್ಲಿ ಒಂದನ್ನು ಆರಿಸಿಕೊಳ್ಳಬೇಕಾಗಿತ್ತು. ಒಂದು ಅಮೆರಿಕಾ, ಬ್ರಿಟನ್ ದೇಶಗಳು ಅನುಸರಿಸುತ್ತಿದ್ದ ಮುಕ್ತ ಮಾರುಕಟ್ಟೆ, ಅನಿರ್ಬಂಧ ವ್ಯಾಪಾರೋದ್ಯಮ ಬಂಡವಾಳಶಾಹಿ ಆರ್ಥಿಕ ನೀತಿ. ಇನ್ನೊಂದು ಸೋವಿಯತ್ ಒಕ್ಕೂಟದ ಸಂಪೂರ್ಣ ಸರ್ಕಾರೀ ಒಡೆತನದ ಆರ್ಥಿಕ ವ್ಯವಸ್ಥೆ. ವ್ಯಾಪಾರ, ಉದ್ದಿಮೆ, ಒಕ್ಕಲುತನ, ಶಿಕ್ಷಣವೂ ಸಹಿತ ಸರ್ಕಾರದ ಜಸ್‌ಸ್ವಾಮ್ಯದಲ್ಲಿಯೆ ನಡೆಯಬೇಕೆಂಬ ಸಂಪೂರ್ಣ ನಿಯಂತ್ರಿತ ವ್ಯವಸ್ಥೆ. ಎರಡೂ ವ್ಯವಸ್ಥೆಗಳಲ್ಲಿ ಒಳ್ಳೆಯದೂ ಇದೆ ಕೆಟ್ಟದ್ದು ಇದೆ. ಬಂಡವಾಳಶಾಹೀ ವ್ಯವಸ್ಥೆಯಲ್ಲಿ ಬಡಪ್ರಜೆ ಉಳ್ಳವರ ದಾಸನಾಗಿ ದುಡಿಯಬೇಕು. ಬಡವನ ಬೆವರಿನ ಫಲ ಶ್ರೀಮಂತನ ಬೊಕ್ಕಸ ತುಂಬುತ್ತದೆ. ದುಡಿವವನ ಒಡಲು ಬರಿದಾಗುತ್ತದೆ, ಅತ್ತ

*ಕೋ. ಚೆನ್ನಬಸಪ್ಪ ನಿವೃತ್ತ ನ್ಯಾಯಾಧೀಶರು, ಬೆಂಗಳೂರು - 560 086

ಕಪಟ ಕಮ್ಯುನಿಜಂ ಪದ್ಧತಿ ಒಪ್ಪಿಕೊಂಡರೆ ಆಗ ಪ್ರಜೆ ರಾಜ್ಯದ ಸ್ವತ್ತಾಗುತ್ತಾನೆ. ದುಡಿಮೆಯ ಫಲದಲ್ಲಿ ಅವನು ಭಾಗೀಯಾಗುತ್ತಾನೆಂಬುದಾದರೂ, ಅವನು ಏನು ಉತ್ಪಾದಿಸಬೇಕು ಎಷ್ಟು ಉತ್ಪಾದಿಸಬೇಕು ಎಲ್ಲಿ ಉತ್ತು ಎಲ್ಲಿ ಉತ್ತು ಬಿತ್ತಿ ಏನು ಬೆಳೆಯಬೇಕು ಎಂಬ ವಿಚಾರದಲ್ಲೂ ಅಸ್ವತಂತ್ರ.

ಅಂಥ ಸಂದರ್ಭದಲ್ಲಿ ನೆಹರೂ ಆದಿಯಾಗಿ ಮಹಲನೋಬಿ ಮುಂತಾದ ಅರ್ಥಶಾಸ್ತ್ರಜ್ಞರ ಸಲಹೆಯಂತೆ ಈ ದೇಶಕ್ಕೆ ಸಹಕಾರ ಪದ್ಧತಿಯೇ ಸರ್ವಶ್ರೇಷ್ಠ ಮಧ್ಯಮ ಮಾರ್ಗ ಎಂದು ಆರ್ಥಿಕ ಔದ್ಯೋಗಿಕ ಕೃಷಿ ನೀತಿ ಎಂಬುದಾಗಿ ಒಪ್ಪಿಕೊಂಡರು. ಅದರ ಮಹತ್ವವನ್ನು ಎಷ್ಟು ಜನ ಅರ್ಥ ಮಾಡಿಕೊಂಡರು? ಅರ್ಥ ಮಾಡಿಕೊಂಡರೂ ಅದನ್ನು ಆಚರಣೆಯಲ್ಲಿ ತಂದರು? ಈ ಪ್ರಶ್ನೆಗಳಿಗೆ ಸಮರ್ಪಕವಾದ ಉತ್ತರ ಕೊಟ್ಟವರು ಕೆ.ಹೆಚ್. ಪಾಟೀಲರು. ಸಹಕಾರವೆ ಸುಖದ ದಾರಿ ಎಂಬುದು ಅವರ ಪಾಲಿಗೆ ಬರೀ ಘೋಷಣೆ ಆಗಿರಲಿಲ್ಲ. ಅದು ಅವರ ಉಸಿರಾಗಿತ್ತು. ಪ್ರಾಣವಾಗಿತ್ತು. ಆ ತತ್ವವನ್ನು ತಮ್ಮ ಕ್ಷೇತ್ರದಲ್ಲಿ ಜೀವಂತಗೊಳಿಸಿದರು ಸಹಕಾರದ ಸಂಜೀವಿನಿ ವಿದ್ಯೆಯಿಂದ ಮೃತವಾಗಿದ್ದ ಗ್ರಾಮೀಣ ಬಾಳನ್ನು ಬದುಕಿಸಿದರು. ಇದು ಅವರ ಹಿರಿಮೆ ಇದು ಅವರ ಸಿದ್ದಿ. ಈ ಮಾತು ನಂಬಬೇಕಾದರೆ ಹುಲಕೋಟಿ ನೋಡಬೇಕು. ಇಂಗ್ಲೀಷಿನಲ್ಲಿ ಹೇಳುವಂತೆ You must see to believe it ಒಬ್ಬ ದೂರದೃಷ್ಟಿಯ ನಿಸ್ವಾರ್ಥ ಸಹಕಾರಿ ತತ್ವನಿಷ್ಠೆ ಏನನ್ನು ಸಾಧಿಸಬಹುದು ಎಂಬುದನ್ನು ನಂಬಬೇಕಾದರೆ ಹುಲಕೋಟಿ ನೋಡಬೇಕು.

ಜೀವನದ ಎಲ್ಲ ಕ್ಷೇತ್ರಗಳಲ್ಲೂ ಸಹಕಾರ ತತ್ವವನ್ನು ಅಳವಡಿಸಬಹುದು ಎಂಬುದನ್ನು ಅಲ್ಲಿ ಆಚರಣೆಯಲ್ಲಿರುವ ಜೀವಂತವಾಗಿರುವ ಸಂಸ್ಥೆಯ ಮೂಲಕ ನೋಡಬಹುದು. ಒಕ್ಕಲುತನದಲ್ಲಿ ಬೀಜೋತ್ಪತ್ತಿಯಿಂದ ಹಿಡಿದು ಒಕ್ಕಲುತನದಿಂದ ಬೆಳೆಯುವ ಎಲ್ಲ ಉತ್ಪಾದನೆ ಹತ್ತಿ ಸೇಂಗಾ, ಎಳ್ಳು, ಜೋಳ ಇತ್ಯಾದಿ ಎಲ್ಲವನ್ನೂ ಮಾರಾಟ ಮಾಡುವ, ಗಿರಣಿ ಮೂಲಕ ಸಾಮಾಗ್ರಿ ತಯಾರಿಸುವ ಕೊನೆಗೆ ನೂಲು ತೆಗೆಯುವವರೆಗೆ ಅದನ್ನು ಮಾರಾಟ ಮಾಡುವ ಎಲ್ಲ ಹಂತಗಳಲ್ಲೂ ಸಹಕಾರೀ ತತ್ವ ಆಚರಣೆಯಲ್ಲಿದೆ. ಶಿಕ್ಷಣದಲ್ಲೂ ಸಹಕಾರೀ ತತ್ವದ ಮೇಲೆ ಅಂಗನವಾಡಿಯಿಂದ ಹಿಡಿದು ಉನ್ನತ ಶಿಕ್ಷಣದವರೆಗೆ ಸಂಸ್ಥೆಗಳಿವೆ. ಆರೋಗ್ಯ ಕ್ಷೇತ್ರದಲ್ಲೂ ಅಷ್ಟೇ. ಆಲೋಪತಿ, ಆಯುರ್ವೇದ, ನಿಸರ್ಗ ಚಿಕಿತ್ಸಾ ಕ್ರಮದ ವಿವಿಧ ರೀತಿಗಳೂ ಅದೇ ಸಹಕಾರ ತತ್ವದ ಮೇಲೆಯೆ ನಡೆಯುತ್ತಿದೆ. ಇಂಥ ಸಂಸ್ಥೆಗಳನ್ನು ಕಟ್ಟುವುದು. ಅವುಗಳನ್ನು ಸರಿಯಾಗಿ ನಡೆಸಿಕೊಂಡು ಹೋಗುವುದು ಸಾಮಾನ್ಯದ ಮಾತಲ್ಲ. ಸಾಮಾನ್ಯರಿಂದ ಸಾಧ್ಯವಲ್ಲ. ಅಂಥ ಅಸಮಾನ್ಯ, ಅಸಾಧ್ಯ ಕೆಲಸವನ್ನು ಸಾಧಿಸಿದವರು ಪಾಟೀಲರು.

ಈ ಅಭಿವೃದ್ಧಿ ಹುಲಕೋಟಿಗೆ ಯಾಕೆ ಸೀಮಿತವಾಗಿದೆ? ಪಾಟೀಲರಂಥವರು ನೆರೆಯ ಹಳ್ಳಿಗಳಲ್ಲಿ ಊರುಗಳಲ್ಲಿ ಇದ್ದಿದ್ದರೆ ಇಡೀ ರಾಜ್ಯವೇ ಹುಲಕೋಟಿ ಆಗಬಹುದಿತ್ತು. ಆದರೆ ಅಂಥ ಪಟ್ಟು ಹಿಡಿದು ಸಾಧಿಸುವ ಪಟುಗಳು ಎಷ್ಟು ಜನ? ಎಲ್ಲಿದ್ದಾರೆ. ಅದೇ ಕೆ.ಹೆಚ್. ಪಾಟೀಲರ ಸಾಧನೆಯ ಮಹತ್ವ. ಅವರ ದೊಡ್ಡಸ್ತಿಕೆ ಅರ್ಥವಾದೀತು. ಅವರು ಹುಲಕೋಟಿಯನ್ನು ಮಾತ್ರ ಅಭಿವೃದ್ಧಿಪಡಿಸಿಕೊಂಡರು ಎಂಬ ಆಕ್ಷೇಪಣೆಯ ದನಿಯನ್ನು ಆಗಾಗ ಕೇಳಿದ್ದೇನೆ. ಅದಕ್ಕೆ

ನಾನು ಕೊಟ್ಟ ಉತ್ತರ: ಊರು ಗೆದ್ದು ಮಾರು ಗೆಲ್ಲು ಎಂಬ ಗಾದೆಯಿದೆಯಲ್ಲ? ಮೊದಲು ತಮ್ಮ ಮನೆಯ ಮುಂದಿನ ಗೇಣುದ್ದದ ಕುಣಿ ಮುಚ್ಚಿ ಪರರ ಮನೆಯ ಮೊಳಕಾಲುದ್ದ ಕುಣಿ ಮುಚ್ಚಲು ಹೋಗಬೇಕು. ಮೇಲಾಗಿ ಇತರ ಗ್ರಾಮದವರಾದ ಇವರಿಗೆ ಸಹಕಾರಿ ಪದ್ಧತಿಯಿಂದ ಉದ್ಧಾರವಾಗಲು ಅಡ್ಡಿಯೇನಿದೆ? ಇವರಂತೆ ನಿಸ್ವಾರ್ಥ ಸೇವಾ ಮನೋಭಾವ ಇದ್ದರೆ ಅವರವರ ಗ್ರಾಮಗಳು ಹುಲಕೋಟಿ ಅದಾವು. ಇಡೀ ಕರ್ನಾಟಕವೇ ಸಹಕಾರ ಕ್ಷೇತ್ರದ ಕೇಂದ್ರವಾದೀತು. ಗುಜರಾತಿನಲ್ಲಿ ಹೈನು ಅಭಿವೃದ್ಧಿಯ ಕ್ಷೇತ್ರ ಆದಂತೆ ಇಲ್ಲಿಯೂ ಆದೀತು. ಆದರೆ ಅಂಥ ಜನ ಎಲ್ಲಿದ್ದಾರೆ? ಆಗಲೇ ಪಾಟೀಲರಂಥವರು ಎಷ್ಟು ವಿರಳ ಎಂದು ಎದ್ದು ಕಾಣುತ್ತದೆ. ಇದೇನು ಸಣ್ಣ ವಿಚಾರವೇ? ಇದೇನು ಮಹಾ ಎಂದು ಉಪೇಕ್ಷಿಸುವುದು ಆತ್ಮದ್ರೋಹ, ಸತ್ಯದ್ರೋಹ.

ಇಷ್ಟೆಲ್ಲವನ್ನೂ ಅವರು ಒಬ್ಬೊಂಟಿಯಾಗಿ ಸಾಧಿಸಿದರೆ, ಇಲ್ಲ. ಅವರ ನೆರವಿಗೆ ಬೇಕಾದ ಸಾವಿರ ಕೈಗಳನ್ನು ಬೆಳೆಸಿದರು. ಆ ಸಾವಿರ ಕೈಗಳ ಸಹಕಾರದಿಂದ ಅವರು ನಂಬಿದ ಸಹಕಾರ ತತ್ವ ಆಚರಣೆಗೆ ಬಂತು. ಆ ಸಾವಿರ ಕೈಗಳಲ್ಲಿ ಬಹು ಕೈಗಳು ಅವರ ಸಂಬಂಧಿಕ ಆಪ್ತರ ಕೈಗಳೇ ಇವೆ ಎಂಬ ಅಪಸ್ವರ ಕೇಳಿದ್ದೇನೆ. ಅಂಕಿ ಸಂಖ್ಯೆಗಳನ್ನು ಪರೀಕ್ಷಿಸಿದಾಗಲೆ ಅದರ ಸತ್ಯಾಸತ್ಯತೆ ತಿಳಿದೀತು. ಅದೇನೇ ಇರಲಿ ಆ ಕೈಗಳು ಇವರು ನಂಬುಬಹುದಾದ ವಿಶ್ವಾಸಾರ್ಹ ವ್ಯಕ್ತಿಗಳ ಕೈಗಳು. ವಿಶ್ವಾಸಾರ್ಹರಲ್ಲದವರ ಕೈಗೆ ನಮ್ಮ ಜೀವನವನ್ನು ಯಾರಾದರೂ ಕೊಟ್ಟಾರೆಯೇ? ಸಹಕಾರ ತತ್ವ ಅವರ ಜೀವಜೀವಾಳ. ಅದನ್ನು ಪೋಷಿಸುವ ಹೊಣೆಯನ್ನು ವಿಶ್ವಾಸಾರ್ಹರಾದ ತಮ್ಮವರ ಕೈಯಲ್ಲಿ ಕೊಟ್ಟಿದ್ದರೆ ತಪ್ಪೇನು?

ನಾನು ವೈಯಕ್ತಿವಾಗಿ ಅವರಿಂದ ಪಡೆಯಬಹುದಾದ ಉಪಕಾರ ಯಾವುದೂ ಇರಲಿಲ್ಲ. ಆದರೆ ಯಾವುದಾದರೂ ಸಾರ್ವಜನಿಕ ಹಿತಕ್ಕೆ ಸಂಬಂಧಿಸಿದ ಸಮಸ್ಯೆಯಿದ್ದರೆ ಅದನ್ನು ನಾನು ಒಂದೆರಡು ಬಾರಿ ಸೂಚಿಸಿದ್ದೆ. ಸೂಚಿಸಿದ ಮೇಲೆ ನಾನೇ ಮರೆತು ಹೋದ ಮೇಲೆ ಅವರು ಫೋನ್ ಮಾಡಿ ಆ ಕೆಲಸ ಆಯಿತೆಂದೋ ಅಥವಾ ಆಗಲಿಲ್ಲವೆಂದೋ ನೆನಪಿಟ್ಟು ತಿಳಿಸುತ್ತಿದ್ದ ಅವರ ಆತ್ಮೀಯತೆ, ಉತ್ತಮ ನಡತೆಯ ಮಾದರಿ ನನಗೆ ಮೆಚ್ಚಿಗೆ ತಂದಿದೆ. ಇದನ್ನು ದೊಡ್ಡಗುಣ ಎಂದು ಕರೆಯದಿದ್ದರೆ, ಸ್ಮರಿಸದಿದ್ದರೆ, ಇನ್ನೆಂಥಾದ್ದು ದೊಡ್ಡಗುಣ? ನಡತೆ?

ದಿ. ಪಾಟೀಲರು ಬಿಟ್ಟು ಹೋದ ಈ ಸಹಕಾರೀ ಸಂಪತ್ತನ್ನು ಸಾಮ್ರಾಜ್ಯ ಎನ್ನೋಣವೆ? ಚೆನ್ನಾಗಿ ನೋಡಿಕೊಳ್ಳುವ ಉತ್ತಮ ವಾರಸುದಾರರಿದ್ದಾರೆ. ವಾರಸುದಾರರೆಂದರೆ ಅವರ ಕುಟುಂಬ ವರ್ಗದವರು ಎಂಬ ಸಂಕುಚಿತ ಅರ್ಥದಲ್ಲಿ ಅಲ್ಲ. ಅವರಂತೂ ಇದ್ದೇ ಇದ್ದಾರೆ. ಇರಲೇಬೇಕು. ದೈವೇಚ್ಛೆಯಿಂದ ಅವರ ಕುಟುಂಬದಲ್ಲಿ ಹುಟ್ಟಿದ್ದಾರೆ ಎಂಬ ಕಾರಣಕ್ಕಾದರೂ ಇದ್ದಾರೆ. ಬಿಟ್ಟೆನೆಂದರೂ ಬಿಡದ ನಂಟು ಅದು. ಆದರೆ ಆ ಕುಟುಂಬದಲ್ಲಿ ರಕ್ತ ಸಂಬಂಧವಿಲ್ಲದವರೂ ಅಪಾರ ಸಂಖ್ಯೆಯಲ್ಲಿದ್ದಾರೆ. ಅವರ ಕೈಯಲ್ಲಿ ಸಹಕಾರಿ ತತ್ವ ಹುಲಕೋಟಿ ಸುಕ್ಷೇಮ. ಕೆ.ಹೆಚ್. ಪಾಟೀಲರು ಧನ್ಯರು. ಎಲ್ಲಿದ್ದರೂ ಅವರ ಆತ್ಮ ಸಂತೃಪ್ತಿಯಿಂದ ಇದ್ದೀತು ಒಂದು ಮಾನವ ಜೀವನಕ್ಕೆ ಇದಕ್ಕಿಂತ ದೊಡ್ಡ ಪ್ರತಿಫಲ ಯಾವುದಿದೆ?

## ಪಾಟೀಲರ ಜೀವನದ ಹೆಜ್ಜೆಯ ಗುರುತುಗಳು: ತುಣುಕು- ಮಿಣುಕು

ಶ್ರೀ ಕೆ.ಹೆಚ್. ಪಾಟೀಲರು ಕೇವಲ ಶ್ರೀ. ಕೆ.ಹೆಚ್. ಪಾಟೀಲರೇ, ಅವರಿಗೆ ಪರ್ಯಾಯ ಇಲ್ಲ, ಹಳ್ಳಿಯ ಸರಪಂಚ ಅಂತರರಾಷ್ಟ್ರೀಯ ಮಟ್ಟದ ಸಹಕಾರಿಯಾದುದು ಪವಾಡ ಸದೃಶ್ಯ. ತಮ್ಮ ಜೀವಿತ ಕಾಲದಲ್ಲಿಯೇ ದಂತಕಥೆಯಾದ ಶ್ರೀ ಕೆ.ಹೆಚ್. ಪಾಟೀಲರ ಉಸಿರೇ ಸಹಕಾರ, ಅವರ ಎರಡು ಶ್ವಾಸಕೋಶಗಳು ಗ್ರಾಮ ಹಾಗೂ ಕೃಷಿ ಅವರ ಹೃದಯವೇ ರೈತ. ಕೈಗಾರಿಕೆ ಹಾಗೂ ಶಿಕ್ಷಣ ಅವರ ಎರಡು ಕಣ್ಣುಗಳಾದರೆ ಅವಿರತ ಶ್ರಮ ಅವರ ಬಾಹುಗಳು ಹಾಗೂ ರಚನಾತ್ಮಕ ಕೆಲಸಗಳೇ ಅವರ ಕಾಲುಗಳು.

* * * * *

ಶ್ರೀ ಕೆ.ಎಚ್. ಪಾಟೀಲರು ಸಹಕಾರ ಕ್ಷೇತ್ರದ ದಿಗ್ಗಜ. ರಚನಾತ್ಮಕ ಕೆಲಸಗಳಿಗೆಲ್ಲ ಅಗ್ರಜ. ದಿಟ್ಟ ಹೋರಾಟಗಾರ, ಸೋಲರಿಯದ ಛಲಗಾರ, ಶೋಷಣೆರಹಿತ ಸಮಾಜ ಕಾಣುವ ಹಂಬಲದ ಸುಂದರ ಕನಸುಗಾರ, ಅವರ ಎಲ್ಲಾ ಚಟುವಟಿಕೆಗಳ ಕೇಂದ್ರ ಬಿಂದು ರೈತ. ಎಲ್ಲ ಚಟುವಟಿಕೆಗಳ ಆರಂಭ ಹಾಗೂ ಅಂತ್ಯ ರೈತ. ಶ್ರೀ ಕೆ.ಹೆಚ್. ಪಾಟೀಲರಿಗೆ ರೈತ ಸಮಸ್ಯೆಗಳೆಂದರೆ ಅಂಗೈ ಮೇಲಿನ ನೆಲ್ಲಿಕಾಯಿಯಂತೆ. ಆ ಸಮಸ್ಯೆಗಳನ್ನು ಪರಿಹರಿಸಲು ಹೋರಾಡುವುದೆಂದರೆ ಅವರಿಗೆ ಹಂಡೆ ಹಾಲು ಕುಡಿದಂತೆ.

* * * * *

ಪ್ರಪಂಚದಲ್ಲಿ ಕೃಷಿ ಕ್ಷೇತ್ರವೊಂದನ್ನು ಬಿಟ್ಟರೆ ಉಳಿದಂತೆ ಎಲ್ಲ ಕ್ಷೇತ್ರಗಳಲ್ಲಿ ಉತ್ಪಾದಕ ತನ್ನ ಮಾಲಿನ ಬೆಲೆ ನಿರ್ಧರಿಸುತ್ತಾನೆ. ಖರೀದಿದಾರ ಬೆಲೆ ಕಟ್ಟುವ ಯಾವುದಾದರೂ ವಸ್ತು ಇದ್ದರೆ ಶ್ರೀಮಂತ ದೇಶಗಳಲ್ಲಿ ನಡೆಯುವ ಅಮೂಲ್ಯ ವಸ್ತುಗಳ ಹರಾಜು ನಿರ್ಧರಿಸುವ ವ್ಯಾಪಾರಿಗಳೆಂದು ಹೇಳಬಹುದು. ರೈತರ ಉತ್ಪಾದನೆಗಳ ಬೆಲೆ ನಿರ್ಧರಿಸುವವರು ವ್ಯಾಪಾರಿಗಳು. ಇದು ವಿಚಿತ್ರ ಆದರೂ ಸತ್ಯ. ಮಳೆ, ಗಾಳಿ, ಬಿಸಿಲು ಛಳಿಗೆ ಮೈಯೊಡ್ಡಿ ಮಣ್ಣಿನೊಂದಿಗೆ ಮಣ್ಣಾಗಿ ದುಡಿಯುವ ರೈತ ಕಂಗಾಲು ದರಿದ್ರ, ಬಡತನ ಇವರ ಜೀವನ ಸಂಗಾತಿ, ಈ ಸತ್ಯತೆ ಅರಿತು ರೈತ ತನ್ನ ಮಾಲಿನ ಬೆಲೆ ತಾನೆ ಕಟ್ಟುವಂತಾಗಬೇಕೆಂದು ಹೇಳುತ್ತಿದ್ದ ಶ್ರೀ. ಕೆ. ಎಚ್. ಪಾಟೀಲರು ಅದು ಸಾಧಿಸಲ್ಪಟ್ಟಾಗಲೇ ರೈತರ ಕಲ್ಯಾಣ ಸಾಧ್ಯವೆಂದು ದೃಢವಾಗಿ ನಂಬಿದ್ದರು.

* * * * *

ರೈತ ತನ್ನ ಉತ್ಪಾದನೆಯನ್ನು ಸಂಗ್ರಹಿಸಿ ಅನಂತರ ಮಾರುವ ಸ್ಥಿತಿ ತಲುಪಿದರೆ ಈ ಅನ್ಯಾಯದಿಂದ ಪಾರಾಗಬಲ್ಲ ಎಂದು ಆತ ನಂಬಿದ್ದ. ಇದರ ಪರಿಹಾರಕ್ಕಾಗಿ ಶ್ರೀ: ಕೆ. ಎಚ್. ಪಾಟೀಲರು ದಿ. ಗದಗ ಕೋ- ಆ. ಕಾಟನ್ ಸೇಲ್ ಸೊಸಾಯಿಟಿ ಹಾಗೂ ಎ.ಪಿ.ಎಂ.ಸಿ. ಮೂಲಕ ಗ್ರಾಮೀಣ ಉಗ್ರಾಣಗಳನ್ನು ನಿರ್ಮಿಸಿದರು. ಈ ದೇಶದ ಮೊಟ್ಟ ಮೊದಲ ಸಹಕಾರಿ ಕ್ಷೇತ್ರದ ಬಯಲು ಉಗ್ರಾಣ ಕಟ್ಟಿದ ಶ್ರೇಯಸ್ಸು ಅವರಿಗೆ ಸಲ್ಲುತ್ತದೆ. ಶ್ರೀಮತಿ ಇಂದಿರಾಗಾಂಧಿ ಅವರು ದಿ. ಗದಗ ಕೋ-ಆಫ್. ಕಾಟನ್ ಸೇಲ್ ಸೊಸಾಯಿಟಿ ಸುವರ್ಣ ಮಹೋತ್ಸವ

ಸಮಾರಂಭದಲ್ಲಿ ಪಾಲ್ಗೊಳಲು ಅಂದಿನ ಸಂಸ್ಥಾ ಕಾಂಗ್ರೆಸ್ ಸರಕಾರದ ತೀವ್ರ ವಿರೋಧವಿದ್ದರೂ ಆಗಮಿಸಿದ್ದರು. ಶ್ರೀ ಕೆ.ಎಚ್. ಪಾಟೀಲರು ಹತ್ತಿ ಬೆಳೆಯುವ ರೈತರ ಈ ದುಃಸ್ಥಿತಿಯನ್ನು ತಮ್ಮ ನಾಯಕಿ ಶ್ರೀಮತಿ ಇಂದಿರಾಗಾಂಧಿ ಅವರಿಗೆ ನಿವೇದಿಸಿದರು. ತೀಕ್ಷ್ಣಮತಿ ಶ್ರೀಮತಿ ಗಾಂಧಿ ಸಮಸ್ಯೆ ವಿವರ ಕುರಿತು ಕೂಡಲೇ ಒಂದು ಟಿಪ್ಪಣಿ ಕಳುಹಿಸುವಂತೆ ಸೂಚಿಸಿದರು. ಶ್ರೀ ಕೆ. ಎಚ್. ಪಾಟೀಲರು ಹತ್ತಿ ಬೆಳೆಯುವ ರೈತರ ನೋವು ಹಾಗೂ ಅವರ ಶೋಷಣೆಯ ಪೂರ್ಣ ವಿವರದ ವರದಿ ಶ್ರೀಮತಿ ಇಂದಿರಾಗಾಂಧಿಯವರಿಗೆ ಸಲ್ಲಿಸಿದರು. ಅದರ ಫಲವಾಗಿ ಕಾಟನ್ ಕಾರ್ಪೋರೇಶನ್ ಆಫ್ ಇಂಡಿಯಾ ಜನ್ಮ ತಳೆಯಿತು. ಆ ಮೂಲಕ ಹತ್ತಿ ಮಾರಾಟ ವ್ಯವಹಾರದಲ್ಲಿ ಹೊಸ ಯುಗಕ್ಕೆ ನಾಂದಿ ಹಾಡಿತು.

* * * * *

ರೈತನನ್ನು ಆರ್ಥಿಕ ಶೋಷಣೆಯಿಂದ ಮುಕ್ತಗೊಳಿಸಿದರೆ ಸಾಲದು. ಅಜ್ಞಾನದಿಂದಲೂ ಮುಕ್ತಗೊಳಿಸಬೇಕು. ಆಧುನಿಕ ವಿಜ್ಞಾನ ಹಾಗೂ ತಂತ್ರಜ್ಞಾನದ ಲಾಭ ಆತನಿಗೆ ಹರಿದು ಬರಬೇಕು. ಶ್ರೀ.ಕೆ. ಎಚ್. ಪಾಟೀಲರು ಕೃಷಿ ವಿಜ್ಞಾನ ಕೇಂದ್ರದ ಜೊತೆ ಕಡಿಮೆ ಹಣ ಹೂಡಿ ಅಧಿಕ ಇಳುವರಿ ತೆಗೆಯುವ ತರಬೇತಿ ನೀಡಲು ಕೃಷ್ಣ ಕೃಷಿ ಸಂಸ್ಥೆ ಕಟ್ಟಿದರು. ರೈತರು ಆರೋಗ್ಯ ಶಾಲಿಗಳಾಗಬೇಕು. ಅವರು ದೂರದೂರದ ಪಟ್ಟಣಗಳಿಗೆ ಚಿಕಿತ್ಸೆಗಾಗಿ ಅಲೆಯಬಾರದು ಎಂದು ಹುಲಕೋಟಿಯಲ್ಲಿ ರೂರಲ್ ಮೆಡಿಕಲ್ ಸೊಸಾಯಿಟಿ ಸ್ಥಾಪಿಸಿದ ಪಾಟೀಲರು 60 ಹಾಸಿಗೆಗಳುಳ್ಳ ಈ ಆಸ್ಪತ್ರೆ ಅತ್ಯಾಧುನಿಕ ಸೌಲಭ್ಯಗಳನ್ನು ಹೊಂದುವಂತೆ ಶ್ರಮವಹಿಸಿ ಸಜ್ಜುಗೊಳಿಸಿದರು. ಶ್ರೀ ಕೆ.ಎಚ್. ಪಾಟೀಲರು ಕಟ್ಟಿದ ಎಲ್ಲ ಸಂಸ್ಥೆಗಳು ಒಂದಕ್ಕೊಂದು ಪರಸ್ಪರ ಪೂರಕ ಹಾಗೂ ಪೋಷಕಗಳಾಗಿವೆ.

* * * * *

ರೈತ ಪಾಟೀಲರ ಎಲ್ಲ ಚಟುವಟಿಕೆಗಳ ಆದಿ - ಅಂತ್ಯ. ಹಾಗೂ ಆತನೇ ಅದರ ಕೇಂದ್ರ ಬಿಂದು. ರೈತ ಹಾಗೂ ಕೃಷಿ ಉತ್ಪಾದನೆಗಳನ್ನು ಆಧರಿಸಿಯೇ ಅವರ ಎಲ್ಲ ಚಟುವಟಿಕೆಗಳು ಪ್ರದಕ್ಷಿಣೆ ಹಾಕುತ್ತವೆ. ಎಲ್ಲ ಸಂಸ್ಥೆಗಳ ಚಟುವಟಿಕೆಗಳ ಲಾಭ ರೈತರಿಗೆ ನೇರವಾಗಿ ಹಾಗೂ ಪರೋಕ್ಷವಾಗಿ ವರ್ಗಾಯಿಸಲ್ಪಡಬೇಕು. ಇವೇ ಪಾಟೀಲರ ಕನಸಾಗಿತ್ತು.

* * * * *

ರೈತ ತಾನು ಬೆಳೆದ ಮಾಲಿನ ಬೆಲೆ ತಾನೇ ಕಟ್ಟುವಂತಾಗಬೇಕು. ಇದು ಶ್ರೀ ಕೆ.ಎಚ್. ಪಾಟೀಲರ ಮಂತ್ರ ಹಾಗೂ ಅವರ ಗುರಿ. ರೈತರನ್ನು ಮಧ್ಯವರ್ತಿಗಳ ಕಪಿಮುಷ್ಠಿಯಿಂದ ಪಾರು ಮಾಡಬೇಕು. ದಲ್ಲಾಳಿಗಳ ಅಕ್ಟೋಪಸ್ ಹಿಡಿತದಿಂದ ಮುಕ್ತಗೊಳಿಸಬೇಕು. ಅದಕ್ಕಾಗಿ ಎಲ್ಲ ಪ್ರತಿರೋಧ ಬಂದರೂ ಹಿಂಜರಿಯಬಾರದೆಂಬುದೇ ಶ್ರೀ ಕೆ. ಎಚ್. ಪಾಟೀಲರ ಶಪಥವಾಗಿತ್ತು.

* * * * *

ಶ್ರೀ ಕೆ.ಎಚ್. ಪಾಟೀಲರು ನಾಲ್ಕು ದಶಕಗಳ ಕಾಲದ ನಿರಂತರ ಹೋರಾಟ, ಅವಿಶ್ರಾಂತ ಪರಿಶ್ರಮ ಅಪ್ರತಿಮ ನಾಯಕತ್ವ ಹಾಗೂ ದೂರದರ್ಶಿತ್ವದಿಂದ ಸಾಧಿಸಿದ ಕಾಯಕದಿಂದ ಹುಲಕೋಟಿ ಪರಿಸರ ಸಹಕಾರ ಕಾಶಿಯಾಗಿದೆ. ಗದಗ ಪ್ರದೇಶ ವಂಡರ್‌ಲ್ಯಾಂಡ್ ಆಗಿದೆ.

* * * * *

ಶ್ರೀ ಕೆ.ಎಚ್. ಪಾಟೀಲರು ಕಟ್ಟಿರುವ ವಿವಿಧ ಕೈಗಾರಿಕೆ, ಶಿಕ್ಷಣ ಹಾಗೂ ಸೇವಾ ಕ್ಷೇತ್ರದ ಸಹಕಾರಿ ಸಂಸ್ಥೆಗಳಲ್ಲಿ ಸುಮಾರು 50 ಕೋಟಿ ರೂ. ಗಳಷ್ಟು ಬಂಡವಾಳ ವಿನಿಯೋಗವಾಗಿದೆ. 5 ಸಾವಿರಕ್ಕೂ ಅಧಿಕ ಜನರಿಗೆ ಉದ್ಯೋಗಾವಕಾಶ ದೊರೆತಿದೆ. ಪ್ರತಿ ತಿಂಗಳು 50 ಲಕ್ಷ ರೂಪಾಯಿಗಳಿಗೂ ಅಧಿಕ ವೇತನ ಬಟವಾಡೆಯಾಗುತ್ತಿದೆ. ಈ ಸಮೂಹ ಕೈಗಾರಿಕೆಗಳ ವಾರ್ಷಿಕ ಉತ್ಪಾದನಾ ಮೌಲ್ಯ 2500 ಲಕ್ಷ ರೂಗಳನ್ನು ಮೀರಿದೆ. ಪ್ರತಿ ವರ್ಷ ಈ ಕೈಗಾರಿಕೆಗಳು ಸರಕಾರಕ್ಕೆ ವಿವಿಧ ತೆರಿಗೆ ರೂಪದಲ್ಲಿ ನೀಡುವ ಹಣ 300 ಲಕ್ಷ ರೂ.ಗಳನ್ನು ಮಿಕ್ಕುತ್ತದೆ.

* * * * *

ದಿ. ಕೆ.ಜಿ. ಕುಂದಣಗಾರರ ಅಧ್ಯಕ್ಷತೆಯಲ್ಲಿ 43ನೇ ಕನ್ನಡ ಸಾಹಿತ್ಯ ಸಮ್ಮೇಳನ ಜರುಗಿತ್ತು. ಇದಕ್ಕೆ ಶ್ರೀ ಕೆ. ಎಚ್. ಪಾಟೀಲರು ಸ್ವಾಗತಾಧ್ಯಕ್ಷರು. ಈ ಸಮ್ಮೇಳನದಲ್ಲಿಯೇ ರಾಜ್ಯದ ಹೆಸರನ್ನು ಕರ್ನಾಟಕವೆಂದು ನಾಮಕರಣ ಮಾಡಬೇಕೆಂದು ಒತ್ತಾಯಿಸುವ ನಿರ್ಣಯ ಸ್ವೀಕರಿಸಲಾಯಿತು. ವಿಧಿಯ ವಿಚಿತ್ರ ಕೈವಾಡದ ಮುಂದೆ ಸಮ್ಮೇಳನದ ಸ್ವಾಗತಾಧ್ಯಕ್ಷ ಶ್ರೀ ಕೆ.ಎಚ್. ಪಾಟೀಲರು ಕರ್ನಾಟಕ ನಾಮಕರಣದಲ್ಲಿ ಪ್ರಮುಖ ಪಾತ್ರವಹಿಸಿ ಜನ ಮನ್ನಣೆ ಗಳಿಸಿದರು.

* * * * *

ಶ್ರೀಮತಿ ಇಂದಿರಾಗಾಂಧಿ ಅವರು ಲಕ್ಷ ಲಕ್ಷ ಜನರನ್ನುದ್ದೇಶಿಸಿ ಭಾಷಣ ಮಾಡಿದ್ದು, ಭಗವಾನ್ ಸಾಯಿಬಾಬ ಅವರು ಲಕ್ಷಾಂತರ ಸದ್ಭಕ್ತರಿಗೆ ದರ್ಶನ ನೀಡಿದ್ದು ಕೆ. ಎಚ್. ಪಾಟೀಲರು ರಾಜ್ಯದ ಮುಂದಿನ ಮುಖ್ಯಮಂತ್ರಿಯಾಗುತ್ತಾರೆಂದು ರಾಜೀವ್‌ಗಾಂಧಿಯವರು ಆಶಾಭಾವನೆ ಬೀಜ ಬಿತ್ತಿದ್ದು ಇಲ್ಲಿಯೇ ಕಾಟನ್‌ಸೇಲ್ ಸೊಸಾಯಿಟಿ ಆವರಣದಲ್ಲಿ.

* * * * *

ದೇಶದ ಮೊಟ್ಟ ಮೊದಲ ಕೋ-ಆಪ್ ಮಾರ್ಕೆಟಿಂಗ್ ಸೊಸಾಯಿಟಿ ಸ್ಥಾಪನೆಯಾದದ್ದು ಗದುಗದಲ್ಲಿಯೇ ಎಂಬುದು ಈ ತಾಲ್ಲೂಕಿಗೆ ಹೆಗ್ಗಳಿಕೆ ಪ್ರಾರಂಭ ಕಾಲದಲ್ಲಿ ಬಹು ಸಣ್ಣ ಪ್ರಮಾಣದಲ್ಲಿ ವ್ಯವಹಾರ ನಿರ್ವಹಿಸಿ, 191 ಸದಸ್ಯರು 426 ರೂ. ಶೇರು ಬಂಡ್ವ್ಯಾಳದೊಂದಿಗೆ ಆರಂಭವಾದ ಸಂಸ್ಥೆ 1919-20 ರಲ್ಲಿ 825 ರೂ. ಲಾಭಗಳಿಸಿದರೆ 1923-24 ರಲ್ಲಿ 1184ಕ್ಕೆ ಸದಸ್ಯತ್ವ ಪಡೆದು ಶೇರ್ ಬಂಡವಾಳ 19,467 ರೂ.ಗಳಿಸಿತು. ಈ ಸಂಸ್ಥೆ 188848 ರೂ. ಲಾಭಗಳಿಸಿ ರೈತರ ವಿಶ್ವಾಸಗಳಿಸಿ ಅತ್ಯಂತ ಜನಪ್ರಿಯವಾಯಿತು.

* * * * *

ದೇಶದ ಮೊಟ್ಟ ಮೊದಲು ಸಹಕಾರಿ ಕ್ಷೇತ್ರದ ಗೋದಾಮ ಆರಂಭವಾದುದು ಕಾಟನ್‌ಸೇಲ್ ಸೊಸಾಯಿಟಿಯಲ್ಲಿ. ದೇಶದ ಮೊದಲ ಬಯಲು ಗೋದಾಮ ಆರಂಭವಾದುದು ಸಹ ಕಾಟನ್ ಸೇಲ್ ಸೊಸಾಯಿಟಿಯಲ್ಲಿ. ಇಂದು ಸಂಸ್ಥೆ ಬೆಂತೂರು, ಬಿಂಕದಕಟ್ಟೆ, ಚಿಂಚಲಿ, ಹರ್ಲಾಪೂರ, ಹೊಸಳ್ಳಿ, ಲಕ್ಕುಂಡಿ, ಮಲಸಮುದ್ರ, ಸಂಭಾಪೂರಗಳಲ್ಲಿ ಗ್ರಾಮೀನ ಗೋದಾಮಗಳನ್ನು ಹೊಂದಿದೆ. ಸಂಸ್ಥೆಯ ಒಟ್ಟು ಸಂಗ್ರಹ ಸಾಮರ್ಥ್ಯ10 ಸಾವಿರ ಟನ್‌ಗಳಿಗೂ ಮಿಕ್ಕಿದೆ. ಈ ಅಂಕಿ ಸಂಖ್ಯೆಗಳಿಂದ ಪಾಟೀಲರ ಶ್ರಮದ ಫಲ ಅರಿವಾಗುತ್ತದೆ.

* * * * *

ಕಾಟನ್‌ಸೇಲ್ ಸೊಸಾಯಿಟಿಯಲ್ಲಿ ಕೆಲವೊಮ್ಮೆ ಪಾಟೀಲರು ಖರೀದಿದಾರರನ್ನು ಮನವೊಲಿಸಿ ಕರೆತರುವಂತಹ ಪ್ರಸಂಗಗಳು ಬಂದಿದ್ದವು. ಖರೀದಿದಾರನ ಮನಸ್ಸಿಗೆ ಬಂದಿದ್ದೆ ಬೆಲೆ. ಇನ್ನು ರೈತ ತಾನು ಮಾರಿದ ಹತ್ತಿ ಹಣ ಪಡೆಯಬೇಕಾದರೆ ಆತನ ಕಣ್ಣೀರು ಕಪಾಳಕ್ಕೆ ಬರುತ್ತಿದ್ದವು. ಇದನ್ನೆಲ್ಲ ನೋಡಿದ್ದ ಪಾಟೀಲರು ಈ ಖರೀದಿದಾರ ಮಧ್ಯವರ್ತಿ ಇಲ್ಲದ ವ್ಯವಸ್ಥೆ ರೂಪಿಸುವ ಕನಸು ಕಂಡರು. ಅದಕ್ಕಾಗಿ ರೈತರೇ ಹತ್ತಿ ಕಾಟನ್‌ಸೇಲ್ ಸೊಸಾಯಿಟಿಯಿಂದ ಗದಗದಲ್ಲಿರುವ ನೂಲಿನ ಗಿರಣಿ ಸ್ಥಾಪಿಸುವ ಕೆಲಸಕ್ಕೆ ಅರ್ಪಿತರಾದರು

* * * * *

ತಾನು ಹುಟ್ಟಿದ ದ್ವಿತೀಯ ವರ್ಷವೇ ಲಾಭಗಳಿಸಲು ತೊಡಗಿದ ಈ ಸಂಸ್ಥೆ ಹಲವು ಪ್ರಥಮಗಳ ಹೆಗ್ಗಳಿಕೆ ಹೊಂದಿರುವ ಜೊತೆಗೆ ರಾಷ್ಟ್ರಮಟ್ಟದ ಸಹಕಾರಿಗಳನ್ನು ರೂಪಿಸಿದೆ. ಈ ಮಿಲ್ಲಿನ ಸ್ಥಾಪಕ ಚೇರ್‌ಮನ್ ಶ್ರೀ ಡಿ.ಆರ್. ಪಾಟೀಲರು ಹಾಗೂ ಇದರ ರೂವಾರಿ ಶ್ರೀ ಕೆ.ಎಚ್. ಪಾಟೀಲರು ಅಖಿಲ ಭಾರತ ಸಹಕಾರಿ ನೂಲಿನ ಗಿರಣಿಗಳ ಮಹಾಮಂಡಳದ ಅಧ್ಯಕ್ಷರಾಗಿ ರಾಷ್ಟ್ರದಲ್ಲಿ ಸಹಕಾರಿ ನೂಲಿನ ಗಿರಣಿಗಳ ಸ್ಥಾಪನೆಗೆ ಚಾಲನೆ ನೀಡುವಂತಾಯಿತು. ಎರಡು ದಶಕಗಳನ್ನು ಕಂಡಿರುವ ಈ ಸಂಸ್ಥೆ ಕಾಲಕ್ಕೆ ತಕ್ಕಂತೆ ತನ್ನನ್ನು ತಾನು ರೂಪಾಂತರಿಸಿಕೊಂಡಿದೆ. 220 ಲಕ್ಷ ರೂ. ಯೋಜನಾ ವೆಚ್ಚದ ಈ ಸಂಸ್ಥೆಯು 455 ಲಕ್ಷ ರೂ. ವೆಚ್ಚದಲ್ಲಿ ತನ್ನ ಯಂತ್ರೋಪಕರಣಗಳ ಆಧುನೀಕರಣ ಮಾಡಿದೆ. ಈ ಆಧುನೀಕರಣಕ್ಕೆ ತನ್ನ ಸ್ವಂತ ಸಂಪನ್ಮೂಲದಿಂದ 218.31 ಲಕ್ಷ ರೂ. ಒದಗಿಸಿದೆ. ತಾನು ಉತ್ಪಾದಿಸುವ ನೂಲಿನ ಗುಣಮಟ್ಟದಿಂದ ಖ್ಯಾತಿ ಪಡೆದಿರುವ ಈ ಮಿಲ್ಲು ರಾಜ್ಯದ ನೇಕಾರರ ಪ್ರೀತಿ ಅಭಿಮಾನಕ್ಕೆ ಪಾತ್ರವಾಗಿದೆ.

* * * * *

ದಿ. ಗದಗ ಕೋ-ಆಪ್. ಟೆಕ್ಸ್‌ಟೈಲ್ ಮಿಲ್ ಮಾದರಿಯಲ್ಲಿ ಹತ್ತಿ ಬೆಳೆಯುವ ರೈತರ ಹಿತ ರಕ್ಷಿಸುತ್ತಿರುವ ದಿ. ಫಾರ್ಮರ್ಸ್ ಕೋ-ಆಪ್. ಸ್ಪಿನ್ನಿಂಗ್ ಮಿಲ್ ಪ್ರದೇಶದ ಅಭಿವೃದ್ಧಿ ಚಟುವಟಿಕೆಗಳಿಗೆ ಅಮೂಲ್ಯ ಕಾಣಿಕೆ ನೀಡಿದೆ ನಿರಂತರ ವಿಸ್ತರಣೆ ಹಾಗೂ ಆಧುನೀಕರಣಕ್ಕೆ ಅರ್ಪಿತವಾಗಿರುವ ಈ ಸಂಸ್ಥೆ ತನ್ನ ಸೋದರ ಸಂಸ್ಥೆಗಳ ಜೊತೆಗೆ ರೈತರ ಹಾಗೂ ಗ್ರಾಮೀಣ ಪ್ರದೇಶದ ಅಭಿವೃದ್ಧಿಯಲ್ಲಿ ಸಮರ್ಪಿತವಾಗಿದೆ.

* * * * *

ನಮ್ಮ ದೇಶದ ಕೃಷಿಗೆ ಪೂರಕ-ಪೋಷಕವಾಗಿರುವ ಕ್ಷೇತ್ರವೆಂದರೆ ಪಶುಸಂಗೋಪನೆ. ಪ್ರಪಂಚದಲ್ಲಿಯೇ ಅತ್ಯಧಿಕ ಸಂಖ್ಯೆ ದನಕರುಗಳಿರುವುದು ನಮ್ಮ ದೇಶದಲ್ಲಿ. ನಮ್ಮ ರಾಜ್ಯದಲ್ಲಿ ಸುಮಾರು 30 ದಶಲಕ್ಷ ದನಕರುಗಳಿವೆ. ನಮ್ಮ ದನಕರುಗಳ ಸಂಖ್ಯೆ ಅಧಿಕ, ಆದರೆ ಅವು ದುರ್ಬಲ, ಪಶುಪಾಲನೆಯ ವಾಸ್ತವಿಕ ಕಾರ್ಯಕ್ರಮವಿಲ್ಲದೆ ಕೃಷಿಗೆ ಸಂಬಂಧಿಸಿದ ಯಾವುದೇ ಯೋಜಿತ ಕಾರ್ಯಕ್ರಮವೂ ಪೂರ್ಣಗೊಳ್ಳುವುದಿಲ್ಲ. ಇದನ್ನು ಮನಗಂಡಿದ್ದ ಶ್ರೀ ಕೆ.ಎಚ್. ಪಾಟೀಲರು ರೈತರ ಪರಿಸ್ಥಿತಿ ಸುಧಾರಿಸಬೇಕಾದರೆ ಆತನ ಪಶು ಸಂಪತ್ತಿನ ಸ್ಥಿತಿ ಸುಧಾರಿಸಬೇಕೆಂದರು. ಅದಕ್ಕಾಗಿ ದನಕರುಗಳಿಗೆ ಪೌಷ್ಟಿಕ ಆಹಾರ ಪೂರೈಸುವ ಸಂಸ್ಥೆಗೆ ಹುಟ್ಟು ಹಾಕಿದರು. ಶ್ರೀ ಕೆ.ಎಚ್. ಪಾಟೀಲರು ಹುಲಕೋಟಿ ಕೋ-ಆಪ್ ಆಯಿಲ್ಸ್ ಅ್ಯಂಡ್ ಫೀಡ್ಸ್ ಸೊಸಾಯಿಟಿಯನ್ನು ನೋಂದಾಯಿಸಿದರು. 1966-67 ರಲ್ಲಿ ಕಾರ್ಖಾನೆಯ ನಿರ್ಮಾಣ ಕಾರ್ಯವನ್ನು ಸಮರೋಪಾದಿಯಲ್ಲಿ ಮಾಡಿ ಮುಗಿಸಿದ ಪಾಟೀಲರು ತಮ್ಮ ಪರಿಸರದ ರೈತರಿಗೆ ಮಾತ್ರವಲ್ಲ ದೂರ ದೂರದ ರೈತರಿಗೆ ಸಹ ಪೌಷ್ಠಿಕ ಆಹಾರ ವಿತರಣೆಯ ವ್ಯವಸ್ಥೆ ಮಾಡಿದರು.

* * * * *

ಹದಿನೆಂಟನೆಯ ಶತಮಾನ ಈ ಪ್ರಪಂಚದ ಉತ್ಪಾದನಾ ಇತಿಹಾಸದಲ್ಲಿ ದಾಪುಗಾಲು ಹಾಕಿದ ಪರ್ವಕಾಲ ಮಾನವ ಶಕ್ತಿಯ ಬದಲು ಯಂತ್ರಶಕ್ತಿ ಬಳಸಲು ಆರಂಭಿಸಿದ ಯುಗದ ಪ್ರವೇಶ. ಈ ಯಂತ್ರಶಕ್ತಿ ಬಳಸಿದ ದೇಶಗಳು ಬಲಿಷ್ಠ ಹಾಗೂ ಸಮೃದ್ಧಿ ಶ್ರೀಮಂತ ದೇಶವಾಗಿ ಹೊರಹೊಮ್ಮಿದ್ದವು. ವಿಶ್ವದ ಪುರಾತನ ಸಂಸ್ಕೃತಿಯ ದೇಶಗಳನ್ನು ಹಿಂದೆಹಾಕಿ ಮುಂದೆ ಸಾಗಿದವು. ಈ ಯಂತ್ರಶಕ್ತಿಯ ಬಲದ ಬಳಕೆಯಿಂದಾಗುವ ಲಾಭದ ಸರಿಯಾದ ಕಲ್ಪನೆ ಹೊಂದಿದ್ದ ಭಾರತ ರತ್ನ ಡಾ।। ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು ಕೈಗಾರೀಕರಣ ಇಲ್ಲವೆ ವಿನಾಶ ಎಂದರು. ಅವರ ಹುಟ್ಟುಹಬ್ಬದಂದು ಹುಲಕೋಟಿಯಲ್ಲಿ ಶಾಸಕ ಶ್ರೀ ಎಚ್. ಕೆ. ಪಾಟೀಲರ ನೇತೃತ್ವದಲ್ಲಿ ಸೇರಿದ್ದ ಯುವಕರು ತಮ್ಮ ಹಾಗೂ ತಮ್ಮ ಭಾಗದ ಅಭಿವೃದ್ಧಿಗೆ ಸಣ್ಣ ಕೈಗಾರಿಕೆಗಳ ಸರಮಾಲೆ ನಿರ್ಮಿಸುವದೊಂದೇ ತಾರಕ ಮಂತ್ರ ಎಂದು ದಿ. ಗದಗ ಕೋ-ಆಪರೇಟಿವ್ ಇಂಡಸ್ಟ್ರಿಯಲ್ ಎಸ್ಟೇಟ್ ಲಿ. ಈ ಸಂಸ್ಥೆ ಸ್ಥಾಪಿಸಲು ನಿರ್ಧರಿಸಿದರು.

* * * * *

ಸಹಕಾರ-ಸರಕಾರ-ಖಾಸಗಿ ರಂಗದ ಎಲ್ಲ ಉತ್ತಮಾಂಶಗಳನ್ನು ಅಳವಡಿಸಿಕೊಂಡಿರುವ ದಿ ಗದಗ ಕೋ-ಆಪರೇಟಿವ್ ಇಂಡಸ್ಟ್ರಿಯಲ್ ಎಸ್ಟೇಟ್ ದೇಶದಲ್ಲಿಯೇ ಒಂದು ವಿನೂತನ ಪ್ರಯೋಗ ಜೊತೆಗೆ ಯಶಸ್ಸಿನ ಕಥೆ ಸಾರುವ ಪ್ರಯತ್ನ 24ನೇ ಜನವರಿ 1990 ರಂದು ಸುಂದರ ಸಂಜೆ ಹಿರಿಯ ಚೇತನ ಶ್ರೀ ಕೆ.ಎಚ್. ಪಾಟೀಲರು ಸಂಸ್ಥೆಯ ಕಟ್ಟಡಕ್ಕೆ ಅಡಿಗಲ್ಲನ್ನಿರಿಸಿ, ಶುಭ ಹಾರೈಸಿದರು.

* * * * *

ಒಂದು ಕಾಲಕ್ಕೆ ಕೇವಲ ಕೃಷಿಯನ್ನೇ ಅವಲಂಬಿಸಿದ್ದ ಹುಲಕೋಟಿ ಗ್ರಾಮ ಪರಿಸರದಲ್ಲಿ ಕೈಗಾರಿಕೆಗಳ ಹಾಗೂ ತಾಂತ್ರಿಕ ಮಹಾವಿದ್ಯಾಲಯಗಳ ಸ್ಥಾಪನೆಯಿಂದಾಗಿ ಗ್ರಾಮದ ಭೌಗೋಳಿಕ, ಭೌತಿಕ, ಸಾಮಾಜಿಕ, ಸಾಂಸ್ಕೃತಿಕ ಪರಿಸರದಲ್ಲಿ ಭಾರಿ ಬದಲಾವಣೆ ಬಂದಿತು. ಕೈಗಾರಿಕೆಗಳಲ್ಲಿ

ವ್ಯಕ್ತಿಯನ್ನಾಗಿ ಮಾಡುವ ಹಾಗೂ ಶಾಲೆಯಿಂದ ಹೊರಬಂದ ಮಗು ಕುಟುಂಬಕ್ಕೆ ಸಮಾಜಕ್ಕೆ ರಾಷ್ಟ್ರಕ್ಕೆ ಉಪಯುಕ್ತ ವ್ಯಕ್ತಿಯಾಗಿ ತಾನು ಆಯ್ದುಕೊಳ್ಳುವ ಕ್ಷೇತ್ರದಲ್ಲಿ ವಿಖ್ಯಾತನಾಗಿ ತನಗೂ ತನ್ನ ಪರಿಸರಕ್ಕೂ ನೆರವಾಗುವಂತೆ ವ್ಯಕ್ತಿ ಚಾರಿತ್ರ್ಯ ನಿರ್ಮಿಸುವ ಧ್ಯೇಯದೊಂದಿಗೆ ಈ ವಸತಿ ಶಾಲೆ ಆರಂಭಿಸಲಾಗಿದೆ.

* * * * *

ಪಾಶ್ಚಾತ್ಯ ಅಂಧಾನುಕರಣೆಗೆ ಬದಲು ನಮ್ಮ ಪುರಾತನ ಸನಾತನ ಕೃಷಿಯನ್ನು ಸರಿಯಾಗಿ ತಿಳಿಸಿ ಆರೋಗ್ಯಶಾಲಿ ಭೂಮಿ, ಶಕ್ತಿಶಾಲಿ ಜನಾಂಗ ಹಾಗೂ ಸಮೃದ್ಧ ದೇಶ ನಿರ್ಮಿಸಲು ಕೃಷ್ಣ ಕೃಷಿ ತನ್ನ ಚಾರಿತ್ರಿಕ ಪಾತ್ರ ನಿರ್ವಹಿಸಲು ಸಜ್ಜಾಗಿದೆ. ಕೆ. ಎಚ್. ಪಾಟೀಲರ ಸಮೃದ್ಧ ಸುಂದರ, ಸ್ವಾಭಿಮಾನಿ, ಸ್ವಾವಲಂಬಿ, ಗ್ರಾಮೀಣ ಬದುಕು ರೂಪಿಸಲು ಕೃಷ್ಣ ಕೃಷಿ ದಾಪುಗಾಲಿಡಲು ಅಣಿಯಾಗಿದೆ. ಶ್ರೀ ಕೆ.ಎಚ್. ಪಾಟೀಲರಿಗೆ ಋಣಿಯಾಗಿದೆ. ಕೃಷಿ ಕ್ಷೇತ್ರದಲ್ಲಿ ಸತ್ಯ ಸಂಶೋಧನೆ ಹಾಗೂ ಪ್ರಯೋಗಗಳು ನಡೆಯಬೇಕು. ಅವುಗಳ ಪ್ರಯೋಜನ ರೈತರಿಗೆ ತಲುಪಿ ಉತ್ಪಾದನೆ ಹೆಚ್ಚಬೇಕು. ರೈತರ ಆರ್ಥಿಕ ಪರಿಸ್ಥಿತಿ ಸುಧಾರಿಸಬೇಕೆಂಬುದು ಶ್ರೀ ಕೆ.ಎಚ್. ಪಾಟೀಲರ ಉದ್ದೇಶ. ಈ ಉದ್ದೇಶ ಸಾಧನೆಗಾಗಿ 1981 ರಲ್ಲಿ ಅಗ್ರಿಕಲ್ಚರಲ್ ಸೈನ್ಸ್ ಫೌಂಡೇಶನ್ ಸ್ಥಾಪಿಸಲಾಯಿತು.

* * * * *

ಸಹಕಾರಿ ಆಂದೋಲನದಿಂದ ಗ್ರಾಮೀಣ ಪರಿಸರದಲ್ಲಿ ಶೈಕ್ಷಣಿಕ ಬೆಳವಣಿಗೆ ಆಗುತ್ತದೆ. ಸಹಕಾರಿ ತತ್ವದ ತಿಳುವಳಿಕೆಗೆ ಶಿಕ್ಷಣ ಅವಶ್ಯ. ವಿದ್ಯೆ ಇಲ್ಲದವನ ಬಾಳು ಹಾಳೂರು ಹದ್ದಿನಂತೆ ಎಂದ ನಾಡೋಕ್ತಿಯಂತೆ ಎಲ್ಲರಿಗೂ ಶಿಕ್ಷಣ ಅವಶ್ಯ. ಸರಕಾರ ಕಡ್ಡಾಯ ಶಿಕ್ಷಣವನ್ನು ಜಾರಿಗೆ ತಂದರೂ ಸಹ ಎಲ್ಲಾ ಗ್ರಾಮೀಣ ಪ್ರದೇಶಗಳಿಗೆ ಶಿಕ್ಷಣ ಒದಗಿಸಲು ಸಾಧ್ಯವಿಲ್ಲ. ಏಕೆಂದರೆ ಗ್ರಾಮೀಣ ಪರಿಸರದಲ್ಲಿ ಸರಿಯಾದ ಶಾಲಾ ಕೊಠಡಿಗಳಿಲ್ಲ. ಮತ್ತು ಶಿಕ್ಷಕರಿಲ್ಲ. ಆದರ ಸಹಕಾರಿ ಆಂದೋಲನದಿಂದ ಗ್ರಾಮೀಣ ಮಟ್ಟದಲ್ಲಿ ಶಿಕ್ಷಣವನ್ನು ಒದಗಿಸಲು ಸಾಧ್ಯವಿದೆ. ಈ ದಿಸೆಯಲ್ಲಿ ಹುಲಕೋಟಿಯ ಸಹಕಾರ ಚಳುವಳಿಯು ಮಹತ್ತರ ಕೊಡುಗೆ ನೀಡಿದೆ. ಆದರ ಸಿಂಹಪಾಲು ಪಾಟೀಲರಿಗೆ ಸೇರಬೇಕು. ಊರಿಗೆ ಉಪಕಾರ ಮಾಡಬೇಕು ಹಾಗೂ ತಮ್ಮೂರಿನ ಜನರು ಸುಖವಾಗಿರಬೇಕೆಂಬುದು ಪಾಟೀಲರ ಆಶೆಯಾಗಿತ್ತು ಹಾಗೂ ಅದು ಅವರ ದೈನಂದಿನ ಮಂತ್ರವಾಗಿತ್ತು. ಅದಕ್ಕಾಗಿ ಅವರು ಸಹಕಾರ ಸಂಘಗಳ ಸ್ಥಾಪನೆಗೆ ಮುಂದಾದರು. ಸಹಕಾರಿ ಭೀಷ್ಮ ಎಂಬ ಹೆಗ್ಗಳಿಕೆಗೆ ಪಾತ್ರರಾದರು.

* * * * *

ದಿನಾಂಕ 9.2.1992 ಶ್ರೀ ಕೆ.ಎಚ್. ಪಾಟೀಲರು ತಮ್ಮ ನೆಚ್ಚಿನ ಅಭಿಮಾನಿಗಳನ್ನು ಬಿಟ್ಟು ದೂರ ಬಹುದೂರ ಹೊರಟುಹೋದ ಕರಾಳದಿನ. ಧೀಮಂತ ನಾಯಕ ಹುಲಕೋಟಿ ಹುಲಿ, ಸಹಕಾರಿ ಭೀಷ್ಮರು ಅಸ್ತಂಗತವಾಗಿ ವರ್ಷಗಳು ಉರುಳುತ್ತಿವೆ ಮರೆವಿನತೆರೆ ಸರಿಯುತ್ತಿದೆ. ಈಗ ನಮ್ಮ ಮುಂದಿರುವುದು ಅವರ ನೆನಪು ಅವರ ಸಾಧನೆಗಳು ಮತ್ತು ಅವರು ಕಟ್ಟಿ ಬೆಳೆಸಿದ ಅನೇಕ ಸಂಸ್ಥೆಗಳು.

* * * * *

## ಪಾಟೀಲರ ಜೀವನದ ಕೆಲವು ಮುಖ್ಯ ಘಟನೆಗಳು

### ಸೇಲ್ ಸೊಸಾಯಿಟಿಯಲ್ಲಿ ಮಲ್ಲಿಗೆ ಹೂ ಕಂಡಾಗ

ದಿ. ಕೆ.ಹೆಚ್. ಪಾಟೀಲರಕು ಒಮ್ಮೆ ಸೂರ್ಯೋದಯ ಸಮಯಕ್ಕೆ ಗದ ಕೋ. ಆಪ್. ಕಾಟನ್ ಸೇಲ್ ಸೊಸಾಯಿಟಿಗೆ ಬಂದರು. ಗೇಟಿನಲ್ಲಿ ಪ್ರವೇಶಿಸಿದಾಗ ಮಲ್ಲಿಗೆಯ ಸುವಾಸನ ಬಡಿಯಿತು. ಕತ್ತೆತ್ತಿ ನೋಡಿದರು. ಗೇಟಿನ ಬಳಿ ಬೆಳೆದ ಹೂವಿನ ಕಂಟಿಯಲ್ಲಿ ಅರಳಿದ ಹೂಗಳನ್ನು ಕಂಡರು. ವಾಚಮನ್ನನಿಗೆ ಬಿಡಿಸಲು ಹೇಳಿದರು. ಹೂ ಮಾರುವವರನ್ನು ಕರೆಯಿಸಿ ಬಿಡಿಸಿದ ಹೂ ಬೆಲೆ ಕಟ್ಟಿಸಿದರು. ಬೆಲೆ ರೂ. 2.50 ಪೈಸೆ ಕಟ್ಟಿದರು. ಹೂ ಮಾರಿಬಂದ ಹಣ ಸೊಸಾಯಿಟಿ ಲೆಕ್ಕದಲ್ಲಿ ಜಮಾ ಮಾಡಿದರು.

### ಹಸಿರು ಪ್ರೇಮಿ

ದಿ. ಕೆ.ಹೆಚ್. ಪಾಟೀಲರು ಕಟ್ಟಿದ ಸಂಸ್ಥೆಗಳು ಹಲವಾರು. ಅವರು ಎಲ್ಲ ಸಂಸ್ಥೆಗಳಲ್ಲಿಯೂ ಗಿಡ, ಮರ. ಹೂ ಬಳ್ಳಿ ಬೆಳೆಯಲು ಆದೇಶಿಸುತ್ತಿದ್ದರು. ಅಂತೆಯೇ ದಿ. ಫಾರ್ಮರ್ರ್ಸ್ ಕೋ. ಆಫ್. ಸ್ಪಿನ್ನಿಂಗ್ ಮಿಲ್ಸ್‌ನ ಕಟ್ಟಡ ಪ್ರಾರಂಭದಿಂದಲೇ ರಾಜ್ಯ ಸರಕಾರದ ತೋಟಗಾರಿಕೆಯ ಇಲಾಖೆಯ ಅಫೀಸರರನ್ನು ಹಸಿರು ಯೋಜನೆ ರೂಪಿಸಲು ಎರವಲು ಪಡೆದಿದ್ದರು. ಸರಕಾರಿ ಅಧಿಕಾರಿಮಾಡಿದ ಮೆಚ್ಚುಗೆಯ ಕೆಲಸಕ್ಕಾಗಿ ಸ್ಥಳದಲ್ಲಿಯೇ 500 ರೂಪಾಯಿ ತಮ್ಮ ಜೇಬಿನಿಂದ ಕೊಟ್ಟರು.

### ರಾಜಕಾರಣಿ

ನಾನು ಸತ್ತಾಗ ಮಂತ್ರಿ ಅಥವಾ ಸಂಸ್ಥೆ ಕಟ್ಟಿದ ಸಂಸ್ಥಾಪಕ ಅಥವಾ ಸಹಕಾರಿ ಧುರೀಣ ಅಥವಾ ಬೇರೆ ಯಾವ ರಂಗದ ಸೇವೆಯ ಬಗ್ಗೆ ಬರೆಯಬೇಡಿರಿ. ನಾನೊಬ್ಬ ರಾಜಕಾರಣಿ ಆಗಿದ್ದೆ ಎಂದು ಬರೆಯಿರಿ. ನಾನು ರಾಜಕಾರಣಿ ಆಗಿ ಬದುಕಿ ರಾಜಕಾರಣಿ ಆಗಿ ಸಾಯುತ್ತೇನೆ ಎಂದು ದಿವಂಗತ ಡಾ. ಚಿಂತಾಮಣಿಯವರ 70ನೇ ಹುಟ್ಟುಹಬ್ಬದ ಸಮಾರಂಭದಲ್ಲಿ ಹೇಳಿದರು.

### ಜೋಳದ ಬರ ಬಂದಾಗ

ಅರವತ್ತರ ದಶಕದಲ್ಲಿ ಗದಗ ಹಾಗೂ ಸುತ್ತ ಮುತ್ತ ಜೋಳದ ಬೆಳೆ ಬರಲಿಲ್ಲ. ಜೋಳದ ಬರ ಬಂದಿತು. ಪೇಟೆಯಲ್ಲಿಯ ಜೋಳದ ದರ ಬಡವರಿಗೆ ನಿಲುಕದಾಯಿತು. ಹೊಟ್ಟೆಗೆ ರೊಟ್ಟಿ ಇಲ್ಲದೆ ಉಪವಾಸ ಬಿದ್ದರು. ಬಡವರ ಹಸಿದ ಹೊಟ್ಟೆಯಲ್ಲಿ ಕರಳು ಸುಡುತ್ತಿರುವ ವಾಸನೆ ಕೆ.ಎಚ್. ಪಾಟೀಲರ ಮೂಗಿಗೆ ಬಡಿಯಿತು. ಕೂಡಲೇ ಕಾರ್ಯಪ್ರವೃತ್ತರಾಗಿ ಮುತ್ತಿನಂತಹ ಜೋಳ ಗುಲಬರ್ಗಾದಿಂದ ದಿ ಗದಗ ಕೋ. ಆಫ್. ಸೇಲ್ ಸೊಸಾಯಿಟಿಯ ಮುಖಾಂತರ ಖರೀದಿಸಿ ಪ್ರಾಪ್ತಿ ಇಲ್ಲದೆ ಬಡಜನರಿಗೆ ಮಾರುವ ವ್ಯವಸ್ಥೆ ಮಾಡಿದರು. ವಿರೋಧಿಗಳಿಗೆ ಈ ಕ್ರಮ ಹಿಡಿಸಲಿಲ್ಲ. ಸರಕಾರಕ್ಕೆ ದೂರು ಸಲ್ಲಿಸಿದರು. ಸರಕಾರ ಗುಲಬುರ್ಗಾದಿಂದ ಜೋಳ ತಂದು ಬಡ ಜನತೆಗೆ ಮಾರಿದ್ದು ಸೊಸಾಯಿಟಿಯ ವ್ಯಾಪ್ತಿಗೆ ಮೀರಿದ ವ್ಯವಹಾರ ಎಂದು ಸೊಸಾಯಿಟಿಯನ್ನು ಸುಪರ್‌ಸಿಡ್ ಮಾಡಲು ಹೊರಟಿತ್ತು.

## ಗದಗ ಪರಿಸರದಲ್ಲಿ ಪಾಟೀಲರ ಶ್ರಮದ ಫಲ

1. ಗಾಂಧಿ ಸೇತುವೆ (1956) ಹುಲಕೋಟಿ
2. ಗ್ರಾಮೀಣ ಉಗ್ರಾಣ (1956) ಹುಲಕೋಟಿ
3. ಗ್ರಾಮ ಕೇಂದ್ರ (1956) ಹುಲಕೋಟಿ
4. ಶ್ರೀರಾಮ ಮಂದಿರ (1956) ಹುಲಕೋಟಿ
5. ಗರಡಿಮನಿ (1956)
6. ಉಗ್ರಾಣ (1956) ಕಾ.ಸೇ. ಸೊ. ಗದಗ
7. ಸ್ನಾನಗೃಹಗಳು (1956)
8. ಪಶು ಚಿಕಿತ್ಸಾಲಯ (1956) ಹುಲಕೋಟಿ
9. ಉಗ್ರಾಣ (1961) ಮಲಸಮುದ್ರ
10. ಉಪ ಮಾರುಕಟ್ಟೆ (1961) ಮುಳಗುಂಜ
11. ಜನರಲ್ ಹಾಸ್ಟೆಲ್ (1961) ಗದಗ
12. ಕಾಟನ್ ಸೇಲ್ ಸೊಸಾಯಿಟಿ ಮಹಾದ್ವಾರ (1961) ಗದಗ
13. ಧಿ. ಧಾರವಾಡ ಡಿಸ್ಟ್ರಿಕ್ಟ್ ಕೋ- ಆಫ್. ಆಯಿಲ್ ಸೀಡ್ಸ್ ಲಿ. ಗದಗ
14. ಶಿಶುವಿಹಾರ ಕಟ್ಟಡ (1962) ಬಿಂಕದಕಟ್ಟಿ
15. ರೈತ ಭವನ (1963) ಗದಗ
16. ಆರ್. ಎ ಜಿ. ಹೈಸ್ಕೂಲ್ (1961) ಹುಲಕೋಟಿ
17. ಉಗ್ರಾಣ (1956) ಹೊಸಳ್ಳಿ.
18. ಎ.ಪಿ.ಎಂ. ರೈತ ಭವನ (1965) ಗದಗ
19. ದಿ. ಹುಲಕೋಟಿ ಕೋ-ಆಪ್. ಕ್ಯಾಟಲ್‌ಫೀಡ್ ಪ್ರೊಸೆಸಿಂಗ್ ಸೊಸಾಯಿಟಿ (1960) ಹುಲಕೋಟಿ.
20. ಪರಿಶಿಷ್ಟ ವರ್ಗದವರಿಗೆ ಸಮಾಜ ಕೇಂದ್ರ (1967) ಹುಲಕೋಟಿ
21. ಸಮಾಜ ಮಂದಿರ (1967) ಬಿಂಕದಕಟ್ಟಿ
22. ಧರ್ಮಶಾಲೆ (1907) ಬಿಂಕದಕಟ್ಟಿ
23. ಪಂಚಾಯತಿ ಕಟ್ಟಡ (1968) ಬಿಂಕದಕಟ್ಟಿ
24. ಗಂಡು ಮಕ್ಕಳ ಪ್ರಾಥಮಿಕ ಶಾಲೆ (1968) ಬಿಂಕದಕಟ್ಟಿ

25. ಉಗ್ರಾಣ (1968) ಬಿಂಕದಕಟ್ಟಿ
26. ಎಚ್.ಸಿ.ಇ.ಎಸ್. ಬಾಲಕಿಯರ ಪ್ರೌಢಶಾಲೆ (1970) ಬೆಟಗೇರಿ
27. ರೆಡ್ಡಿ ಕೋ-ಆಪ್ ಕ್ರೆಡಿಟ್ ಬ್ಯಾಂಕ್ (1970) ಗದಗ
28. ಗ್ರೌಂಡನಟ್ ಪ್ರೊಸೆಸ್ಸಿಂಗ್ ಸೊಸಾಯಿಟಿ (1970) ಹುಲಕೋಟಿ
29. ಬಸ್‌ನಿಲ್ದಾಣ (1972) ಬಿಂಕದಕಟ್ಟಿ
30. ಬಳ್ಳಾರಿ ಗೇಟು ಬಳಿ ಅಂಡರ ಬ್ರಿಡ್ಜ್ (1972) ಗದಗ
31. ಶಿಶುವಿಹಾರ (1972) ಬಿಂಕದಕಟ್ಟಿ
32. ಗ್ರಾಮೀಣ ಉಗ್ರಾಣ (1972) ಬಿಂಕದಕಟ್ಟಿ
33. ಎಚ್.ಸಿ.ಇ.ಎಸ್. ಕಟ್ಟಡ (1972) ಗದಗ
34. ಕಾಲೇಜ್ ಹಾಸ್ಟೆಲ್ (1972) ಗದಗ
35. ಪ್ರಾಣಿ ಸಂಗ್ರಹಾಲಯ (1972) ಗದಗ
36. ಪ್ರವಾಸಿ ಮಂದಿರ (1972) ಹುಲಕೋಟಿ
37. ಗದಗ ನೇಕಾರ ಅಭಿವೃದ್ಧಿ ಸಹಕಾರಿ ಸಂಘದ ಕಟ್ಟಡ (1972) ಗದಗ-ಬೆಟಗೇರಿ
38. ಗ್ರಾಮೀಣ ಉಗ್ರಾಣ (1973) ಕೋಟುಮಚಗಿ
39. ರೈಲ್ವೆ ಪುಟ ಓವರ್ ಬ್ರಿಜ್ ((1974) ಗದಗ
40. ಗ್ರಾಮೀಣ ಉಗ್ರಾಣ (1974) ಗದಗ
41. ಖಾದಿ ಗ್ರಾಮೋದ್ಯೋಗ ಬಡಗಿತನ ಕಮ್ಮಾರಿಕೆ ಘಟಕಗಳ ಕಟ್ಟಡ (1974) ಹುಲಕೋಟಿ
42. ರೇಷ್ಮೆ ಮಾರಾಟ ಮಳಿಗೆ (1974) ಗದಗ
43. ಜನತಾ ಬಜಾರ ನೂತನ ಕಟ್ಟಡ (1974) ಗದಗ
44. ಕೆ.ಹೆಚ್.ಡಿಸಿ. (1977) ಬೆಟಗೇರಿ
45. ಎ.ಪಿ.ಎಂ.ಸಿ. ಟೆಂಡರ್ ಹಾಲ್ (1973) ಗದಗ
46. ಓಪನ್ ಶೆಡ್ (1973) ಮುಳಗುಂದ
47. ದಿ. ಗದಗ ಕೋ-ಆಪ್. ಟೆಕ್ಸ್‌ಟೈಲ್ ಮಿಲ್ (1973) ಹುಲಕೋಟಿ
48. ಗ್ರಾಮೀಣ ಉಗ್ರಾಣ (1974) ಕೋಟುಮಚಗಿ
49. ದಿ. ಕೋ.ಆಪ್. ಆಯಿಲ್ಸ್ ಲಿ. (1974) ಬಿಂಕದಕಟ್ಟಿ
50. ತುಂಗಭದ್ರ ನೀರು ಪೂರೈಕೆ ಯೋಜನೆ ಕಟ್ಟಡ (1974) ಕೋರ್ಲಹಳ್ಳಿ

51. ಫಾರ್ಮರ್ಸ್ ಕೋ-ಆಪ್. ಸ್ಪಿನ್ನಿಂಗ್ ಮಿಲ್ (1980) ಹುಲಕೋಟಿ
52. ಆರ್.ಟಿ.ಇ. ಪಾಲಿಟೆಕ್ನಿಕ್ ಕಾಲೇಜ್ (1980) ಹುಲಕೋಟಿ
53. ಆರ್.ಟಿ.ಇ. ಎಂಜಿನಿಯರಿಂಗ್ ಕಾಲೇಜ್ (1980) ಹುಲಕೋಟಿ
54. ಕ್ರಾಪ್ ಡೆವ್ಲಲಪ್‌ಮೆಂಟ್ ಸೊಸಾಯಿಟಿ (1969) ಹುಲಕೋಟಿ
55. ಗ್ರಾಮೀಣ ಉಗ್ರಾಣ (1989) ಚಿಕ್ಕದಂದಿಗೋಳ
56. ಉಪ ಮಾರುಕಟ್ಟೆ (1989) ಲಕ್ಕುಂಡಿ.
57. ಕಾರ್ಯನಿರತ ಮಹಿಳೆಯರ ಹಾಸ್ಟೆಲ್ (1989) ಬೆಟಗೇರಿ
    " (1989) ಹುಲಕೋಟಿ.
58. ಆಯ್.ಟಿ.ಆಯ್ (1990) ಬೆಟಗೇರಿ
59. ಕಾಟನ್‌ಸೇಲ್ ಸೊಸಾಯಿಟಿಯ ಜಿನ್ನಿಂಗ್ ಅಂಡ್ ಪ್ರೆಸ್ಸಿಂಗ್, ಗದಗ
60. ಎಚ್.ಸಿ.ಈ.ಎಸ್. ಸಂಯುಕ್ತ ಕಿರಿಯ ಮಹಾವಿದ್ಯಾಲಯ
61. ಕೃಷಿ ವಿಜ್ಞಾನ ಕೇಂದ್ರ
62. ಕೃಷ್ಣ ಕೃಷಿ 1989
63. ಶ್ರೀ ರಾಜೇಶ್ವರಿ ವಿದ್ಯಾನಿಕೇತನ 1983
64. 12 ತಾಂಡಾಗಳಲ್ಲಿ ಉಗ್ರಾಣ 1987
65. ದಿ. ಗದಗ ಕೋ-ಆಪ್ ಇಂಡಸ್ಟ್ರಿಯಲ್ ಎಸ್ಟೇಟ್ (1990)
66. ಸಾವಿರ ವಿದ್ಯುತ್ ಚಾಲಿತ ಮಗ್ಗಗಳ ವಸಾಹತು (1990)
67. ಹುಬ್ಬಳ್ಳಿ- ರೆಡ್ಡಿ ಲೀಗ - ಜನರಲ್ ಹಾಸ್ಟೆಲ್ (1963-64)
68. ಧಾರವಾಡ ಡಿಸ್ಟ್ರಿಕ್ಟ್ ಕೋ-ಆಪ್. ಮಾರ್ಕೆಟಿಂಗ್ ಫೆಡರೇಶನ್ (1959) ಹುಬ್ಬಳ್ಳಿ.

## ವಿಧಾನ ಮಂಡಲದ ಗ್ರಂಥಾಲಯ ಉಪ ಸಮಿತಿ

## (2001-2002)

ಶ್ರೀಯುತರುಗಳಾದ :

| | | |
|---|---|---|
| 1. | ಬಿ.ಬಿ. ಶಿವಪ್ಪ<br>ವಿಧಾನ ಸಭಾ ಸದಸ್ಯರು | ಅಧ್ಯಕ್ಷರು |
| 2. | ಗುತ್ತೇದಾರ ಸುಭಾಷ್ ರುಕ್ಮಯ್ಯ<br>ವಿಧಾನ ಸಭಾ ಸದಸ್ಯರು | ಸದಸ್ಯರು |
| 3. | ಬೆಲ್ಲದ ಚಂದ್ರಕಾಂತ ಗುರಪ್ಪ<br>ವಿಧಾನ ಸಭಾ ಸದಸ್ಯರು | ಸದಸ್ಯರು |
| 4. | ಕೆ.ಎನ್. ಸುಬ್ಬಾರೆಡ್ಡಿ,<br>ವಿಧಾನ ಸಭಾ ಸದಸ್ಯರು | ಸದಸ್ಯರು |
| 5. | ಉಮೇಶ್ ವಿ. ಕತ್ತಿ<br>ವಿಧಾನ ಸಭಾ ಸದಸ್ಯರು | ಸದಸ್ಯರು |
| 6. | ಡಾ : ಎಲ್. ಹನುಮಂತಯ್ಯ<br>ವಿಧಾನ ಪರಿಷತ್ತಿನ ಸದಸ್ಯರು | ಸದಸ್ಯರು |
| 7. | ಕೆ. ನಿರಂಜನ ನಾಯ್ಡು<br>ವಿಧಾನ ಪರಿಷತ್ತಿನ ಸದಸ್ಯರು | ಸದಸ್ಯರು |
| 8. | ಶ್ರೀಮತಿ ನಿರ್ಮಲ ವೆಂಕಟೇಶ<br>ವಿಧಾನ ಪರಿಷತ್ತಿನ ಸದಸ್ಯರು | ಸದಸ್ಯರು |

## ಪ್ರತಿಬಾವಂತ ಸಂಸದೀಯ ಪಟುಗಳ ಬದುಕು-ಬರಹ ಮಾಲಿಕೆ

### ಸಂಪಾದಕ ವರ್ಗ

ಶ್ರೀಯುತರುಗಳಾದ :

1. ಟಿ. ರಾಜಣ್ಣ
   ಕಾರ್ಯದರ್ಶಿ
2. ಎಸ್.ಬಿ. ಪಾಟೀಲ್
   ಅಪರ ಕಾರ್ಯದರ್ಶಿ
3. ಟಿ.ಎನ್. ಧ್ರುವಕುಮಾರ್
   ಜಂಟಿ ಕಾರ್ಯದರ್ಶಿ
4. ಡಾ|| ಎಸ್. ಚಂದ್ರಪ್ಪ
   ಸಂಶೋಧನಾಧಿಕಾರಿ
5. ಎಂ.ಕೆ. ವಿಶಾಲಾಕ್ಷಿ
   ಶಾಖಾಧಿಕಾರಿ

## ಈ ಸಚಿವಾಲಯದ ಪ್ರಕಟಣೆಗಳು

| ರಚಿತ ಪುಸ್ತಕಗಳು | ದರ ರೂ. | ಭಾಷಾಂತರ ಪುಸ್ತಕಗಳು | ದರ ರೂ. |
|---|---|---|---|
| 1. ಕೆ. ಹನುಮಂತಯ್ಯ | 20-00 | 1. ಡಾ : ಬಿ.ಆರ್. ಅಂಬೇಡ್ಕರ್ | 20-00 |
| 2. ಎಸ್. ನಿಜಲಿಂಗಪ್ಪ | 15-00 | 2. ಡಾ : ರಾಮಮನೋಹರ ಲೋಹಿಯಾ | 15-00 |
| 3. ಶಾಂತವೇರಿ ಗೋಪಾಲಗೌಡ | 15-00 | 3. ವಿ.ಕೆ. ಕೃಷ್ಣಮೆನನ್ | 20-00 |
| 4. ವೈಕುಂಠ ಬಾಳಿಗಾ | 20-00 | 4. ಡಾ : ಶ್ಯಾಂಪ್ರಸಾದ್ ಮುಖರ್ಜಿ | 20-00 |
| 5. ವೀರೇಂದ್ರ ಪಾಟೀಲ್ | 20-00 | 5. ಶೇಖ್ ಮಹಮದ್ ಅಬ್ದುಲ್ಲಾ | 15-00 |
| 6. ಕಡಿದಾಳ್ ಮಂಜಪ್ಪ | 15-00 | 6. ಡಾ : ರಾಜೇಂದ್ರ ಪ್ರಸಾದ್ | 20-00 |
| 7. ಜಿ.ವಿ. ಹಳ್ಳಿಕೇರಿ | 15-00 | 7. ಭೂಪೇಶ್ ಗುಪ್ತ | 20-00 |
| 8. ಶ್ರೀಮತಿ ಕೆ.ಎಸ್. ನಾಗರತ್ನಮ್ಮ | 15-00 | 8. ಅನಂತಶಯನಂ ಅಯ್ಯಂಗಾರ್ | 20-00 |
| 9. ಡಿ. ದೇವರಾಜ ಅರಸು | 15-00 | 9. ಶ್ರೀಮತಿ ರಾಜಕುಮಾರಿ ಅಮೃತಕೌರ | 20-00 |
| 10. ಕೆ.ಟಿ. ಭಾಷ್ಯಂ | 15-00 | 10. ಡಾ : ಚಿಂತಾಮನ್ ಡಿ. ದೇಶ್‌ಮುಖ್ | 20-00 |
| 11. ಟಿ.ಸಿದ್ದಲಿಂಗಯ್ಯ | 20-00 | 11. ಪನಂಪಿಲ್ಲಿ ಗೋವಿಂದ ಮೆನನ್ | 15-00 |
| 12. ಕೆ. ಪುಟ್ಟಸ್ವಾಮಿ | 15-00 | 12. ಜೈ ಸುಖಲಾಲ್ ಹಾಥಿ | 15.00 |
| 13. ಜಗಳೂರು ಇಮಾಂ | 15-00 | 13. ಎಸ್.ಎಂ. ಜೋಷಿ | 15.00 |
| 14. ಕೆ.ಸಿ. ರೆಡ್ಡಿ | 20-00 | | |
| 15. ಬಿ.ವಿ. ಕಕ್ಕಿಲಾಯ | 20-00 | | |
| 16. ಜೆ.ಬಿ. ಮಲ್ಲಾರಾಧ್ಯ | 15.00 | | |
| 17. ಹೆಚ್.ಎಂ. ಚನ್ನ ಬಸಪ್ಪ | 20.00 | | |
| 18. ಎಂ. ನಾಗಪ್ಪ | 15.00 | | |
| 19. ಬಿ. ರಾಚಯ್ಯ | 20.00 | | |
| 20. ಗಂಗಾಧರ ನಮೋಶಿ | 15.00 | | |

ಮುದ್ರಕರು:- ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳು,
ಸಶಾಮು.ತುಮಕೂರು, ಕಾಸೂ. 188 - 2,000 ಪುಸ್ತಕಗಳು ದಿ: 05-02-2003.